# ಅಭಿವೃದ್ಧಿ ಮತ್ತು ದೇವದಾಸಿಯರು: ಸಮಾಜೋ-ಆರ್ಥಿಕ ವಿಶ್ಲೇಷಣೆ

## (ಕೊಪ್ಪಳ ಜಿಲ್ಲೆ ಅನುಲಕ್ಷಿಸಿ)

ಸಮಾಜ ಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಚಂದ್ರಶೇಖರ ಹೆಚ್.ಆರ್.

ಮಾರ್ಗದರ್ಶಕರು
ಡಾ. ಸಿದ್ಧಗಂಗಮ್ಮ
ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಅಭಿವೃದ್ಧಿ ಮತ್ತು ದೇವದಾಸಿಯರು: ಸಮಾಜೋ-ಆರ್ಥಿಕ ವಿಶ್ಲೇಷಣೆ

(ಕೊಪ್ಪಳ ಜಿಲ್ಲೆ ಅನುಲಕ್ಷಿಸಿ)



ಸಮಾಜ ಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
**ಚಂದ್ರಶೇಖರ ಹೆಚ್.ಆರ್.**

ಮಾರ್ಗದರ್ಶಕರು
**ಡಾ. ಸಿದ್ಧಗಂಗಮ್ಮ**
ಪ್ರಾಧ್ಯಾಪಕರು




ಸಮಾಜ ವಿಜ್ಞಾನಗಳ ನಿಕಾಯ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಚಂದ್ರಶೇಖರ ಹೆಚ್.ಆರ್.** ಅವರು **ಅಭಿವೃದ್ಧಿ ಮತ್ತು ದೇವದಾಸಿಯರು: ಸಮಾಜೋ–ಆರ್ಥಿಕ ವಿಶ್ಲೇಷಣೆ** (ಕೊಪ್ಪಳ ಜಿಲ್ಲೆ ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 14/8/2018
ಸ್ಥಳ : ವಿದ್ಯಾರಣ್ಯ

(ಡಾ. ಸಿದ್ಧಗಂಗಮ್ಮ)
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**ಅಭಿವೃದ್ಧಿ ಮತ್ತು ದೇವದಾಸಿಯರು: ಸಮಾಜೋ-ಆರ್ಥಿಕ ವಿಶ್ಲೇಷಣೆ** (ಕೊಪ್ಪಳ ಜಿಲ್ಲೆ ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಸಿದ್ಧಗಂಗಮ್ಮ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 14/8/2018
ಸ್ಥಳ : ವಿದ್ಯಾರಣ್ಯ

**(ಚಂದ್ರಶೇಖರ ಹೆಚ್.ಆರ್.)**
ಸಂಶೋಧಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿಶಿಷ್ಟಗಳು

## ಕೋಷ್ಟಕಗಳು

# ಪರಿವಿಡಿ

# ಅಧ್ಯಾಯ ೧

# ಪ್ರಸ್ತಾವನೆ

ಅಧ್ಯಾಯ ಒಂದು

# ಪ್ರಸ್ತಾವನೆ

## ೧.೧. ಪೀಠಿಕೆ

ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದ ಅಭಿವೃದ್ಧಿಯ ಕಲ್ಪನೆಯಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಹಾಗೂ ಶೈಕ್ಷಣಿಕ ಸ್ವರೂಪಗಳೆಲ್ಲವು ವಿವಿಧ ತೆರವಾದ ಮುಖಗಳನ್ನು ಹೊಂದಿದೆ. ಇಲ್ಲಿ ಸಾಮಾಜಿಕ, ಹಾಗೂ ಆರ್ಥಿಕ ವ್ಯವಸ್ಥೆ ಒಂದು ಜನರನ್ನು ಮೇಲೆಕ್ಕೇರಿಸಿ, ಹಾಗೇ ಕೆಲವರನ್ನು ಪಾತಾಳದ ಅಡಿಯಲ್ಲಿ ಇರಿಸಲಾಗಿದೆ. ಇಂತಹ ಪ್ರಕ್ರಿಯೆಯು ಜಾತಿ ವರ್ಗಗಳ ಆದಾರದಡಿಯಲ್ಲಿ ಮಾತ್ರ ಸಾದ್ಯ ಎಂಬುದು ಎಲ್ಲರೂ ಗ್ರಹಿಸಿರುವ ವಿಚಾರ. ಹೊಸ ಪೀಳಿಗೆಗೆ ಬೇದ ಭಾವ ಎಂಬ ಮಾರಾಣಾಂತಿಕ ತಾರತಮ್ಯವನ್ನು ಸಾಮಾಜಿಕ ವ್ಯವಸ್ಥೆ ತಂದೊಡ್ಡಿದೆ ಅಂದರೆ ಸಮಾಜದ ಉನ್ನತ ಸ್ಥಾನ ಮಾನಗಳನ್ನು ಹೊಂದಿರುವ ಸವರ್ಣೀಯ ಜಾತಿ ಹಾಗೂ ಅಸ್ಪೃಶ್ಯತೆಯಿಂದ ಪ್ರತಿ ದಿನ ಕಳಂಕಿತ ಜೀವನ ನಡೆಸುತ್ತಿರುವ ದಲಿತ, ಆದಿವಾಸಿ ಹಾಗೂ ಇವರಿಗೆ ಸಮಾನಾದಂತಹ ಹಿಂದುಳಿದ ಜಾತಿಗಳಲ್ಲಿನ ಹೊಂದಿಕೆಯಿಲ್ಲಿದ್ದಂತಹ ವ್ಯತ್ಯಾಸವನ್ನು ಕಾಣಬಹುದು. ಭಾರತೀಯ ಸಮಾಜದಲ್ಲಿ ಜಾತಿ ವ್ಯವಸ್ಥೆ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿ ಬಂದಿದೆ. ಒಂದೊಂದು ಗ್ರಾಮ ಅಖಂಡವಾದ ಮತ್ತು ಸಾಮಾನ್ಯವಾದ ಒಂದೊಂದು ಸಮಾಜವಾಗಿ ಕಾಣುವುದರ ಜೊತೆಗೆ ಅದರಲ್ಲಿ ವಿವಿಧ ಜಾತಿಗಳು ವಿವಿಧ ರೀತಿಯ ವೃತ್ತಿಗಳನ್ನು ಅಧಾರಿಸಿ ತಮ್ಮದೇ ಆದ ಪ್ರತ್ಯೇಕ ಜೀವನ ಪದ್ಧತಿಯನ್ನು ರೂಢಿಸಿಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಜಾತಿ ವರ್ಗಗಳು ತನ್ನದೇ ಆದ ಸಾಂಸ್ಕೃತಿಕ, ಐತಿಹಾಸಿಕ, ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸ್ವರೂಪಗಳನ್ನು ಪಾರಂಪರಿಕವಾಗಿ ಉಳಿಸಿಕೊಂಡು ಬಂದಿದೆ. ಉನ್ನತ ಜಾತಿಗಳು ತಾವು ನಡೆಸಿಕೊಂಡು ಬಂದಂತಹ ವಿಧಿ-ವಿಧಾನಗಳನ್ನು ಅಷ್ಟು ಸುಲಭವಾಗಿ ನಿಲ್ಲಿಸುವಂತಹ ಮನೋಭಾವನೆ ಹೊಂದಿಲ್ಲವಾದ್ದರಿಂದ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಕೆಳಜಾತಿಗಳಿಂದ ಸೇವೆಗಳನ್ನು ಆಪೇಕ್ಷಿಸುತ್ತಲೇ ಬಂದಿರುತ್ತಾರೆ. ಅದ್ದರಿಂದ ಭಾರತೀಯ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ

ಕೆಲವು ವೃತ್ತಿಗಳು ವಂಶಪರಂಪಾರಿಕವಾಗಿ ಬಂದಿದೆ. ಪ್ರಾಚೀನ ಕಾಲದಿಂದ ಅಧುನಿಕ ಕಾಲ ಮತ್ತು ಅಭಿವೃದ್ಧಿ ಹೊಂದುತ್ತಿರುವ ಪ್ರಕ್ರಿಯೆಯ ಸಮಯದಲ್ಲಿ ದೇವದಾಸಿಯರ ಸಾಂಸ್ಕೃತಿಕ ವೃತ್ತಿಯ ಚಿತ್ರಣವನ್ನು ಅರ್ಥ ಮಾಡಿಕೊಳ್ಳಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಈ ಅಧ್ಯಯನದ ಸ್ಪಷ್ಟವಾದ ಮತ್ತು ವಿಶಾಲವಾದ ಉದ್ದೇಶವೇನೆಂದರೆ ಅಧುನಿಕತೆಯ ಮತ್ತು ಅಭಿವೃದ್ಧಿಯ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳುವುದರ ಜೊತೆಗೆ ದೇವದಾಸಿಯರ ಸಮಗ್ರ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಅಧುನಿಕ ಪ್ರಕ್ರಿಯೆಯ ಸಂದರ್ಭದಲ್ಲಿ ಅಧುನಿಕ ಶಿಕ್ಷಣ, ತಂತ್ರಜ್ಞಾನ, ಪಶ್ಚಿಮದ ಅಭಿವೃದ್ಧಿಯ ಅನುಕರಣೆ ಮುಂತಾದವುಗಳ ನಡುವೆ ಭಾರತದಂತಹ ಸಾಮಾಜಿಕ ಅಸಮಾನತೆಯಿರುವ ದೇಶದಲ್ಲಿ ಜಾತಿ, ವರ್ಗ ಮತ್ತು ಸಾಮಾಜಿಕ ಲಿಂಗತ್ವ ಮುಂತಾದ ಸ್ತರಗಳಲ್ಲಿ ಮತ್ತು ಅವುಗಳ ತಾರತಮ್ಯದ ಬದುಕಿನಲ್ಲಿ ಸಮಾಜದ ಕಟ್ಟಕಡೆಯಲ್ಲಿರುವ ದೇವದಾಸಿಯರ ಸಮುದಾಯದ ಸಮಕಾಲೀನ ಪರಿಸ್ಥಿತಿಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಇನ್ನೂ ಸಹ ಜೀವಂತವಾಗಿರುವ ಈ ಅನಿಷ್ಟ ಪದ್ಧತಿಯಿಂದ ನೊಂದು-ಬೆಂದಿರುವ ಸಮುದಾಯವು ಸಹ ಎಲ್ಲರಂತೆಯೇ ಮನುಷ್ಯರು ಎಂಬುದನ್ನು ಅರ್ಥ ಮಾಡಿಕೊಳ್ಳುವ, ಅವರ ಅಸ್ಮಿತೆಯ ಸ್ಥಾನಮಾನ ಮತ್ತು ಅವರ ನಿಜ ಜೀವನವನ್ನು ತಿಳಿದುಕೊಂಡು ಅವರ ನೈಜ ಬದುಕನ್ನು ವಿಶ್ಲೇಷಿಸುವ ಹಾಗೂ ಬೆಳಕಿಗೆ ತರುವ ತುರ್ತು ಅಗತ್ಯವಿದೆ. ಕರ್ನಾಟಕ ರಾಜ್ಯದಲ್ಲಿ ಹಿಂದುಳಿದಿರುವ ಹೈದರಾಬಾದ್-ಕರ್ನಾಟಕದ ಜಿಲ್ಲೆಗಳಲ್ಲಿ ಒಂದಾದ ಕೊಪ್ಪಳ ಜಿಲ್ಲೆಯಲ್ಲಿ ಈ ಕ್ರೂರ ಪದ್ಧತಿ ಇನ್ನೂ ಜೀವಂತವಾಗಿರುವುದರಿಂದ ಅಲ್ಲಿನ ಕೆಲವು ತಳಸಮುದಾಯಗಳಲ್ಲಿ ಶಾಪವಾಗಿ ಕಾಡುತ್ತಿರುವ ಅನಿಷ್ಟ ಪದ್ಧತಿಯ ಬಗ್ಗೆ ತಿಳಿಯುವ ಮತ್ತು ತಿಳಿಸುವ ಅಗತ್ಯವಿರುವುದರಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ಶೀರ್ಷಿಕೆ "ಅಭಿವೃದ್ಧಿ ಮತ್ತು ದೇವದಾಸಿಯರು : ಸಮಾಜೋ-ಆರ್ಥಿಕ ವಿಶ್ಲೇಷಣೆ: ಕೊಪ್ಪಳ ಜಿಲ್ಲೆ ಅನುಲಕ್ಷಿಸಿ" ಎಂಬುದಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯರ ಸಂಖ್ಯೆ ಅಧಿಕವಾಗಿರುವುದರಿಂದ ಹಾಗೂ ಹೈದರಾಬಾದ್ ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿರುವ ಈ ಜಿಲ್ಲೆಯ ಅಧ್ಯಯನವು ಸಹ ಅಗತ್ಯವಿರುವುದರಿಂದ ಈ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಸಮಗ್ರ ವಿಚಾರವನ್ನು ಅಭಿವೃದ್ಧಿ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಅವರ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ಮತ್ತು ದೇವದಾಸಿಯರ ಕುರಿತ ಪ್ರಸ್ತುತ ಸತ್ಯಾಸತ್ಯತೆಯನ್ನು ಪ್ರತಿಪಾದಿಸಲು ಈ ಅಧ್ಯಯನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನದ ಪ್ರಸ್ತಾವನೆಯಲ್ಲಿ ಅಧ್ಯಯನ ವಸ್ತುವಿನ ಶೀರ್ಷಿಕೆ, ಪೀಠಿಕೆ, ಅಭಿವೃದ್ಧಿ, ಮಹಿಳೆ ಮತ್ತು ದೇವದಾಸಿಯರ ಕುರಿತ ಕೆಲವು ಅಧ್ಯಯನಗಳ ಸ್ಥಿತಿ ಮತ್ತು ಪರಿಕಲ್ಪನೆಗಳನ್ನು ಚರ್ಚಿಸಲಾಗಿದೆ. ಈ ಅಧ್ಯಯನಕ್ಕೆ ಪ್ರೇರಕವಾದ ಅಂಶಗಳು ಅಂದರೆ ಈ ವಿಷಯದ ಅಧ್ಯಯನವನ್ನೇ

ಏಕೆ ಮಾಡಲಾಗುತ್ತಿದೆ ಎಂಬುದಕ್ಕೆ ಕೆಲವು ವೈಚಾರಿಕ ಕಾರಣಗಳನ್ನು ನೀಡಲಾಗಿದೆ. ಈಗಾಗಲೇ ನಡೆದಿರುವ ಅಧ್ಯಯನಗಳ ಸಾಹಿತ್ಯ ಸಮೀಕ್ಷೆ ಮತ್ತು ವಿಮರ್ಶೆಗೆ ಪೂರಕವಾದಂತಹ ಸಮಸ್ಯೀಕರಣ, ಸಂಶೋಧನಾ ಪ್ರಶ್ನೆಗಳು ಇದಕ್ಕೆ ಪೂರಕವಾದ ಪ್ರಮುಖ ಉದ್ದೇಶಗಳು, ಅಧ್ಯಯನದ ಉದ್ದೇಶಗಳಿಗನು ಗುಣವಾಗಿ ಅಧ್ಯಯನದ ವೈಧಾನಿಕತೆ ಮತ್ತು ಒಂದೊಂದು ಉದ್ದೇಶಗಳಿಗೆ ಬೇಕಾದಂತಹ ಆಧಾರಗಳ ಮೂಲಕ ಮತ್ತು ಅದರ ಸಂಕ್ಷಿಪ್ತ ವಿವರಣೆ ಕೊಡಲಾಗಿದೆ. ಅಧ್ಯಯನದ ವ್ಯಾಪ್ತಿ ಮತ್ತು ಮಿತಿ, ಅಧ್ಯಾಯಗಳ ವಿನ್ಯಾಸ ಮತ್ತು ಸ್ಥೂಲ ವಿವರಣೆಯನ್ನು ರೂಪಿಸಲಾಗಿದೆ. ಪ್ರಸ್ತಾವನೆಗೆ ಬಳಸಿದ ಕೊನೆ ಟಿಪ್ಪಣಿಗಳ ಮಾಹಿತಿ ಹಾಗೂ ಸಂಶೋಧನಾ ಪ್ರಸ್ತಾವನೆಗೆ ಬೇಕಾದಂತಹ ಮೂಲ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

## ೧.೨. ಅಧ್ಯಯನದ ಪ್ರೇರಕಾಂಶಗಳು ಮತ್ತು ಅಗತ್ಯತೆ

ಪ್ರಸ್ತುತ ಅಧ್ಯಯನಕ್ಕೆ ಮುಖ್ಯವಾದ ಪ್ರೇರಕಾಂಶಗಳೆಂದರೆ ದೇವದಾಸಿಯರ ಸ್ಥಿತಿಯನ್ನು ಹಲವಾರು ಸಂಶೋಧಕರು ಅಧ್ಯಯನ ಮಾಡಿದ್ದರೂ, ಅವರೆಲ್ಲರೂ ಸಹ ಅಯಾ ಕಾಲಘಟ್ಟದ ಪರಿಸ್ಥಿತಿಯನ್ನು ತಮ್ಮ ಅಧ್ಯಯನಗಳಲ್ಲಿ ಉಲ್ಲೇಖಿಸಿದ್ದಾರೆ. ಪ್ರಸ್ತುತದಲ್ಲಿ ಅಭಿವೃದ್ಧಿಯ ಪರಿಕಲ್ಪನೆ ಮತ್ತು ದೇವದಾಸಿಯರ ಸಮಗ್ರ ಚಿತ್ರಣವನ್ನು ಅಧ್ಯಯನ ಮಾಡುವ ಉದ್ದೇಶದಿಂದ ಅಭಿವೃದ್ಧಿ ಪರಿಕಲ್ಪನೆಯನ್ನು ಬಹುಶಿಸ್ತಿನ ನೆಲೆಯಲ್ಲಿ ಅಧ್ಯಯನದ ಮಿತಿಯನ್ನು ಗಮನದಲ್ಲಿಟ್ಟುಕೊಂಡು ಅರ್ಥ ಮಾಡಿಕೊಳ್ಳುವುದು ಮತ್ತು ಅದರ ಹಿನ್ನಲೆಯಲ್ಲಿ ದೇವದಾಸಿಯರ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದು. ಅಂದರೆ ದೇವದಾಸಿಯರು ಸಮಕಾಲೀನ ಕಾಲಘಟ್ಟದಲ್ಲಿ ಯಾವ ರೀತಿ ತಮ್ಮ ಜೀವನವನ್ನು ಕಟ್ಟಿಕೊಂಡಿದ್ದಾರೆ ಎಂಬುದನ್ನು ವಿಶ್ಲೇಷಣಾತ್ಮಕವಾಗಿ ನೋಡುವ ಅಗತ್ಯವಿರು ವುದರಿಂದ ಈ ಅಧ್ಯಯನದ ವಿಷಯದ ಅಯ್ಕೆಯಲ್ಲಿ ಪ್ರೇರಣೆಯಾಗಿದೆ. ಸಂಶೋಧಕನು ಸಮಾಜಕಾರ್ಯದ ವಿದ್ಯಾರ್ಥಿಯಾಗಿದ್ದು, ತನ್ನ ಕ್ಷೇತ್ರಕಾರ್ಯದಲ್ಲಿ ತೊಡಗಿಕೊಂಡಿದ್ದಾಗ ದೇವದಾಸಿ ಯರ ಚರ್ಚೆ ಪುನರಾವರ್ತನೆ ರೀತಿಯಲ್ಲಿ ಚರ್ಚಿಸಲಾಗಿತ್ತು. ಆದರೆ ವೈಯಕ್ತಿಕವಾಗಿ ಈ ದೇವದಾಸಿಯರ ಬಗ್ಗೆ ಹೆಚ್ಚಿನ ಮಾಹಿತಿಯು ಗೊತ್ತಿಲ್ಲಾವಾದ್ದರಿಂದ ಅದರ ಬಗ್ಗೆ ಆಸಕ್ತಿಯನ್ನು ತೋರಿರಲಿಲ್ಲ. ಆದರೆ ದೇವದಾಸಿಯರೆಲ್ಲಾ ಹೆಚ್ಚಿನದಾಗಿ ದಲಿತ ಸಮುದಾಯದ ಹಿನ್ನೆಲೆಯಿಂದ ಬಂದವರೆಂದು ಗೊತ್ತಾದಾಗ ತನ್ನ ಆಸಕ್ತಿಯು ಇಮ್ಮಡಿಯಾಯಿತು. ಏಕೆಂದರೆ ದಲಿತರ ಹಕ್ಕು ಮತ್ತು ಅವರ ಅಭಿವೃದ್ಧಿಯ ಬಗ್ಗೆ ಕೆಲಸ ಮಾಡುತ್ತಿದ್ದರಿಂದ ಈ ವಿಷಯದ ಬಗ್ಗೆ ಸ್ವಲ್ಪ ಆಸಕ್ತಿ ಬಂದಿತು. ಕೆಲವು ದಲಿತ ನಾಯಕರ ಜೊತೆ ಚರ್ಚೆ, ದೇವದಾಸಿಯರ ಭೇಟಿ ಹಾಗೂ ಕೆಲವು ದಲಿತ ಕಾರ್ಯಕರ್ತರು ದೇವದಾಸಿಯರ ಬಗ್ಗೆ ಕೆಲಸ ಮಾಡುತಿದ್ದರಿಂದ ಅವರ ನಿರಂತರ ಸಂಪರ್ಕದಿಂದ ಆ ವಿಚಾರದ ಬಗ್ಗೆ ತಿಳಿಯುವ ಹಂಬಲ ಹೆಚ್ಚಾಯಿತು. ನಂತರ ರಾಷ್ಟ್ರಮಟ್ಟದ ಸಂಸ್ಥೆಯಾಗಿದ್ದ ದಲಿತ್ ಫೌಂಡೇಷನ್ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸಲು ಅವಕಾಶ ಸಿಕ್ಕಿದ ಕಾರಣ ದೇವದಾಸಿಯರ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಮತ್ತು ಅವರೊಂದಿಗೆ ಕೆಲಸ ಮಾಡುವ ಅವಕಾಶ

ಮಾಡಿಕೊಟ್ಟಿತು. ಅದ್ದರಿಂದ ಈ ವಿಚಾರದ ಬಗ್ಗೆ ಅರ್ಥ ಮಾಡಿಕೊಳ್ಳುವುದು ಮತ್ತು ದೇವದಾಸಿಯರನ್ನು ಸಂಘಟಿಸುವುದು, ಅವರ ಹಕ್ಕುಗಳ ಮೂಲಕ ಸರ್ಕಾರದಿಂದ ಸಿಗುವ ಸೌಲಭ್ಯಗಳನ್ನು ದೊರಕಿಸಿಕೊಡುವ ಕೆಲಸದಲ್ಲಿ ತೊಡಗಿಸಿಕೊಳ್ಳಲಾಯಿತು. ನಂತರ ನನ್ನ ಅಲೋಚನೆಗೆ ಬಂದದ್ದು ಈ ವಿಷಯದ ಬಗ್ಗೆ ದೀರ್ಘ ಅಧ್ಯಯನವನ್ನು ಕೈಗೊಳ್ಳಬೇಕು ಎಂದು ತೀರ್ಮಾನಿಸಿಕೊಂಡ ನಂತರ ಇದನ್ನು ಅನೌಪಚಾರಿಕವಾಗಿ ಅಧ್ಯಯನ ಮಾಡುವುದಕ್ಕಿಂತ ಶೈಕ್ಷಣಿಕವಾಗಿ ಅಧ್ಯಯನ ಮಾಡಬೇಕೆನ್ನಿಸಿತು. ಹಾಗೆಯೇ ಇನ್ನೊಂದು ತಾಂತ್ರಿಕವಾದ ಆಸಕ್ತಿಯೆಂದರೆ ಈ ವಿಷಯದ ಮೇಲೆ ಸಾಕಷ್ಟು ಅಧ್ಯಯನಗಳು ನಡೆದಿವೆಯಾದರೂ ಅವು ಸಾಹಿತ್ಯ, ಕಲೆ, ಜಾನಪದ, ಪರಂಪರೆ ಇತ್ಯಾದಿ ಹಿನ್ನಲೆಯಲ್ಲಿ ಹೆಚ್ಚಾಗಿ ಅಧ್ಯಯನಗಳಾಗಿವೆ. ಹಾಗೆ ಸಮಾಜ ವಿಜ್ಞಾನದ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಿರುವುದು ಅತಿವಿರಳ. ಆದರಲ್ಲೂ ಕೆಲವು ಪ್ರಮುಖ ಅಧ್ಯಯನಕಾರರು ಸಂಶೋಧನೆ ಮಾಡಿದ್ದಾರೆ, ವಿಭಿನ್ನ ರೀತಿಯ ವಿಚಾರಗಳನ್ನು ಕಂಡುಕೊಂಡಿದ್ದಾರೆ. ಪ್ರಸ್ತುತದಲ್ಲಿ ನನ್ನ ವೈಯಕ್ತಿಕ ಆಸಕ್ತಿಯೆಂದರೆ ಅಭಿವೃದ್ಧಿ ಮತ್ತು ಅದರ ಹಿನ್ನೆಲೆಯಲ್ಲಿ ನೋಡುವ ಒಂದು ವಿಧಾನ ಈಗಲೂ ಈ ಪದ್ಧತಿ ಜೀವಂತವಾಗಿದೆ ಮತ್ತು ದೇವದಾಸಿಯರೆಂದರೆ ಯಾರು? ಸರ್ಕಾರದ ಪಾತ್ರ, ಇವರ ಪರವಾಗಿರುವ ಕಾಯ್ದೆ-ಕಾನೂನುಗಳೇನು ಮತ್ತು ಈ ಅನಿಷ್ಟ ಪದ್ಧತಿಯ ನಿಯಂತ್ರಣದ ಕೆಲಸ ಕಾರ್ಯಗಳೇನು ಎಂಬುದನ್ನು ತಿಳಿಯಲು ಮತ್ತು ದೇವದಾಸಿಯರ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವ ಸಲುವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೩. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ದೇವದಾಸಿಯರ ಸ್ಥಿತಿಯನ್ನು ಅಭಿವೃದ್ಧಿಯ ನೆಲೆಯಲ್ಲಿ ಮತ್ತು ಪ್ರಚಲಿತದಲ್ಲಿರುವ ಸಮಸ್ಯೆಗಳೇನು, ಅವರ ಬದುಕು, ಮಕ್ಕಳ ಭವಿಷ್ಯ, ಸಾಮಾಜಿಕ ಸ್ಥಾನಮಾನ, ಈ ಪದ್ಧತಿಯ ಜೀವಂತಿಕೆಯ ರಾಜಕಾರಣ, ಸರ್ಕಾರದ ಕಾಯ್ದೆ ಮತ್ತು ದೋರಣೆಗಳೇನು? ಮತ್ತು ಪದ್ಧತಿಯ ನಿಯಂತ್ರಣದ ಕಾರ್ಯದಲ್ಲಿ ಸರ್ಕಾರದ ಪಾತ್ರ ಏನಿದೆ ಮತ್ತು ಎಷ್ಟಿದೆ? ಎಂಬುದನ್ನು ತಿಳಿಯುವಲ್ಲಿ ಈ ಅಧ್ಯಯನವು ತುಂಬಾ ಸಹಕಾರಿಯಾಗುತ್ತದೆ. ದೇವದಾಸಿಯರ ಅಭಿವೃದ್ಧಿಯು ಅವರ ವೈಯಕ್ತಿಕ ಹಿತಾಸಕ್ತಿಯನ್ನು ಒಳಗೊಳ್ಳುವಂತಹ ಕಾರ್ಯ ಕ್ರಮಗಳನ್ನು ರೂಪಿಸಲು, ದೇವದಾಸಿಯರ ಪುನರ್ವಸತಿ ಕಾರ್ಯಕ್ರಮಗಳ ಪ್ರಗತಿ, ವೈಫಲ್ಯ ಮತ್ತು ಅದಕ್ಕೆ ಬೇಕಾದಂತಹ ಉತ್ತಮ ಸಲಹೆ ಸೂಚನೆಗಳು, ದೇವದಾಸಿ ಕೇಂದ್ರಿತ ನಿರ್ದಿಷ್ಟ ಕಾರ್ಯಕ್ರಮಗಳಾದಾಗ ಮಾತ್ರ ಅವರು ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಗುತ್ತದೆಯೆ? ಇಂತಹ ಸಾಮಾಜಿಕ ಪಿಡುಗುಗಳ ಸಮಸ್ಯೆಯನ್ನು ಚರ್ಚಿಸುವಲ್ಲಿ ಮತ್ತು ಸಮಸ್ಯೆಯನ್ನು ಬಗೆಹರಿಸುವಲ್ಲಿ ಇಂತಹ ಅಧ್ಯಯನಗಳು ಸಹಕಾರಿಯಾಗುತ್ತವೆ. ಮುಂದಿನ ಪೀಳಿಗೆಯವರಿಗೆ ಈ ತರದ ಅಮಾನವೀಯ ಪದ್ಧತಿಯ ಕುರಿತು ಮಾಹಿತಿಯನ್ನು ಒದಗಿಸುತ್ತದೆ. ಈ ಶೈಕ್ಷಣಿಕ ಅಧ್ಯಯನದಿಂದ ಉನ್ನತ ಶಿಕ್ಷಣದ ಒಂದು ಪದವಿಯ ಅವಕಾಶವೂ ಸಹ ದೊರೆಯುತ್ತದೆ. ಒಟ್ಟಾರೆ ಯಾವುದೇ ಅಧ್ಯಯನವು

ತನ್ನ ಮಿತಿಯನ್ನು ಒಳಗೊಂಡಂತೆ ಅದರ ಮಹತ್ವವು ಹೆಚ್ಚಾಗಿರುವುದನ್ನು ಗಮನಿಸ ಬಹುದು. ಕೊಪ್ಪಳ ಜಿಲ್ಲೆಯ ಮತ್ತು ಉಳಿದ ಜಿಲ್ಲೆಯಲ್ಲಿರುವ ದೇವದಾಸಿಯರಿಗೆ ಯೋಜನೆಗಳನ್ನು ಮಾಡುವಲ್ಲಿ ಈ ಅಧ್ಯಯನವು ಸಹಕಾರಿಯಾಗಬಲ್ಲದು. ಸರ್ಕಾರ ಮತ್ತು ಸಂಘ-ಸಂಸ್ಥೆಗಳು ರಾಜ್ಯವ್ಯಾಪ್ತಿಯಲ್ಲಿ ದೇವದಾಸಿಯರ ಕುರಿತ ಸಮಗ್ರ ಅಧ್ಯಯನಕ್ಕೆ ಮತ್ತು ಕಾರ್ಯಕ್ರಮ ರೂಪಿಸಲು ಅನುಕೂಲವಾಗುತ್ತದೆ. ಮತ್ತು ಇದರ ಮುಂದುವರಿಕೆಯ ಚರ್ಚೆ, ಅಧ್ಯಯನ ಮತ್ತು ಸಮಸ್ಯೆಯನ್ನು ಅರಿತು ಬಗೆಹರಿಸುವ ಕ್ರಮವನ್ನು ಸಹ ಮುಂದೆ ಮಾಡ ಬೇಕಾದರೆ ಅಧ್ಯಯನವು ಆಕರ ಮತ್ತು ಸೂಚಿಯಾಗಬಹುದು.

### ೧.೪. ಅಧ್ಯಯನದ ವಿಷಯದ ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳು

ಪ್ರಪಂಚದ ಇತರ ರಾಷ್ಟ್ರಗಳಂತೆ ಭಾರತದಲ್ಲಿಯೂ ಸಹ ಅಭಿವೃದ್ಧಿ ಎಂಬುದು ಸಮಾನವಾಗಿ ಎಲ್ಲಾ ಪ್ರದೇಶಗಳಲ್ಲಿ ಏಕರೂಪತೆಯನ್ನು ಕಾಯ್ದುಕೊಂಡಿಲ್ಲ. ಕರ್ನಾಟಕದ ಅಭಿವೃದ್ಧಿಯಲ್ಲಿ ಅದರಲ್ಲಿಯೂ ಮಾನವ ಅಭಿವೃದ್ಧಿಯಲ್ಲಿ ಪ್ರದೇಶವಾರು, ಜಿಲ್ಲಾವಾರು ಅಂತರ, ಅಸಮಾನತೆಗಳಿವೆ. ಯೋಜನೆಗಳ ಹೊರತಾಗಿಯೂ ರಾಜ್ಯದಲ್ಲಿ ಶಿಕ್ಷಣ, ಆರೋಗ್ಯ, ಸೌಲಭ್ಯಗಳ, ಮೂಲಭೂತ ಸೌಕರ್ಯಗಳಲ್ಲಿಯ ಅಸಮತೋಲನದಿಂದಾಗಿ ಇನ್ನೂ ಪ್ರಾದೇಶಿಕ ಅಸಮಾನತೆಗಳು ಉಳಿದುಕೊಂಡು ಬಂದಿವೆ. ಇಂದು ಜಗತ್ತಿನಾದ್ಯಂತ ಅಭಿವೃದ್ಧಿಯನ್ನು ಮಾನವ ಅಭಿವೃದ್ಧಿಯ ನೆಲೆಯಲ್ಲಿ ನಿರ್ವಚಿಸ ಲಾಗುತ್ತಿದೆ. ಮಾನವ ಅಭಿವೃದ್ಧಿಯ ವಿಚಾರ ಪ್ರಣಾಳಿಕೆಯ ಮೂಲ ಮತ್ತು ಬೆಳವಣಿಗೆಯನ್ನು ಅರಿಯಬೇಕಾದರೆ ಈ ಹಿಂದೆ ಅಸ್ತಿತ್ವದಲ್ಲಿದ್ದ ಅಭಿವೃದ್ಧಿ ಮಾದರಿಗಳ ಅರಿವು ಅತ್ಯವಶ್ಯಕವಾಗಿರುತ್ತದೆ. 'ಅಭಿವೃದ್ಧಿ' ಅರ್ಥವನ್ನು ವಿಶ್ಲೇಷಿಸುವುದು ಒಂದು ಸಂಕೀರ್ಣವಾದ ಸಂಗತಿ. "ಅಭಿವೃದ್ಧಿ ಎಂಬ ಪದ ಏನನ್ನು ತಿಳಿಸುತ್ತಿದೆ ಎಂಬುವುದರ ಬಗ್ಗೆ ಗಂಭೀರ ಚರ್ಚೆ ನಡೆಯುತ್ತಿದೆ. ಈ ಪದ ಹಲವಾರು ಮೌಲ್ಯ ನಿರ್ಣಯಗಳನ್ನು ಒಳಗೊಂಡಿರುವುದರಿಂದ ಚರ್ಚೆಯನ್ನು ಮುಕ್ತಾಯ ಗೊಳಿಸುವುದು ಕಷ್ಟಕರವಾಗಿದೆ." 'ಅಭಿವೃದ್ಧಿ' 'ಆರ್ಥಿಕ ಬೆಳವಣಿಗೆಗಳ ಬಗೆಗಿನ ಕಲ್ಪನೆಗಳು ಹಲವಾರು ಶತಮಾನಗಳಿಂದ ಇನ್ನೂ ವಿಕಾಸಗೊಳ್ಳುತ್ತಲೇ ನಡೆದಿವೆ. ಅಭಿವೃದ್ಧಿ ಕುರಿತಾದ ಮೀಮಾಂಸೆಗಳು 'ಅಭಿವೃದ್ಧಿ ಅರ್ಥಶಾಸ್ತ್ರ'ವೆಂಬ ಜ್ಞಾನಶಿಸ್ತುವಿನಲ್ಲಿ ಹೆಚ್ಚು ಮಂಡಿತವಾಗುತ್ತಿವೆ.

ಅಭಿವೃದ್ಧಿ ಎನ್ನುವ ಪದದ ಪರಿಕಲ್ಪನೆ ಕೇವಲ ಭೌತಿಕ ಪ್ರಕ್ರಿಯೆಗಳಾದ ಆದಾಯ, ಉತ್ಪಾದನೆ, ಮಾರುಕಟ್ಟೆ ಮುಂತಾದ ಚಟುವಟಿಕೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿತ್ತು. ಆದರೆ ನಾಗರಿಕ ಸಮಾಜ, ಸಮಾನತೆಯ ಸ್ವಾತಂತ್ರ್ಯ, ಲಿಂಗ ಸಮಾನತೆ, ಆರೋಗ್ಯ, ಪರಿಸರ, ಸಾಕ್ಷರತೆ, ಸಾಮಾಜಿಕ ಬಂಡವಾಳ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿ ಮುಂತಾದ ವಿಚಾರಗಳೂ ಸಹ ಅಭಿವೃದ್ಧಿಯ ವ್ಯಾಪ್ತಿಯೊಳಗೆ ಬರುತ್ತವೆ. ಅದರಲ್ಲಿಯೂ ಪ್ರಮುಖವಾಗಿ ೧೯೯೦ರ ದಶಕದಿಂದೀಚೆಗೆ ಹೆಚ್ಚು ಪ್ರಚಲಿತದಲ್ಲಿರುವ ಮಾನವ ಅಭಿವೃದ್ಧಿ ಸಿದ್ಧಾಂತವು ಒಂದು ಪ್ರದೇಶದ ಅಭಿವೃದ್ಧಿಯು ಕೇವಲ ಆದಾಯದ ಹೆಚ್ಚಳದಿಂದ ಮಾತ್ರವೇ ನಿರ್ಧರಿಸಲ್ಪಡದೆ, ಆರೋಗ್ಯ, ಶಿಕ್ಷಣ, ಮೂಲ ಸೌಲಭ್ಯಗಳ ದೊರೆಯುವಿಕೆ, ಸಮಾನ ಭಾಗವಹಿಸುವಿಕೆ, ಸಾಮಾಜಿಕ ನ್ಯಾಯ ಮುಂತಾದ ಸಾಮಾಜಿಕ

ಪರಿಕಲ್ಪನೆಗಳಿಂದ ನಿರ್ಧರಿತವಾಗಿದೆ ಎಂಬುದನ್ನು ತೋರಿಸಿಕೊಟ್ಟಿದೆ. "೧೯೯೫ರ ಮಾನವ ಅಭಿವೃದ್ಧಿ ವರದಿಯಲ್ಲಿ ಮಹಿಳೆಯರು ವಿವಿಧ ಸಾಮಾಜಿಕ ಕ್ಷೇತ್ರದಲ್ಲಿ ಎದುರಿಸುತ್ತಿರುವ ಅಸಮಾನತೆಯ ಕುರಿತು ಬೆಳಕು ಚೆಲ್ಲಿತು. ಅಮರ್ತ್ಯ ಸೆನ್ ಮಹಿಳೆಯರ ಪಾತ್ರವನ್ನು ಗುರುತಿಸಿ ಅವರು ಅಭಿವೃದ್ಧಿಯ ಫಲಾನುಭವಿಗಳೂ ಹೌದು, ಅಭಿವೃದ್ಧಿಯ ವಸ್ತುವೂ ಹೌದು ಮತ್ತು ಅವರು ಅಭಿವೃದ್ಧಿಯಲ್ಲಿ ತೊಡಗಿರುವವರು ಹೌದು ಎಂದು ಪರಿಗಣಿಸುತ್ತಾರೆ"(ಟಿ.ಆರ್. ಚಂದ್ರಶೇಖರ; ೧೯೯೯). ಇತ್ತೀಚಿನ ದಿನಗಳಲ್ಲಿ ಮಹಿಳಾ ಸಬಲೀಕರಣದ ಮಾತು ಮತ್ತೆ ಮತ್ತೆ ಕೇಳಿಬರುತ್ತಿದೆ, ೭೦ರ ದಶಕದಲ್ಲಿ ಸ್ತ್ರೀವಾದದ ಅಲೆ ಬೀಸತೊಡಗಿದಾಗ ಆರ್ಥಿಕ ಸ್ವಾತಂತ್ರ್ಯವೇ ಮಹಿಳಾ ಸಮಾನತೆಯ ಮತ್ತು ಸಬಲೀಕರಣದ ಪ್ರಮುಖ ಅಸ್ತ್ರ ಎಂಬಂತೆ ಬಿಂಬಿಸಲಾಗಿತ್ತು. ೧೯೯೫ರ ಮಾನವ ಅಭಿವೃದ್ಧಿ ವರದಿಯಲ್ಲಿ ಮಹಿಳೆಯರ ಕೆಲವು ಸ್ಥಿತಿಗತಿಗಳನ್ನು ಸೂಚಿಸಿದ್ದಾರೆ. ಅವುಗಳಲ್ಲಿ ಮಹಿಳೆಯರು ಶೇಕಡ ೭೦ಕ್ಕಿಂತ ಅಧಿಕವಾಗಿ ಬಡತನದಲ್ಲಿದ್ದಾರೆ. ೯೦೦ ಮಿಲಿಯನ್ ಸಂಖ್ಯೆಯಷ್ಟು ಅನಕ್ಷರಸ್ಥರಾಗಿದ್ದಾರೆ. ಗಂಡಸರಿಗಿಂತ ಹೆಂಗಸರು ಹೆಚ್ಚು ಅಪೌಷ್ಟಿಕತೆಯಿಂದ ನರಳುತ್ತಾ ವಿವಿಧ ರೋಗಗಳಿಗೆ ಗುರಿಯಾಗುತ್ತಿದ್ದಾರೆ. ಹಿಂದುಳಿದ ದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಮರಣದ ಪ್ರಮಾಣವು ಹೆಚ್ಚಾಗಿದೆ. ಗಂಡಸರಿಗಿಂತ ೩೦-೪೦ರಷ್ಟು ಕಡಿಮೆ ಕೂಲಿಯನ್ನು ಪಡೆಯುತ್ತಾರೆ, ಹೆಂಗಸರು ಕಡಿಮೆ ಸಂಖ್ಯೆಯಲ್ಲಿ ಉನ್ನತ ಶಿಕ್ಷಣ ಮತ್ತು ಆಡಳಿತಾತ್ಮಕ ಹುದ್ದೆಗಳಲ್ಲಿದ್ದಾರೆ ಮತ್ತು ರಾಜಕೀಯ ಪ್ರಾತಿನಿಧ್ಯದಲ್ಲೂ ಸಹ ತುಂಬಾ ಕಡಿಮೆ ಸಂಖ್ಯೆಯಲ್ಲಿದ್ದಾರೆ. "ಅಭಿವೃದ್ಧಿಯ ಮುಖ್ಯ ಉದ್ದೇಶ ಮಾನವನ ಬದುಕಿನ ಆಯ್ಕೆಗಳ ವ್ಯಾಪ್ತಿಯನ್ನು ವರ್ಧಿಸುವುದಾಗಿದೆ. ಜನತೆ ಸುಖಕರವಾಗಿ, ದೃಢಕಾಯರಾಗಿ, ಅಕ್ಷರಸ್ಥರಾಗಿ, ಆರೋಗ್ಯವಾಗಿ ಬಹುಕಾಲ ಬಾಳುವಂತಹ ವಾತಾವರಣವನ್ನು ನಿರ್ಮಿಸುವುದು ಅಭಿವೃದ್ಧಿಯ ಗುರಿಯಾಗಿದೆ""(ಹಕ್, ೧೯೯೭). ಇಲ್ಲಿಯವರೆಗೂ ಅಭಿವೃದ್ಧಿಯನ್ನು ಒಂದು ಅಖಂಡ ಏಕರೂಪಿ, ಲಿಂಗ ನಿರಪೇಕ್ಷ, ಮೌಲ್ಯನಿರಪೇಕ್ಷ ಪ್ರಕ್ರಿಯೆಯಾಗಿ ಲಿಂಗಸಾಪೇಕ್ಷ ಮೌಲ್ಯನಿರ್ಣಯಗಳ ನಿಟ್ಟಿನಲ್ಲಿ ಗುರುತಿಸಲಾಗುತ್ತಿದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು, ಮಕ್ಕಳು ಮತ್ತು ಪುರುಷರು ಕೇಂದ್ರಬಿಂದುವಾಗಿರಬೇಕು. ಅಭಿವೃದ್ಧಿ ಇದರ ಸುತ್ತಾ ಸುತ್ತಬೇಕೇ ಹೊರತು ಜನತೇ ಅಭಿವೃದ್ಧಿಯನ್ನು ಸುತ್ತುವರಿಯಬಾರದು"(ಎಚ್.ಡಿ.ಆರ್. ೧೯೯೦). ಮಾನವ ಕೇಂದ್ರಿತವಾದುದೇ ನಿಜವಾದ ಅಭಿವೃದ್ಧಿ. ಒಂದು ರಾಷ್ಟ್ರದ ಮೌಲ್ಯಾಧಾರಿತ ಸಂಪನ್ಮೂಲ ವೆಂದರೆ ಅಲ್ಲಿಯ ಜನಸಂಖ್ಯೆ. ಜನತೆಯೇ ಅಭಿವೃದ್ಧಿಯ ಮೂಲ ಮತ್ತು ಕೊನೆ. ಆ ಜನತೆಯ ದುಸ್ಥಿತಿಯನ್ನು ನಿವಾರಿಸುವ ಜನಪರ, ಮಹಿಳೆಯರ ಪರ, ನಿಸರ್ಗಪರ, ಅಭಿವೃದ್ಧಿಯೆಂದು ವ್ಯಾಖ್ಯಾನಿಸಲಾಗಿದೆ. ಅಭಿವೃದ್ಧಿಯ ಉದ್ದೇಶವೇ ಜನತೆಯ ಕಲ್ಯಾಣ ಎಂದಾದರೆ ನಾವು ಜನತೆಯ ಮೌಲ್ಯಗಳನ್ನು ಕುರಿತ ನಿರ್ಲಕ್ಷ್ಯ ತಾಳುವಂತಿಲ್ಲ. ಮೌಲ್ಯ ಮತ್ತು ನಡವಳಿಕೆಗಳು ಜನತೆಯನ್ನು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡುತ್ತವೆ. ಜನತೆಯ ಭಾಗವಹಿಸು ವಿಕೆಯಿಂದ ಮಾತ್ರ ಅಭಿವೃದ್ಧಿ ಸಾಧ್ಯ. ಸಂಪ್ರದಾಯಕವಾಗಿ ನಡೆಯುತ್ತಾ ಬಂದಿರುವ ಅಧ್ಯಯನಗಳು ಅಭಿವೃದ್ಧಿಯ ಸ್ಥಿತಿಗತಿಗಳನ್ನು ಹಾಗೂ ಪ್ರಾದೇಶಿಕ ಅಸಮಾನತೆಯನ್ನು ವರಮಾನ, ಬಂಡವಾಳ ಮತ್ತು ಕೈಗಾರಿಕಾ

ಘಟಕಗಳನ್ನು ಅಧಾರವಾಗಿಟ್ಟುಕೊಂಡು ನಡೆಯುತ್ತಾ ಬಂದಿದೆ. ಅಭಿವೃದ್ಧಿಯು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ನೆಲೆಯಲ್ಲಿ ನಡೆಯಬೇಕು. ಅದು ಲಿಂಗಸಂವೇದಿ ಯಾಗಿರಬೇಕು. ಅದಕ್ಕೆ ಸಾಮಾಜಿಕ ಮುಖವಿರಬೇಕು. ಈ ಕಾರ್ಯಕ್ರಮದಲ್ಲಿ ಸಾಕ್ಷರತೆ, ಶಿಕ್ಷಣ ಹಾಗೂ ಆರೋಗ್ಯ ಇವುಗಳಿಗೆ ಆದ್ಯತೆಯ ಗಮನ ನೀಡಬೇಕು. ಜನರ ಧಾರಣಶಕ್ತಿಯನ್ನು ಸಂವರ್ಧಿಸುವ ಕೆಲಸವನ್ನು ಮಾಡಬೇಕು. ಅಸ್ಪೃಶ್ಯತೆಯನ್ನು ಅಭಿವೃದ್ಧಿಯ ಚೌಕಟ್ಟಿನಲ್ಲಿ ಪರಿಭಾವಿಸಿ ಕೊಳ್ಳಲು ಮತ್ತು ಇವುಗಳ ನಡುವಿನ ಸಂಬಂಧವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಭಾರತ ಮತ್ತು ಕರ್ನಾಟಕದ ಅಭಿವೃದ್ಧಿಯ ಪರಿಶಿಷ್ಟ ಮತ್ತು ಶಿಷ್ಟ ನೆಲೆಗಳನ್ನು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. ಸಮಾಜದಲ್ಲಿ ಅಭಿವೃದ್ಧಿಯಿಂದ ವಂಚಿತವಾದ ಮತ್ತು ತೀವ್ರ ದುಸ್ಥಿತಿಯಲ್ಲಿರುವ ಜನ ಸಮುದಾಯವೆಂದರೆ ಪರಿಶಿಷ್ಟರು ಎಂಬುದಾಗಿ ನಿರ್ವಚಿಸಿಕೊಳ್ಳಲಾಗಿದೆ. ಅಕ್ಷರ ಸಂಸ್ಕೃತಿ ಮತ್ತು ಅಸ್ಪೃಶ್ಯತೆಯ ಚರ್ಚೆಯಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಶಿಷ್ಟ-ಪರಿಶಿಷ್ಟರ ನಡುವಿನ ಅಸಮಾನತೆಯ ನಿದರ್ಶನವನ್ನು ನೋಡಲಾಗಿದೆ. ಶಿಷ್ಟರ ಸಾಕ್ಷರತೆಯು ಯಾವ ಪ್ರಮಾಣದಲ್ಲಿ ಏರಿಕೆಯಾಗುತ್ತದೆಯೋ ಅದೇ ಪ್ರಮಾಣದಲ್ಲಿ ಪರಿಶಿಷ್ಟರ ಅನಕ್ಷರತಾ ಪ್ರಮಾಣ ಕಡಿಮೆಯಾಗುತ್ತಿಲ್ಲ. ಶಿಷ್ಟ-ಪರಿಶಿಷ್ಟರಿಗೆ ಸಂಬಂದಿಸಿದಂತೆ ಸಾಕ್ಷರತೆಯ ಮಟ್ಟ ಪರಿಶಿಷ್ಟರಲ್ಲಿ ಕಡಿಮೆಯಿದೆ. ಆದರೆ ಪರಿಶಿಷ್ಟರನ್ನು ಗಣನೆಗೆ ತೆಗೆದುಕೊಂಡಾಗ ಕನಿಷ್ಠ ಸಾಕ್ಷರತೆಯು ಪರಿಶಿಷ್ಟ ಮಹಿಳೆಯರಲ್ಲಿದೆ. ಅಕ್ಷರಕ್ಕೂ ಅಧಿಕಾರಕ್ಕೂ ನಡುವೆ ಇರುವ ಸಂಬಂಧವನ್ನು ಅಲ್ಲಗಳೆಯುವಂತಿಲ್ಲ. ಈ ದೃಷ್ಟಿಯಿಂದ ಪರಿಶಿಷ್ಟರಿಗೆ ಅಕ್ಷರವು ತುಂಬಾ ಮಹತ್ವವಾದ ಸಂಗತಿಯಾಗಿದೆ[೪](**ಚಂದ್ರಶೇಖರ, ಟಿ.ಆರ್**).

ಅಭಿವೃದ್ಧಿ ಅರ್ಥಶಾಸ್ತ್ರ ಎಂಬುದೇನೋ ಹೊಸದಾದ ಜ್ಞಾನ ಶಿಸ್ತುವೇನಲ್ಲ. ಈಗಾಗಲೇ ಅಸ್ತಿತ್ವದಲ್ಲಿದ್ದ ಜ್ಞಾನಶಿಸ್ತುವಿನ ಒಂದು ಅಂಗ ಮಾತ್ರ. "ಪ್ರಜ್ಞಾಪೂರ್ವಕವಾಗಿ ಉದ್ದೇಶ ಪೂರ್ವಕವಾಗಿ ಬೆಳವಣಿಗೆಯನ್ನು ಉದ್ದೀಪನಗೊಳಿಸುವುದೇ ಅಭಿವೃದ್ಧಿ"(ಬ್ರೆನ್ನರ್; ೧೯೬೬). "ಅಭಿವೃದ್ಧಿ ಎಂಬುದು ಸಮಾಜ ಮತ್ತು ಸಮಾಜದಲ್ಲಿನ ಆರ್ಥಿಕತೆ, ಸಾಮಾಜಿಕ, ರಾಜಕೀಯ, ಭೌತಿಕ ರಚನೆಯಲ್ಲಿ ಮತ್ತು ಜನತೆಯ ಮೂಲಭೂತವಾದ ಬದಲಾವಣೆಯನ್ನು ತರುವ ಪ್ರಕ್ರಿಯೆಯಾಗಿದೆ"(**ಅಲೆಗ್ಸಾಂಡರ್**; ೧೯೯೧). "ಅಭಿವೃದ್ಧಿ ಬಗೆಗಿನ ಇಂದಿನ ಅರ್ಥದ ಮೊದಲ ಹಂತ ಆರಂಭವಾದದ್ದು ಅರ್ಥಶಾಸ್ತ್ರದ ವ್ಯಾಪಾರೀ ದೃಷ್ಟಿಕೋನದಿಂದ, ಚಿನ್ನ, ಬೆಳ್ಳಿ ಮತು ಮುತ್ತು ರತ್ನಗಳನ್ನು ಕಲೆಹಾಕುವುದು ದೇಶದ ಅಭಿವೃದ್ಧಿ ಮತ್ತು ಶಕ್ತಿಗೆ ಬಹುಮುಖ್ಯ ಎಂಬ ಕಲ್ಪನೆಯೂ ಈ ಹೊತ್ತಿನಲ್ಲಿ ಗಟ್ಟಿಯಾಗಲಾರಂಭಿಸಿತು. ರಾಷ್ಟ್ರೀಯ ವರಮಾನ ಮತ್ತು ರಾಷ್ಟ್ರೀಯ ಆಸ್ತಿಯ ಪರಿಕಲ್ಪನೆಗಳು ಇದರಿಂದಲೇ ಹುಟ್ಟಿಕೊಂಡಿದ್ದು" (**ಡೋಂಕ್ರಿ**, ೧೯೯೨) ಅರ್ಥಶಾಸ್ತ್ರದ ಪಿತಾಮಹರಾದ ಆಡಂಸ್ಮಿತ್ ಮತ್ತು ಆತನ ಅನುಚರರೆಲ್ಲರೂ ವ್ಯಕ್ತಿಯ ಮತ್ತು ಆ ಮೂಲಕ ದೇಶದ ಸೊತ್ತನ್ನು ಅಭಿವೃದ್ಧಿಗೊಳಿಸುವ ಬಗೆಗೆ ಯೋಚಿಸಿ ದವರು.[೫](**ಉಲ್ಲೇಖ; ಯಲ್ಲಪ್ಪ ತಾಯಪ್ಪ, ೨೦೧೬, ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು**)

ಒಂದು ಸಮಾಜದಲ್ಲಿ ಅನುಕೂಲಕರವಾದ ಬದಲಾವಣೆಯನ್ನು ತರಬೇಕಾದರೆ ಜನತೆಯ ಮೌಲ್ಯ ಮತ್ತು ಮನೋವೃತ್ತಿಗಳನ್ನು ಸಮಂಜಸವಾಗಿ ಗುರುತಿಸಬೇಕಾಗುತ್ತದೆ. ಯೋಜನೆಗಳು ನಿಗದಿತ ಫಲ ನೀಡದೇ ಇರುವುದಕ್ಕೆ ಜನತೆಯ ಮನೋವೃತ್ತಿ ಮತ್ತು ಮೌಲ್ಯಗಳ ಬಗೆಗಿನ ತಮ್ಮ ಗ್ರಹಿಕೆಗಳೇ ಕಾರಣವಾಗಿವೆ(**ಬೇಗಮ್ ೧೯೮೮**). ಅಭಿವೃದ್ಧಿಯ ಉದ್ದೇಶವೇ 'ಜನತೆಯ ಕಲ್ಯಾಣ' ಎಂದಾದರೆ ನಾವು ಜನತೆಯ ಮೌಲ್ಯಗಳನ್ನು ಕುರಿತು ನಿರ್ಲಕ್ಷ್ಯ ತಾಳುವಂತಿಲ್ಲ, ಮೌಲ್ಯ ಮತ್ತು ನಡುವಳಿಕೆಗಳು ಜನತೆಯನ್ನು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡುತ್ತವೆ. ಜನತೆಯ ಭಾಗವಹಿಸುವಿಕೆಯಿಂದ ಮಾತ್ರ ಅಭಿವೃದ್ಧಿ ಸಾಧ್ಯ. "ವರಮಾನಗಳ ಬೆಳವಣಿಗೆಯ ಉನ್ನತ ಪ್ರಮಾಣದಿಂದ ಸಾಮಾಜಿಕ ಅವನತಿ ಉಂಟಾಗಿದೆ ಹಾಗೂ ಅದರಿಂದ ಜೀವನದ ಗುಣಮಟ್ಟದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಿದೆ. ಕೇವಲ ವರಮಾನವನ್ನು ಹೆಚ್ಚಿಸುವುದರ ಮೂಲಕ ಜನರ ಜೀವನಮಟ್ಟ ಸುಧಾರಿಸುವುದಕ್ಕೆ ಮಿತಿಗಳಿವೆ. ಜೀವನದ ಮೌಲ್ಯ ಗಳು ಜೀವನ ಗುಣಮಟ್ಟವನ್ನು ಮಿತಿಯಿಲ್ಲದೇ ಸುಧಾರಿಸಬಲ್ಲವು. ಜೀವನದ ಮೌಲ್ಯಗಳು ಸಂಪೂರ್ಣ ಬೆಳವಣಿಗೆಗೆ ಅವಕಾಶ ಕಲ್ಪಿಸುತ್ತವೆ, ಹಾಗೂ ಇದರಿಂದಾಗಿ ವರಮಾನಗಳು ಹೆಚ್ಚಾಗುತ್ತವೆ. ಜೀವನದ ಗುಣಮಟ್ಟ ಉತ್ತಮಗೊಳ್ಳುತ್ತದೆ"(**ನಂಜುಂಡಪ್ಪ, ೧೯೯೯**). ಅಭಿವೃದ್ಧಿಯಲ್ಲಿ ಆರ್ಥಿಕೇತರ ಅಂಶಗಳ ಪ್ರಭಾವವನ್ನು ಗುರುತಿಸಿದವರು ಕೆಲವೇ ಚಿಂತಕರು, **ಜೆ.ಎಸ್.ಮಿಲ್, ಬೋಕೆ** ಮುಂತಾದವರು "ಮಾನಸಿಕ ಮತ್ತು ಸಾಮಾಜಿಕ ಅಗತ್ಯಗಳು ಅಭಿವೃದ್ಧಿಗೆ ಆರ್ಥಿಕ ಅಗತ್ಯಗಳಷ್ಟೇ ಪ್ರಮುಖವಾಗಿವೆ" (**ಜಿ.ಎಮ್, ಮೀಯರ್ ಮತ್ತು ಬಾಲ್ಡ್‌ವಿನ್,೧೯೫೭**), "ಅಭಿವೃದ್ಧಿಯ ಅರ್ಥ ಜನತೆಯ ಅಭಿವೃದ್ಧಿ, ರಸ್ತೆ, ಕಟ್ಟಡ, ಉತ್ಪನ್ನದಲ್ಲಿ ಹೆಚ್ಚಳ ಇತರೆ ಕ್ರಿಯೆಗಳು ಅಭಿವೃದ್ಧಿಯಲ್ಲ. ಇವು ಅಭಿವೃದ್ಧಿಯ ಕೇವಲ ಉಪಕರಣಗಳು ಮಾತ್ರ ಪ್ರತಿಯೊಂದು ಯೋಜನೆ ಅಥವಾ ಪ್ರಸ್ತಾವಗಳು ಅವು ಅಭಿವೃದ್ಧಿಯ ಉದ್ದೇಶವನ್ನು ಈಡೇರಿಸಿವೆಯೇ ಎಂಬುವುದರಿಂದ ನಿರ್ಧಾರಿತವಾಗುತ್ತವೆ, ಅಭಿವೃದ್ಧಿಯ ಉದ್ದೇಶ ಜನತೆಯ ಯೋಗಕ್ಷೇಮ". ಅಭಿವೃದ್ಧಿಯಲ್ಲಿ ಆರ್ಥಿಕ ಚಲಕಗಳ ಪಾತ್ರ ಮಹತ್ವವಾದುದು ನಿಜ, ಆದರೆ ಅಭಿವೃದ್ಧಿಗೆ ಅದಷ್ಟೇ ಸಾಕಾಗುವುದಿಲ್ಲ ಆರ್ಥಿಕೇತರ ಅಂಶಗಳು ಸಹ ಅಭಿವೃದ್ಧಿಯ ಮೇಲೆ ನೌಕರಶಾಹಿ ಆಡಳಿತ ವ್ಯವಸ್ಥೆ, ಕುಲಸಂಬಂಧಿ ಅಂಶಗಳು. ಸಾಮಾಜಿಕ ವ್ಯವಸ್ಥೆ, ನ್ಯಾಯವ್ಯವಸ್ಥೆ, ಭೂಮಾಲೀಕತ್ವ, ಮೌಲ್ಯ ವ್ಯವಸ್ಥೆ, ಯಥಾ ಸ್ಥಿತಿವಾದ ಹಾಗೂ ಕ್ರಿಯಾಶೀಲ ಪ್ರಜ್ಞೆ ಮುಂತಾದ ನೂರಾರು ಸಾಮಾಜಿಕ ಸಾಂಸ್ಕೃತಿಕ ಅಂಶಗಳು ಅಭಿವೃದ್ಧಿಯನ್ನು ನಿರ್ಧರಿಸುವ ಅಂಶಗಳಾಗಿವೆ" ಆರ್ಥಿಕ ವ್ಯವಸ್ಥೆಯನ್ನು ಸಾಮಾಜಿಕ ವ್ಯವಸ್ಥೆಯಿಂದ ಬೇರ್ಪಡಿಸಿ ಅಭ್ಯಸಿಸುವುದು ಸಾಧ್ಯವೇ ಇಲ್ಲ. ನೋಬಲ್ ಪ್ರಶಸ್ತಿ ವಿಜೇತರಾದ ಲೇವಿಸ್ ಅವರು ಅಭಿವೃದ್ಧಿಯ ಮುಖ್ಯ ಉದ್ದೇಶ ಮಾನವನ ಆಯ್ಕೆಗಳನ್ನು ವರ್ಧಿಸುವುದೇ ಆಗಿದೆ ಎಂದು ತಿಳಿಸಿದರು. ಇದನ್ನೇ ೯೦ರ ದಶಕದಲ್ಲಿ ಮಾನವ ಅಭಿವೃದ್ಧಿ ವರದಿಗಳು ಪ್ರಚುರ ಪಡಿಸಿವೆ. ಆದರೆ ವ್ಯತ್ಯಾಸವೆಂದರೆ ಆರ್ಥಿಕ ಬೆಳವಣಿಗೆ ಈ ಉದ್ದೇಶವನ್ನು ಪೂರೈಸುತ್ತದೆ ಎಂದು ಅವರು ನಂಬಿದ್ದರು"(**ಚಂದ್ರಶೇಖರ್ ಟಿ.ಆರ್, ೧೯೯೩**) ಏಷ್ಯಾ ಮತ್ತು ಫೆಸಿಫಿಕ್ ರಾಷ್ಟ್ರಗಳ ಸಂಯುಕ್ತ ಆರ್ಥಿಕ ಮತ್ತು ಸಾಮಾಜಿಕ ಕಮೀಷನ್‌ನ ಏಪ್ರಿಲ್

೧೯೮೮ರಲ್ಲಿ ನಡೆದ ಅಧಿವೇಶನದಲ್ಲಿ ಜಕಾರ್ತ ಕ್ರಿಯಾ ಯೋಜನೆಯ ಪ್ರಕಾರ, ಈ ದೇಶಗಳು ಮಾನವ ಸಂಪನ್ಮೂಲ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ನೀಡಲು ಪ್ರಾರಂಭಿಸಿದವು"(ಮಾಥೂರ್, ೧೯೯೨) ಆಗಿನಿಂದಲೇ ಮಾನವ ಕೇಂದ್ರಿತ ವಿಷಯಗಳಿಗೆ ಹೆಚ್ಚಿನ ಒಲವು ನೀಡಲು ಪ್ರಾರಂಭವಾಯಿತು. ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ "ಆರ್ಥಿಕತೆ" ಮುಖ್ಯವೆನಿಸಿದರೆ, ಮಾನವ ಅಭಿವೃದ್ಧಿಯಲ್ಲಿ ಸಮಾಜವು ಮುಖ್ಯವೆನಿಸಿದೆ.

ವಾಣಿ ಮತ್ತು ವ್ಯಾಸಲ ಅವರು ಕರ್ನಾಟಕದ ೧೯ ಜಿಲ್ಲೆಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಸಾಕ್ಷರತೆ, ಜೀವನಾಯುಷ್ಯ ಮತ್ತು ವರಮಾನಗಳ ಕನಿಷ್ಠ ಮತ್ತು ಗರಿಷ್ಠ ಮೌಲ್ಯಗಳನ್ನು ಕರ್ನಾಟಕದ ಜಿಲ್ಲೆಗಳಿಂದ ಆಯ್ದು ಒಂದು ರೀತಿಯ ಮಾನವ ಅಭಿವೃದ್ಧಿಯ ಸೂಚ್ಯಂಕ ಅಭಿವೃದ್ಧಿಪಡಿಸಿದ್ದು, ಈ ಮೂರು ಚಲಕಗಳ ಮೌಲ್ಯಗಳನ್ನು ರಾಷ್ಟ್ರೀಯ ಮಟ್ಟದಿಂದ ಆರಿಸಿಕೊಂಡು ಎರಡನೆಯ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಮಾನವ ಅಭಿವೃದ್ಧಿಯಲ್ಲಿ ಕರ್ನಾಟಕ ರಾಜ್ಯದ ಜಿಲ್ಲೆ ಜಿಲ್ಲೆಗಳ ನಡುವೆ ಅಂತರಗಳಿವೆ, ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಮತ್ತು ಬೆಂಗಳೂರು ಜಿಲ್ಲೆಗಳು ರಾಜ್ಯದಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನದಲ್ಲಿದ್ದರೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಗುಲ್ಬರ್ಗಾ, ಬಳ್ಳಾರಿ, ಬೀದರ್ ಮತ್ತು ರಾಯಚೂರು ಜಿಲ್ಲೆಗಳನ್ನು ಕ್ರಮವಾಗಿ ೧೫.೧೭.೧೮ ಮತ್ತು ೧೯ನೇ ಸ್ಥಾನದಲ್ಲಿವೆ. ಇದಕ್ಕಾಗಿ ಮಾನವ ಅಭಿವೃದ್ಧಿಯ ಚಾಲಕಶಕ್ತಿಯಾಗಿರುವ ಶಿಕ್ಷಣದಲ್ಲಿ ಹೆಚ್ಚಿನ ಬಂಡವಾಳ ವಿನಿಯೋಗಿಸಬೇಕಾಗಿದೆ. ಅದೇ ವೇಳೆಗೆ ಕಲ್ಯಾಣ ಯೋಜನೆಗಳ ನಡುವೆ ಅಗತ್ಯ ಸಂಯೋಜನೆ ಅವಶ್ಯಕತೆ ಇದೆ. ರಾಜ್ಯದಲ್ಲಿ ಮಾನವ ಅಭಿವೃದ್ಧಿ ಸುಧಾರಿಸಬೇಕಾದರೆ ರಾಜಕೀಯವಾಗಿ ನಿರಂತರವಾದ ಉತ್ತಮ ಬೆಂಬಲವು ಅವಶ್ಯಕ ಎಂದು ಈ ಅಧ್ಯಯನವು ಅಭಿಪ್ರಾಯಪಟ್ಟಿದೆ.[೭](ವಿ.ವಿ.ವಿ, ೧೯೯೬) ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-೧೯೯೯ ವರದಿಯನ್ನು ಕರ್ನಾಟಕ ಸರಕಾರ ಪ್ರಕಟಿಸಿದೆ. ಈ ವರದಿಯು ರಾಜ್ಯದ ೨೦ ಜಿಲ್ಲೆಗಳಿಗೆ ಮಾನವ ಅಭಿವೃದ್ಧಿ ಮತ್ತು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳನ್ನು ಸಿದ್ಧಪಡಿಸಿದೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಕೊಡಗು, ಬೆಂಗಳೂರು ನಗರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕ್ರಮವಾಗಿ ಮೊದಲ ಮೂರು ಸ್ಥಾನದಲ್ಲಿದ್ದರೆ. ಹೈದ್ರಾಬಾದ್ ಕರ್ನಾಟಕ ಪ್ರದೇಶದ ಬಳ್ಳಾರಿ, ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಕೊನೆಯ ಸ್ಥಾನಗಳನ್ನು ಪಡೆದುಕೊಂಡಿವೆ, ಜಿಡಿಐ ದರ್ಜೆಗಳು, ಹೆಚ್.ಡಿ.ಐ. ದರ್ಜೆಗಳನ್ನೇ ಬಹುತಾಕವಾಗಿ ಅನುಸರಿಸಿವೆ. ಆಫ್ರಿಕನ್ ದೇಶಗಳ ಸಾಕ್ಷರತೆಗಿಂತಲೂ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸಾಕ್ಷರತಾ ಪ್ರಮಾಣ ಕಡಿಮೆ ಎಂಬ ಸತ್ಯವನ್ನು ಈ ವರದಿ ಹೊರಹಾಕಿದೆ.[೮](ಕರ್ನಾಟಕ ಮಾನವ ಅಭಿವೃದ್ಧಿ ಬರದಿ ೧೯೯೯)

ಅಭಿವೃದ್ಧಿ ಎಂದರೆ ಬಡತನ ನಿವಾರಣೆ, ಸಮಾನತೆ, ಶೋಷಣೆರಹಿತ ಸಮಾಜ ಮತ್ತು ಒಳ್ಳೆಯ ಆಡಳಿತ ಎನ್ನುವಂತಾಗಿದೆ, ತೊಂಭತ್ತರ ನಂತರ ಜಾರಿಗೆ ಬಂದ ಅಭಿವೃದ್ಧಿ ನೀತಿಗಳ

ಮೇಲೆ ಕಣ್ಣಾಡಿಸಿದರೆ ರಾಜಕೀಯಕ್ಕು ಮತ್ತು ಅಭಿವೃದ್ಧಿ ವ್ಯತ್ಯಾಸ ಕಾಣಬಹುದು. ತಳಸ್ತರದ ಜನರ ಪಾಲುಗೊಳ್ಳುವಿಕೆಯ ಮೂಲಕ ನಮ್ಮ ಪ್ರಜಾಪ್ರಭುತ್ವಕ್ಕೆ ಲೆಜಿಟಮೆಸಿ ನೀಡುತ್ತಿವೆ. ಸಾಂಸ್ಕೃತಿಕ ರಾಜಕೀಯದಲ್ಲಿ ತಮ್ಮ ಸ್ಥಾನಮಾನ ಹಾಗೂ ಗುರುತಿನ ಬಗ್ಗೆ ಕೀಳರಿಮೆ ಹೊಂದಿ ಅತಿ ಕಡಿಮೆ ಬೆಲೆಗೆ ತಮ್ಮ ಶ್ರಮವನ್ನು ವಿನಿಮಯ ಮಾಡಿಕೊಳ್ಳಲು ರೆಡಿಯಾಗುವ ತಳಸ್ಥರದ ಜನರನ್ನು ಸಾಂಸ್ಕೃತಿಕ ರಾಜಕೀಯ ಸೃಷ್ಟಿಸುತ್ತಿದೆ. ಅಂದರೆ ಮನುಷ್ಯರ ನಡುವೆ ಕಂದರ ಮತ್ತು ಏಣಿಶ್ರೇಣಿಯನ್ನು ನಿರ್ಮಾಣ ಮಾಡಿವೆ. ಅಭಿವೃದ್ಧಿ ಉಳ್ಳವರ ಆಸಕ್ತಿ ಅನುಗುಣವಾಗಿ ಪ್ರತಿಪಾದಿಸಲಾಗುತ್ತಿದೆ ಹಾಗೆ ಮುಂದುವರಿವಂತೆ ಕಟ್ಟುನಿಟ್ಟಾಗಿ ನೋಡಿಕೊಳ್ಳಲಾಗುತ್ತಿದೆ(ಚಂದ್ರ ಪೂಜಾರಿ ಎಂ, ೨೦೧೪).

ಭಾರತ ಕಂಡ ಯಾವುದೇ ಸಾಮಾಜಿಕ, ಧಾರ್ಮಿಕ ಚಳುವಳಿಗಳು, ಚಳುವಳಿಯ ನಾಯಕರು ಹೆಣ್ಣಿಗೆ ಸಂಬಂಧಿಸಿದಂತೆ ಇರುವ ಸಮಸ್ಯೆಗಳನ್ನು ಸಮಗ್ರವಾಗಿ ಗ್ರಹಿಸಿದಂತೆ ಕಾಣಿಸುವುದಿಲ್ಲ. ಅಂದಂದಿನ ಕಾಲದ ಒಳಗಡೆ ಹೆಣ್ಣನ್ನು ಇಟ್ಟು ಅವಳ ತತ್‌ಕ್ಷಣದ ಸಮಸ್ಯೆಗಳ ಬಗ್ಗೆ ಆಲೋಚಿಸಿ ಸುಧಾರಣೆ ತರಬಯಸಿದರೆ ವಿನಾ ಸಮಗ್ರ ಬದಲಾವಣೆಗೆ ಒತ್ತು ಕೊಟ್ಟಿಲ್ಲ. ಹೆಣ್ಣನ್ನು ಕುಟುಂಬ ನೆಲೆಯಲ್ಲಿ ಆಸ್ತಿಯ ಭಾಗವಾಗಿಯೇ ನೋಡುವ ಒತ್ತಡಗಳನ್ನು ಮೀರುವ ಸಾಧ್ಯತೆಗಳೇಕೆ ಚರಿತ್ರೆಯಲ್ಲಿ ಕಾಣದೇ ಹೋದವು ಎಂಬುದರ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸಬೇಕಾಗಿದೆ. ಬುದ್ಧ, ಬಸವರ ನಂತರ ಬಂದ ಶಂಕರಾಚಾರ್ಯರು ಹೆಣ್ಣನ್ನು ನರಕಕ್ಕೆ ದಾರಿ ಎಂದೇ ಕರೆದಿರುವುದರ ಹಿಂದೆ ಕೆಲಸ ಮಾಡಿದ ಮನಸ್ಸಿನ ಸೈದ್ಧಾಂತಿಕ ನೆಲೆಯನ್ನು ಕಂಡುಹಿಡಿಯಬೇಕಾಗಿದೆ. ಗಾಂಧೀಜಿಯಲ್ಲಿ ಸನಾತನ ಸಂಸ್ಕೃತಿಯ ಚೌಕಟ್ಟಿನೊಳಗಿರುವ ಹೆಣ್ಣಿನ ಬಗ್ಗೆ ಗೌರವಾಧಾರಗಳಿದ್ದವೇ ಹೊರತು ಚೌಕಟ್ಟಿನಾಚೆಗೆ ಬದುಕಲು ಇಚ್ಚಿಸುವ ಮಹಿಳೆಯರ ಕುರಿತ ಸದಾಭಿಪ್ರಾಯವಿರಲಿಲ್ಲ. ಹಾಗೆ ನೋಡಿದರೆ ಜ್ಯೋತಿಬಾ ಫುಲೆ ಮತ್ತು ಪೆರಿಯಾರ್ ಅವರ ದಿಟ್ಟ ನಿಲುವು ಮತ್ತು ಸ್ಪಷ್ಟವಾದ ವಿಚಾರಗಳು ಮಹಿಳೆಯ ಬದುಕಿನ ಬದಲಾವಣೆಯ ದಿಕ್ಕು ದೆಸೆಗಳನ್ನು ವೈಚಾರಕವಾಗಿಯೇ ಗುರುತಿಸಿವೆ. ನಂತರದಲ್ಲಿ ಬಂದ ಮಾನವತಾವಾದಿ ಅಂಬೇಡ್ಕರ್ ಮಹಿಳೆಯರ ಬಗ್ಗೆ ಕಾನೂನು ಸಮ್ಮತಗೊಸಿದರು. ಆದರೆ ಅವರ ದಿಟ್ಟ ನಿಲುವಿಗೆ ಅನುಗುಣವಾದ ಫಲ ಸಿಗಲಿಲ್ಲ. ಇದಕ್ಕೆ ಕಾರಣ ಹುಡುಕುತ್ತಾ ಹೋದರೆ ಮನು ಮೂಲವೇ ಕೈಗೆ ಸಿಗುತ್ತದೆ. ನಾವು ಭಾವಿಸಿದಂತೆ ಭಾರತೀಯ ಸಮಾಜದ ಬದುಕು, ಜನರನ್ನು ಮುನ್ನಡೆಸುವ ಶಕ್ತಿ ಬರೆಯಲ್ಪಟ್ಟ ಸಂವಿಧಾನಕ್ಕೆ ಸಾಧ್ಯವಾಗದೇ ಹೋಯಿತು. ಆದರೆ ಸಾಮಾಜಿಕ ಮನ್ನಣೆಯನ್ನು ಪಡೆದುಕೊಳ್ಳುತ್ತಲೇ ಧಾರ್ಮಿಕ ಒತ್ತಾಸೆಯ ನೆಲೆಯಲ್ಲಿರುವ ಮನು ವಿಚಾರಧಾರೆಯೇ ನಮ್ಮನ್ನು ವಾಸ್ತವವಾಗಿ ಆಳುತ್ತಿದೆ. ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸಮಾನವಾದ ಅಧಿಕಾರ ಅವಕಾಶಗಳೆಲ್ಲ ಸಂವಿಧಾನಾತ್ಮಕವಾಗಿ ಕೊಡಮಾಡಲ್ಪಟ್ಟಿವೆ ಎಂಬುದನ್ನೇ ನಾವು ಜಗತ್ತಿಗೆ ಸಾರುತ್ತಾ ಬಂದಿದ್ದೇವೆ. ವಾಸ್ತವವಾಗಿ ಹೆಣ್ಣನ್ನು ಮನು ನಿರ್ದೇಶಿತ ಸ್ಥಾನದಲ್ಲಿಟ್ಟು ಸುತ್ತಲೂ ಬೇಲಿ ಹಾಕಿ ಒಳಗಡೆ ವರ್ಗಹಿತಾಸಕ್ತಿ, ಸರಕು ಸಂಸ್ಕೃತಿಯ ಹಿತಾಸಕ್ತಿ, ಸನಾತನ ಮೌಲ್ಯಗಳ ಕರೆಂಟು ಹರಿಯಬಿಟ್ಟಿದ್ದೇವೆ. ಕಾಗದದ ಮೇಲೆ ಕಾನೂನುಗಳಿದ್ದರೂ

ಸಮಾಜದಲ್ಲಿ ಮನುಧೋರಣೆ ಜೀವಂತವಾಗಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕ ವಾಗಿ ಲಿಂಗನೆಲೆಯ ಬರ್ಬರತೆಯನ್ನು ಕಾಪಾಡಿಕೊಂಡು ಹೋಗುವ ಸಾಮಾಜಿಕ ರೂಢಿ ನಿಯಮಗಳನ್ನು ಯಾವ ಕಾನೂನಿನಿಂದಲೂ ಮುರಿಯಲು ಸಾಧ್ಯವಿಲ್ಲ. ಬಾಬಾಸಾಹೇಬರು ಭಾರತೀಯ ಮಹಿಳಾ ಸಮುದಾಯಕ್ಕೆ ಹಲವಾರು ಕಾಯ್ದೆ-ಕಾನೂನುಗಳನ್ನು ತಂದರು. ಆದರೆ ಈ ಪ್ರಯೋಜನಗಳೆಲ್ಲವೂ ಸಹ ಮೇಲ್ಜಾತಿ ಮತ್ತು ಮೇಲ್ವರ್ಗದ ಮಹಿಳೆಯರಿಗೆ ಅನುಕೂಲವಾದರೂ ಸಹ ಇಡೀ ಮಹಿಳಾಲೋಕವೇ ಅಂಬೇಡ್ಕರ್ ಅವರನ್ನು ಜೀವಮಾನದುದ್ದಕ್ಕೂ ಸ್ಮರಿಸಬೇಕು. ಅಂದಿನ ಕಾಲದ ವಿಷಮ ಪರಿಸ್ಥಿತಿಯಲ್ಲಿ ಒಬ್ಬ ಕೆಳವರ್ಗದ ಮಹಾನ್ ವ್ಯಕ್ತಿ ಮಹಿಳೆಯರಿಗೆ ಸಾಮಾಜಿಕ ಮತ್ತು ಆರ್ಥಿಕ ಕಾನೂನುಗಳನ್ನು ಮಾಡಿದ್ದು ಪ್ರಶ್ನಾತೀತವಾದುದಾಗಿದೆ.[೧೦](ಮಲ್ಲಿಕಾ ಘಂಟಿ, ೨೦೧೦) ಮಹಿಳೆಯನ್ನು ಮನುವಿನ ಧಾರ್ಮಿಕ ಸಂಕೋಲೆಯಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ದಿವಾಳಿಯಾಗಿರುವುದನ್ನು ಮತ್ತು ಸಕಾರಾತ್ಮಕವಾಗಿ ಕಾಯ್ದೆ-ಕಾನೂನುಗಳನ್ನು ಮಾಡಿ ಅವುಗಳನ್ನು ಅನುಷ್ಠಾನಗೊಳಿಸಲು ಸತತ ಹೋರಾಟ ಮಾಡಿದ ಅಂಬೇಡ್ಕರ್ ಅವರು ಮಹಿಳೆಯರ ಬಗ್ಗೆ ತಳೆದಿದ್ದ ನಿಲುವುಗಳನ್ನು ಚರ್ಚೆ ಮಾಡಿದ್ದಾರೆ.

ಮನುಷ್ಯ ಒಂದೆಡೆ ನೆಲೆಗೊಂಡು ಆಸ್ತಿಯ ಮೇಲಿನ ಒಡೆತನ ಹೊಂದಿ ಮಹಿಳೆಯನ್ನು ಸಾಮಾಜಿಕ, ಆರ್ಥಿಕ ಸಂಬಂಧದಿಂದ ವಿಮುಖಗೊಳಿಸಿ ಅವಳನ್ನು ಕೇವಲ ಮನೆಯ ಕೆಲಸಕ್ಕೆ ಸೀಮಿತಗೊಳಿಸಿದನು. ಭಾರತದಂತಹ ಶ್ರೇಣಿಕೃತ ಮತ್ತು ಸನಾತನ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ಪುರುಷನ ನಡುವೆ ಇರುವ ಎಲ್ಲಾ ತರಹದ ಜೈವಿಕ ವೈಶಿಷ್ಟಗಳ ಮೇಲೆಯೂ ಪ್ರಹಾರ ಮಾಡಿ ಭೇದ ಹುಟ್ಟಿಸಲಾಗಿದೆ. ಮಹಿಳೆಗೆ ಇರುವ ಗರ್ಭ, ತಿಂಗಳ ಋತುಚಕ್ರ, ಶಾರೀರಿಕ ಸಂರಚನೆ, ಭಿನ್ನವೆನಿಸುವ ಧ್ವನಿ ಹೀಗೆ ಎಲ್ಲಾ ಬಗೆಯ ನೈಸರ್ಗಿಕ ವೈಶಿಷ್ಟಗಳು ಅವಳನ್ನು ಮೂಲೆಗುಂಪಾಗಿಸುವ ಅಸ್ತ್ರಗಳಾದವು. ಈ ಎಲ್ಲವುಗಳನ್ನು ಅವಳ ವಿರುದ್ದವೇ ಬಳಸಲಾಯಿತು[೧೧](ಕೆ. ನೀಲಾ; ೨೦೦೧) ಮಹಿಳಾ ಭಾಗವಿಸುವಿಕೆ ಮತ್ತು ರಾಜಕೀಯ ಭಾಗವಸುವಿಕೆ ಪರಿಕಲ್ಪನೆಗಳ ಬಗ್ಗೆ ಮತ್ತು ಮಹಿಳೆ ತಾನು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಪ್ರಕ್ರಿಯೆ. ಶಾಸನ ಸಭೆಯಲ್ಲಿ ಶೇ. ೩೩.೩೩ ಇರಬೇಕೆಂದು ತಮ್ಮ ನಿಲುವುಗಳನ್ನು ಮಹಿಳಾ ಮೀಸಲಾತಿ ಮಸೂದೆ ಜಾರಿ ಕುರಿತ ಚರ್ಚೆಗಳು ಇದಕ್ಕೆ ಸಾಕ್ಷಿ.[೧೨](ಮೀನಾಕ್ಷಿ; ೨೦೧೦) ಸಂಘಟಿತ ಕ್ಷೇತ್ರದಲ್ಲಿ ಹೆಚ್ಚು ಮಹಿಳೆಯರು ಕಂಡುಬರುತ್ತಾರೆ. ಅದರ ಹಿನ್ನಲೆಯನ್ನು ನೋಡಿದಾಗ ಮಹಿಳೆಯರಿಗೆ ಶಿಕ್ಷಣ, ಜ್ಞಾನ, ಕೌಶಲ್ಯ ಮುಂತಾದವುಗಳಿಂದ ವಂಚಿತರಾಗಿದ್ದರಿಂದ ಇವರ ಸಂಖ್ಯೆ ಕಡಿಮೆ. ಅದ್ದರಿಂದ ಇದನ್ನು ಮಹಿಳೆಯರಿಗೆ ಮಾನವ ಬಂಡವಾಳ ಕಡಿಮೆಯಿದೆ ಎಂದಿದ್ದಾರೆ. ಅಸಂಘಟಿತ ಕ್ಷೇತ್ರದಲ್ಲಿ ಸ್ತ್ರೀ-ಪುರುಷರು ಹೆಚ್ಚು ಕಡಿಮೆ ಸಮಾನವಾಗಿರುತ್ತಾರೆ ಆದರೆ ಕೂಲಿಯ ಮತ್ತು ಸ್ಥಾನ ಮಾನದ ವ್ಯತ್ಯಾಸಗಳು ಕಂಡುಬರುತ್ತವೆ ಅದ್ದರಿಂದ ಇದನ್ನು ಬೇಕರ್ ಥಿಯರಿಂದ ಗುರುತಿಸಿದ್ದಾರೆ. ಸಂಘಟಿತ ಕ್ಷೇತ್ರದಲ್ಲಿ ಮಹಿಳೆಯರು ತಾರತಮ್ಯ ಅನುಭವಿಸುತ್ತಾರೆ ಏಕೆಂದರೆ ಮಹಿಳೆಯರಿಗಿರುವ

ಸ್ವಾಭಾವಿಕ ಪ್ರಕ್ರಿಯೆಗಳು ಅವರ ಉನ್ನತ ಅಭಿವೃದ್ಧಿಗೆ ಅಡ್ಡಬರುತ್ತವೆ ಅವುಗಳಲ್ಲಿ ಸಂತಾನೋತ್ಪತ್ತಿ ಮತ್ತು ಅದಕ್ಕೆ ಸಂಬಂಧಿಸಿದ ಸ್ವಾಭಾವಿಕ ಪ್ರಕ್ರಿಯೆಗಳು, ಮನೆವಾರ್ತೆ ಹಾಗೂ ಇತರೆ ಆದ್ದರಿಂದ ಯಾವ ಕ್ಷೇತ್ರದಲ್ಲಿಯೂ ಸಹ ಅಭಿವೃದ್ಧಿ ಹೊಂದುವಲ್ಲಿ ಅವಳ ದೈಹಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳು ಅಡ್ಡಬರುತ್ತವೆ[೧೨]**(ಡಾ. ಛಾಯಾ ದೇಗಾಂವಕರ್)** ಪುರುಷ ಪ್ರಧಾನವಾದ ಹಿಂದು ಸಮಾಜವು ವಿಧವೆಯನ್ನು ಸ್ವತಂತ್ರವಾಗಿ ಬದುಕಲು ಬಿಡುವುದಿಲ್ಲ. ಇವರ ಸಾಂಸ್ಕೃತಿಕ ಸ್ಥಿತಿಗತಿಯು ವಿಧವೆಯರನ್ನು ಹೆಚ್ಚಾಗಿ ಜಾತಿ ಮತ್ತು ಧಾರ್ಮಿಕತೆಯ ಕೆಲವು ಕಟ್ಟುನಿಟ್ಟಿನ ನಿಬಂಧನೆ ಮತ್ತು ನಿಯಂತ್ರಣಗಳಿಂದ ಕಟ್ಟಿಯಾಕಿರುತ್ತದೆ. ಯಾವಾಗಲೂ ತೇಜೋವಧೆಯಿಂದ ಮತ್ತು ಆರ್ಥಿಕ ಅಭದ್ರತೆಯಿಂದ, ಸಾಮಾಜಿಕವಾಗಿ ಕೆಳಹಂತದಲ್ಲಿ ಮತ್ತು ಭಾವನಾತ್ಮಕವಾಗಿ ಬೆಂಬಲವಿಲ್ಲದ ವೈಯಕ್ತಿಕವಾಗಿ ಒಬ್ಬಂಟಿತನದಿಂದ ಜೀವಿಸಬೇಕಾಗುತ್ತದೆ ಹಾಗೂ ಎಲ್ಲಾ ರೀತಿಯಲ್ಲಿ ತುಂಬಾ ಹಿಂದುಳಿದಿದ್ದಾರೆ.[೧೪]**(ಶಾಂತಾ ಭಂಗಾರಿ)** ಗಂಡು–ಹೆಣ್ಣುಗಳಲ್ಲಿ ಅವರದ್ದೆ ಆದ ನಿರ್ದಿಷ್ಟ ಪಾತ್ರ ಮತ್ತು ಜವಾಬ್ದಾರಿಗಳಿರುತ್ತವೆ. ಈ ಭಿನ್ನತೆಯನ್ನು ನಮ್ಮ ಸಮಾಜದಲ್ಲಿ ಸಾಮಾಜಿಕವಾಗಿ–ಸಾಂಸ್ಕೃತಿಕವಾಗಿ ಹಿಗ್ಗಿಸಿವೆ ಮತ್ತು ಶ್ರೇಷ್ಠತೆ ಮತ್ತು ಕನಿಷ್ಠತೆ ಎಂಬ ಶ್ರೇಣೀಕರಣವನ್ನು ಮಾಡಿದೆ. ಸಾಮಾಜಿಕ ಸ್ಥಾನ ಎಂಬುದು ವ್ಯಕ್ತಿಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳಿಂದ ಗುರುತಿಸ ಬಹುದು, ಮಹಿಳೆಯ ಸ್ಥಾನವು ಕೇವಲ ಸಾಮಾಜಿಕ ಮತ್ತು ಸಾಂಸ್ಕೃತಿಕ ಪದ್ಧತಿಯಿಂದ ಮಾತ್ರ ರೂಪಿತವಾಗಿದೆ(ಸಂಗೀತ ಗಾಂವಕರ;೨೦೦೯). ಇಡೀ ಮಹಿಳಾ ಸಮುದಾಯವನ್ನು ದೇಹ, ಸೌಂಧರ್ಯ ಮುಂತಾದವುಗಳಿಗೆ ಕೇಂದ್ರೀಕರಿಸಿ ಅವಳ ಉತ್ಪಾದನಾ ಚಟುವಟಿಕೆಯಲ್ಲಿ ಎಲ್ಲಾ ರೀತಿಯಲ್ಲಿ ಭಾಗವಹಿಸಿದರೂ ಉತ್ಪಾದನೆ, ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಇನ್ನು ಸಹ ಒಳಗೊಂಡಿಲ್ಲ(ಬಿ.ಜಿ. ಕಲಾವತಿ). ಮಾನವ ಜನಾಂಗದ ಸೃಷ್ಟಿ ಹಾಗೂ ಅದರ ಸುಸ್ಥಿರಗತಿ ಪ್ರಕ್ರಿಯೆಯಲ್ಲಿ ಕೇಂದ್ರ ಧಾತು ಮಹಿಳೆ. ಆದರೆ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕಾರಣಗಳಿಂದಾಗಿ ಸಾಮಾಜಿಕ ಜೀವನದ ಪ್ರಧಾನಧಾರೆಯಲ್ಲಿ ಆಕೆ ಅಂಚಿಗೆ ನೂಕಲ್ಪಟ್ಟಿದ್ದಾಳೆ. ಅಭಿವೃದ್ಧಿಯ ಫಲಗಳು, ಸಂಪನ್ಮೂಲಗಳು ಹಾಗೂ ದುಡಿಮೆಗೆ ಸಂಬಂಧಿಸಿದಂತೆ ಮಹಿಳೆಯರು ತೀವ್ರ ಸ್ವರೂಪದ ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಸುನೀತಾ ಕಿಶೋರ್ ಪ್ರಕಾರ ಸಬಲೀಕರಣವೆಂದರೆ ಅಧಿಕಾರವನ್ನು ಪಡೆದುಕೊಳ್ಳುವುದು ನಿಜವಾದರೂ ಮಹಿಳೆಯರ ಸಬಲೀಕರಣದ ಸಂದರ್ಭದಲ್ಲಿ ತಮ್ಮ ಸ್ವಂತ ಬದುಕಿನ ಮೇಲೆ, ದೇಹದ ಮೇಲೆ ಹಾಗೂ ಪರಿಸರದ ಮೇಲೆ ಮಹಿಳೆಯರ ಅಧಿಕಾರದಲ್ಲಿ ಉಂಟಾಗುವ ವರ್ಧನೆಯೇ ಮಹಿಳೆಯರ ಸಬಲೀಕರಣ. ಗೀತಾಸೆನ್ ಮತ್ತು ಶ್ರೀಲತಾ ಬಾಟ್ಲಿವಾಲ ಅವರು ಸಬಲೀಕರಣವನ್ನು ಸಂತಾನೋತ್ಪತ್ತಿ ಆರೋಗ್ಯ ಹಾಗೂ ಸಂತಾನೋತ್ಪತ್ತಿ ಮತ್ತು ಲೈಂಗಿಕ ಹಕ್ಕುಗಳಿಗೆ ಮತ್ತು ಸ್ತ್ರೀವಾದದ ನಾಯಕತ್ವಕ್ಕೆ ಸಂಬಂಧಿಸಿದಂತೆ ನಿರ್ವಚಿಸಲು ಪ್ರಯತ್ನಿಸಿದ್ದಾರೆ. ನಿಜವಾದ ಸಬಲೀಕರಣವು ಎಲ್ಲಾ ತರದ ಸಂಪನ್ಮೂಲಗಳ ಮೇಲಿನ ಹಿಡಿತ ಹಾಗೂ ವಿಚಾರಗಳ ಮೇಲಿನ ನಿಯಂತ್ರಣಗಳನ್ನು ಒಳಗೊಂಡಿರ ಬೇಕು. ವಿಶ್ವಸಂಸ್ಥೆಯು "ತಮ್ಮ ಇಚ್ಚೆಗೆ ಅನುಸಾರವಾಗಿ ಬದುಕುವ ಬದುಕಿನ ಆಯ್ಕೆಯ ಅವಕಾಶಕ್ಕೆ ಒತ್ತು ನೀಡಲಾಗಿದೆ".

ನೈಲಾಕಬೀರ ಪ್ರಕಾರ "ಸಬಲೀಕರಣದ ಧಾತು ಸದೃಶ ಸಂಗತಿ ಯೆಂದರೆ ತಮ್ಮ ಪಾತ್ರವನ್ನು ನಿರ್ಧರಿಸಿಕೊಳ್ಳುವುದು ಮತ್ತು ಅದರಂತೆ ಕ್ರಿಯಾಶೀಲರಾಗುವುದು. ಲಿಂಗಸಂಬಂಧಿ ಅಧಿಕಾರ ಕೇಂದ್ರದ ಅರಿವು, ಸ್ವಂತ ವ್ಯಕ್ತಿತ್ವದ ಬಗ್ಗೆ ಅಭಿಮಾನ ತಳೆಯುವುದು ಮತ್ತು ಆತ್ಮ ವಿಶ್ವಾಸ." ಹೀಗೆ ಅನೇಕರು ತಮ್ಮದೇ ರೀತಿಯಲ್ಲಿ ಹೇಳಿದ್ದಾರೆ. ಲಿಂಗಸಂಬಂಧಿ ಸಬಲೀಕರಣ ದೃಷ್ಟಿಕೋನದಲ್ಲಿ ಸರ್ಕಾರ ಪ್ರಾಯೋಜಿತ ಕ್ರಮಗಳಿಗೆ ಸಾಪೇಕ್ಷವಾಗಿ ಯಾವ ಸ್ಥಾನ ನೀಡಬೇಕು ಎಂಬುದರ ಬಗ್ಗೆ ಖಚಿತ ನಿಲುವು ತಳೆಯುವುದು ಅಗತ್ಯ. ಮಹಿಳೆಯರ ಅಭಿವೃದ್ಧಿ ಮತ್ತು ಸಬಲೀಕರಣದ ದೃಷ್ಟಿಕೋನವು ಮೂಲಭೂತವಾಗಿ ಸರ್ಕಾರ ಪ್ರಾಯೋಜಿತವಾದುದಾಗಿದೆ. ಮಹಿಳೆಯರ ಸಬಲೀಕರಣ ಪ್ರಕ್ರಿಯೆಯನ್ನು ತೀವ್ರಗೊಳಿಸುವ ದೃಷ್ಟಿಯಿಂದ ಜಾಗೃತಿಯನ್ನು ಧಾರಣೆ ಮಾಡಿಕೊಂಡ ಹಾಗೂ ಲಿಂಗಸಮಾನತೆಗೆ ಬದ್ಧರಾದ ಮತ್ತು ಅರ್ಹರಾದ ಮಹಿಳೆಯರು ಸ್ವಯಂ ಕೈಗೊಳ್ಳುವ ಚಳುವಳಿ ಪಾತ್ರ ತುಂಬಾ ಮುಖ್ಯ.

ದೇವದಾಸಿ ಎಂದರೆ ದೇವರಿಗೆ ದಾಸಿಯಾದವಳು ಎಂದು ಅರ್ಥ. ದೇವರ ಸೇವಕಿ, ದಾಸಿ, ಕೈಯಾಳು, ಪವಿತ್ರದಾಸಿ, ಕನ್ಯೆ, ದೇವಾಲಯದ ನರ್ತಕಿ, ದೇವರ ಗುಡಿಸೆಟ್ಟಿ, ದೇವರ ನಾಯಕಸಾನಿ ಎಂಬ ಅರ್ಥಗಳಲ್ಲಿ ಬಳಸಲಾಗಿದೆ. ಧಾರ್ಮಿಕ ಸಂಪ್ರದಾಯಗಳು ಮತ್ತು ಕೌಟುಂಬಿಕ ಪದ್ಧತಿಗಳು ಎಂಬ ಹೆಸರಿನಲ್ಲಿ ಆಚರಣೆಯಲ್ಲಿಟ್ಟುಕೊಂಡಿರುವ ಜಗತ್ತಿನ ಅತ್ಯಂತ ಪ್ರಾಚೀನ ಕಸುಬು ಎನ್ನಲಾದ ವೇಶ್ಯಾವೃತ್ತಿಯನ್ನು ಅವಲಂಬಿಸಿರುವ ಹೆಂಗಸರ ಬಗ್ಗೆ ಸೌಮ್ಯೋಕ್ತಿಯಲ್ಲಿ ಹೇಳುವಾಗಲು ದೇವದಾಸಿ ಎಂಬ ಪದವನ್ನು ಬಳಸಲಾಗುತ್ತದೆ. ಇದನ್ನು ಧಾರ್ಮಿಕ ವೇಶ್ಯಾವೃತ್ತಿ ಎಂದು ತಿಳಿಯಲಾಗಿತ್ತು. ಅದರ ಪ್ರತಿನಿಧಿರೂಪವಾದ ದೇವದಾಸಿಯೂ, ಸುಂದರ ಕನ್ಯೆಯೂ ಮತ್ತು ಸಂಗೀತ ನೃತ್ಯಾದಿ ಕಲೆಗಳಲ್ಲಿ ಪರಿಣತಳಾಗಿರುತ್ತಿದ್ದಳು; ಸಾರ್ವಜನಿಕರಲ್ಲಿ ಒಳ್ಳೆಯ ಸಲಿಗೆಯ ಮನೋಭಾವನೆಯಿಂದ ಉಚ್ಛ್ರಾಯ ಸ್ಥಿತಿಯಲ್ಲಿ ಸಾಂಸ್ಕೃತಿಕ ನೆಮ್ಮದಿ ಹಾಗೂ ತೃಪ್ತಿಯಿಂದ ಕೂಡಿದ ಜೀವನ ನಡೆಸುತ್ತಿದ್ದಳು. ಕಾಲ ಕ್ರಮೇಣ ತನ್ನ ಸ್ಥಿತಿಯು ದೇವಸ್ಥಾನದಲ್ಲಿ ಗುಲಾಮಳಂತೆ ಚಾಕರಿ ಮಾಡುತ್ತಾ ಕಾಲ ಸಾಗಿಸುತ್ತಿದ್ದರು ಎಂದು ಗುರುತಿಸಿದ್ದಾರೆ. ಶುದ್ಧ ಹಾಗೂ ಪವಿತ್ರ ದೇಹದೊಂದಿಗೆ, ದೈವದ ಬಗ್ಗೆ ಸಂಪೂರ್ಣ ನಿಷ್ಠೆಯ ದ್ಯೋತಕವಾಗಿ ತನ್ನನ್ನು ತಾನು ಅರ್ಪಿಸಿಕೊಳ್ಳುವ ಪದ್ಧತಿ ಸ್ತ್ರೀ–ಪುರುಷರಿಬ್ಬರಲ್ಲಿ ಇತ್ತು. ಈ ಪದ್ಧತಿ ಪ್ರಾಚೀನ ಗ್ರೀಸ್ ಮತ್ತು ಈಜಿಪ್ಟ್‌ನಲ್ಲಿ ಕಂಡು ಬರುತ್ತದೆ. ಈ ಪದ್ಧತಿ ಸುಮಾರು ೧೭೦೦ ವರ್ಷಗಳಿಗಿಂತಲೂ ಹಿಂದಿನದು ಎಂದು ಗುರುತಿಸಿದ್ದಾರೆ. ವೇದಗಳ ತರುವಾಯ ಪುರಾಣಕಾಲದಲ್ಲಿ ಧರ್ಮಾಚರಣೆಯನ್ನು ಸರಳಗೊಳಿಸಲಾಯಿತು. ವರ್ಣ ವ್ಯವಸ್ಥೆಯು ಕೂಡ ಸಂಪೂರ್ಣ ಕಟ್ಟುನಿಟ್ಟಾಗಿತ್ತು ಮತ್ತು ಸಮಾಜೋ–ಧಾರ್ಮಿಕ ಏಣಿ–ಶ್ರೇಣಿಯಲ್ಲಿ ಮೊದಲ ದರ್ಜೆಯ ಸ್ಥಾನವನ್ನು ಪುರೋಹಿತ ಆಕ್ರಮಿಸಿಕೊಂಡಿದ್ದ. ಆಗ ಕ್ಷತ್ರಿಯರು ತಮ್ಮ ಆಡಳಿತದಲ್ಲಿ ಆನೇಕ ಮಂದಿ ನಾಯಕಸಾನಿಯರನ್ನು ಇಟ್ಟುಕೊಂಡು ವೈಭವದಿಂದ ಮೆರೆಯುತ್ತಿದ್ದರು. ಇದನ್ನು ಸಹಿಸದ ಪುರೋಹಿತವರ್ಗ ದೇವಾಲಯಗಳ ಸೇವೆಗಾಗಿ ಹುಡುಗಿಯರನ್ನು ಒಪ್ಪಿಸುವ ಮತ್ತು ಅರ್ಪಿಸುವ ಪವಿತ್ರ ಕಾರ್ಯವೆಂದು ಬೋಧಿಸತೊಡಗಿದರು. ಭೂತ ಪ್ರೇತಗಳಿಗೆ ಸುಂದರ ಹುಡುಗಿಯರನ್ನು

ಆರ್ಪಿಸಿದರೆ ವಿಪತ್ತು ಮತ್ತು ತೊಂದರೆಗಳನ್ನು ನಿವಾರಿಸಬಹುದೆಂದು ಪ್ರಚಾರ ಮಾಡಿದರು. ಧಾರ್ಮಿಕ ಸಾಹಿತ್ಯಗಳ ಮೂಲಕ ಗಂಡುಸಂತಾನವಿಲ್ಲದೆ ಹೋದರೆ ಸ್ವರ್ಗದಲ್ಲಿ ಸ್ಥಾನವಿರುವುದಿಲ್ಲವೆಂದು ಮತ್ತು ಗಂಡುಸಂತಾನ ಬಯಸುವವರು ಈಗಾಗಲೇ ಇರುವ ಹೆಣ್ಣುಮಕ್ಕಳನ್ನು ದೇವಾಯಲಕ್ಕೆ ಆರ್ಪಿಸಿದರೆ ಗಂಡುಸಂತಾನವಾಗುವುದೆಂದು ಸಾಮಾನ್ಯ ಜನತೆಗೆ ಸಲಹೆ ಮತ್ತು ಸೂಚನೆ ನೀಡುತ್ತಿದ್ದರು. ಅಲ್ಲದೆ ಕೆಳಜಾತಿಯ ಜನರು ಚಿಕ್ಕ ವಯಸ್ಸಿನ ಹುಡುಗಿಯರನ್ನು ದೇವರ ಹೆಸರಿಗೆ ಬಿಡಬೇಕೆಂಬ ಸಮಾಜೋ-ಧಾರ್ಮಿಕ ನಿಬಂಧನೆಯೊಂದನ್ನು ಅವರ ಮೇಲೆ ಹೇರುವಷ್ಟು ಸಮರ್ಥರಾಗಿದ್ದರು.

ದೇವದಾಸಿ ಶಬ್ದ ಸಂಸ್ಕೃತ ಭಾಷೆಯಿಂದ ಬಂದದ್ದು. ಸ್ಥಳೀಯವಾಗಿ ಇವರನ್ನು ಸೂಳೆ, ಬಸವಿ, ಸಾನಿ, ಕಸಬಿ ಮತ್ತು ಕಟ್ಟಿಕೊಂಡವಳು-ಹೀಗೆ ಇನ್ನೂ ಅನೇಕ ಹೆಸರುಗಳಿಂದ ಕರೆಯಲಾಗಿದೆ. ಅನೇಕ ವಸ್ತುಗಳಂತೆ ತಮ್ಮ ಸಂಕಷ್ಟಗಳ ಪರಿಹಾರಕ್ಕೆ ಭಕ್ತರು ನೀಡಲ್ಪಟ್ಟ ಕಾಣಿಕೆಗಳೇ ಈ ದೇವದಾಸಿಯರು. ಅವರ ಕರ್ತವ್ಯಗಳ ಅಧಾರದ ಮೇಲೆ ಇವರನ್ನು ಅನೇಕ ಹೆಸರಿನಿಂದ ಕರೆದಿದ್ದರೂ ಎಲ್ಲಾರೂ ಲೈಂಗಿಕವಾಗಿ ಜಾಗೃತರಾಗಬೇಕು ಅಂದರೆ ಪುರುಷರ ಸಂಗ ಮಾಡಬೇಕು. ಆದರೆ ತನ್ನ ಎಳೆಯ ವಯಸ್ಸಿನಲ್ಲಿ ತಿಳಿಯದೆ, ತಂದೆ-ತಾಯಿಗಳ ಅಜ್ಞಾನದಿಂದ ದೇವದಾಸಿಯಾದ ಹುಡುಗಿ ಸೂಳೆಯಾಗಿ ತನ್ನ ಬಾಳು ಸಾಗಿಸಿ, ವಯಸ್ಸಾದಂತೆ ರೋಗಿಷ್ಟೆಯಾಗಿ ತನ್ನ ಮನೆಗೆ ಹಿಂದಿರುಗುತ್ತಾಳೆ. ಗಂಡ, ಮಕ್ಕಳಿಲ್ಲದ ಈಕೆಗೆ ಮತ್ತೆ ನೆರವಾಗುವುದು ಆಕೆಯ ಧಾರ್ಮಿಕ ಸಂಪ್ರದಾಯ. ಪುಣ್ಯಕ್ಷೇತ್ರ, ಇವರನ್ನು ಜೋಗತಿಯರನ್ನಾಗಿ ಮಾಡಿ ಮತ್ತೆ ತಮ್ಮ ಸೇವೆಗೆ ತೆಗೆದುಕೊಂಡು ಆಕೆಯ ಶೋಷಣೆ ಮುಂದುವರಿಯುತ್ತದೆ. ಇದಕ್ಕೆ ಭಕ್ತರ ಅಜ್ಞಾನ, ಬಡತನ, ಶೋಷಣೆ, ಸದಾ ಅನಾವೃಷ್ಟಿ ಹೊಂದಿದ ವಾತಾವರಣಗಳೇ ಈ ಪದ್ಧತಿಗೆ ಕಾರಣ[೨೫] **(ಕೆ.ಜಿ. ಗುರುಮೂರ್ತಿ; ೧೯೯೬)**. ದೇವದಾಸಿಯ ಉಗಮ ಮತ್ತು ಬೆಳವಣಿಗೆಯ ಬಗ್ಗೆ ಹೆಚ್ಚು ಚರ್ಚೆಯನ್ನು ಗಮನಿಸಿದರೆ ಇಲ್ಲಿ ಸಾಮಾಜಿಕ ಸಿದ್ಧಾಂತಗಳಿಂದ ಈ ವ್ಯವಸ್ಥೆ ಹೇಗೆ ಸಂಬಂಧವಿದೆ ಎಂಬುದನ್ನು ತಿಳಿಸಿದ್ದಾರೆ. ವೃತ್ತಿ ಮತ್ತು ಮಾತೃ ದೇವತೆಗಳ ಸಿದ್ಧಾಂತ, ಧಾರ್ಮಿಕ ಸಂಪ್ರದಾಯ ಸಿದ್ಧಾಂತ, ಸಂಸ್ಕೃತೀಕರಣ ಸಿದ್ಧಾಂತ, ಜನಾಂಗೀಯ, ರಾಜಕೀಯ ಮತ್ತು ನಿಸ್ವಾರ್ಥ, ಮಾತೃ ಪ್ರಧಾನತೆಯಿಂದ ಪುರುಷ ಪ್ರಧಾನತೆಗೆ ಮುಂತಾದ ಸಿದ್ಧಾಂತಗಳಲ್ಲಿ ಇದರ ಉಗಮದ ಬಗ್ಗೆ ಉಲ್ಲೇಖಗಳಿವೆ. ದೇವರ ಹೆಸರಲ್ಲಿ ಮಹಿಳೆಯರನ್ನು ಅರ್ಪಿಸುವುದು ಸಾರ್ವತ್ರಿಕ ಆಚರಣೆಯಾಗಿತ್ತು.

ದೇವದಾಸಿ ಪದ್ಧತಿಯು ಭಾರತಕ್ಕೆ ಯಾವ ಸಂದರ್ಭದಲ್ಲಿ ಬಂತು? ಈ ಪದ್ಧತಿಯ ಪ್ರಸ್ತುತದ ಒಲವುಗಳೇನು? ಮತ್ತು ಇನ್ನೂ ಏಕೆ ಮುಂದುವರಿಯುತ್ತಿದೆ? ಈ ತರದ ಪ್ರಶ್ನೆಗಳಿಗೆ. ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ತೆಲಸಂಗ ಎಂಬ ಹಳ್ಳಿಯಲ್ಲಿ ೧೯೮೬-೮೮ರವರಗಿನ ಅಧ್ಯಯನದಲ್ಲಿ ಸಮಾಜದಲ್ಲಿ ಧರ್ಮ ತುಂಬಾ ಸಂಕೀರ್ಣವಾದ ಮತ್ತು ಮನುಷ್ಯನ ಎಲ್ಲಾ ಚಟುವಟಿಕೆಯಲ್ಲಿ ಸಕ್ರಿಯವಾದ ಪಾತ್ರವನ್ನು ರೂಪಿಸಿಕೊಂಡಿದೆ. ದೇವದಾಸಿ ಸಂಪ್ರದಾಯದ ವಿಕಾಸವು ಭಾರತಕ್ಕೆ ಅರ್ಯರ ಅಗಮನಕ್ಕಿಂತ ಮುಂಚಿತವಾಗಿಯೇ ಇತ್ತು, ದ್ರಾವಿಡರ ಮಾತೃಪ್ರಧಾನ

ಸಮಾಜದ ಸ್ಮಾರಕ, ಅವಶೇಷಗಳಲ್ಲಿ ಈ ಪದ್ಧತಿಯನ್ನು ಕಾಣಲಾಗಿದೆ. ದಕ್ಷಿಣದಲ್ಲಿ ಆರ್ಯರ ಆಕ್ರಮಣದಿಂದ ಸಂಸ್ಕೃತಿಯಲ್ಲೆವು ಸಾಂಸ್ಕೃತೀಕರಣಗೊಂಡು ಮತ್ತು ಬ್ರಾಹ್ಮಣತ್ವದ ತಾತ್ವಿಕತೆಯು ದ್ರಾವಿಡರಲ್ಲಿಯು ಸಹ ಎಲ್ಲಾ ಕಡೆ ವಿಸ್ತರಿಸಿಕೊಂಡಿತು. ಈ ದೇವದಾಸಿ(ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು ನಂತರ ಆರ್ಯರ ಮತ್ತು ಜಮೀನುದಾರಿಗಳ ವಂಚನೆಯಿಂದ ಮತ್ತು ಒತ್ತಾಯದ ನಡುವೆ ಈ ಪದ್ಧತಿ ವೈಬವೀಕರಿಸಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ಥಿತ್ವದಲ್ಲಿ ಬಂತು.[೧೬]**(ಶಂಕರ್‌ಜೋಗನ್; ೧೯೮೮).** ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಂಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗ ತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ, ಮತ್ತು ಸಾಂಸ್ಕೃತಿಕ ಆಚರಣೆಗಳಿಂದ ಕೂಡಿದೆ.(ಲಾರೆನ್ ಬೇತ್ ಜಾಕೋಬ್ಸ್). ದೇವದಾಸಿ ಪದ್ಧತಿ ಸ್ವಾತಂತ್ರ ಬಂದ ಮೇಲೂ ಕೆಲವು ಪ್ರದೇಶಗಳಲ್ಲಿ ಪದ್ಧತಿಯು ಜೀವಂತವಾಗಿದೆ ಹಾಗೂ ದಲಿತ ಮಹಿಳೆಯರ ಭಾವನಾತ್ಮಕ, ಆರೋಗ್ಯ ಮತ್ತು ಘನತೆಯ ವಿಚಾರಗಳಲ್ಲಿ ಅಡಚಣೆ ಯುಂಟಾಗಿವೆ[೧೭]**(ಮ್ಯಾಜೀ ಬ್ಲಾಕ್, ೨೦೦೦)** ಕಾಲ ಕ್ರಮೇಣ ದೇವದಾಸಿಯರು ತಮ್ಮ ಸಂಪ್ರದಾಯಿಕ ಪಾತ್ರ, ಕ್ರಿಯಾವಿಧಿಗಳನ್ನು ಬಿಟ್ಟು, ಸಮಾಜ ಮತ್ತು ದೇವಸ್ಥಾನಗಳಿಂದ ಹೊರಬಂದು ವ್ಯಾಪಾರದ ವೇಶ್ಯಾವಾಟಿಕೆಗೆ ರೂಪಾಂತರಗೊಂಡಿದ್ದಾರೆ. ಅಂಧಾನುಕರಣೆ ಮತ್ತು ಬಡತನ ಈ ಪದ್ಧತಿಗೆ ಬಹು ಮುಖ್ಯ ಕಾರಣ. ಇದಲ್ಲದೆ ಸಮಾಜದಲ್ಲಿ ಗಂಡಸಿನ ಅಶ್ರಯದಾತನ ವ್ಯವಸ್ಥೆಯಲ್ಲಿ ಧರ್ಮವು ಸಂಸ್ಕೃತಿಯನ್ನು ತನ್ನಷ್ಟಕ್ಕೆ ತಾನೆ ಅನುರೂಪಗೊಳಿಸಿದೆ. ನಂಬಿಕೆ, ಮೌಲ್ಯಗಳು ಮತ್ತು ಮಾನವನ ನಡವಳಿಕೆಗಳು ಗಂಡಸರಿಂದ ಆಕ್ರಮಣಕೊಳಪಟ್ಟಿವೆ. ಭಾರತದಲ್ಲಿ ಹಿಂದುಗಳಲ್ಲದೇ ಜೈನ್, ಬುದ್ಧಿ ಸಂಗಳಲ್ಲಿಯೂ ಸಹ ಈ ಪದ್ಧತಿಯನ್ನು ನೋಡಬಹುದು ಎಂದು ಚೀನಿಯಾತ್ರಿಕ ಚಾ–ಹು–ಕ್ವಾ ಅಭಿಪ್ರಾಯಪಟ್ಟಿದ್ದಾನೆ.[೧೮] **(ತಾರಾಚಂದ್ ಕೆ.ಸಿ: ೧೯೮೭)**

ಡಾ. ಅಂಬೇಡ್ಕರವರು ಸಹ ೧೯೩೬ ಜೂನ್ ತಿಂಗಳಿನಲ್ಲಿ ಬಾಂಬೆಯಲ್ಲಿ ಹಲವು ಸಭೆಗಳನ್ನು ಉದ್ದೇಶಿಸಿ ಮಾತನಾಡಿದ್ದರು ಅದರಲ್ಲಿ ಮುಖ್ಯವಾಗಿ ಕಮಾಟಿಪುರದ ವೃತ್ತಿನಿರತವಾಗಿ ಮತ್ತು ದೇವದಾಸಿ ಪದ್ಧತಿಯ ಹಿನ್ನಲೆಯಿಂದ ಬಂದು ವೇಶ್ಯಾವೃತ್ತಿಯನ್ನು ಮಾಡುತ್ತಿದ್ದವರು ಮತ್ತು ದೇವದಾಸ/ಜೊಗಯ್ಯ/ಹಿಜಡಾಗಳೂ ಸಹ ಸಭೆಯಲ್ಲಿ ಹಾಜರಿದ್ದರು ಅಂಬೇಡ್ಕರವರು ಈ ಪದ್ಧತಿಯ ಬಗ್ಗೆ ಮತ್ತು ಮಹರ್ ಜಾತಿಯಲ್ಲಿ ಹುಟ್ಟಿ ಇಂತಹ ವೃತ್ತಿಯನ್ನು ಆಯ್ಕೆಮಾಡಿಕೊಂಡವರನ್ನು ಕಟುವಾಗಿ ಟೀಕಿಸಿದರು ಇದಕ್ಕೆ ಪೂರಕವಾಗಿ ಶಾಹುಮಾಹಾರಜರು ೧೯೨೧ರಲ್ಲಿ ಈ ಪದ್ಧತಿಯ ನಿಯಂತ್ರಣಕ್ಕೆ ಕಾಯ್ದೆಯನ್ನು ಹೊರಡಿಸಿದ್ದರು. ಹೊಲೆಯ(ಮಹಾರ) ಮಾದಿಗ(ಮಾಂಗ), ತಳವಾರ, ಕಬ್ಬಲಿಗ, ದಾಸ, ಬೇಡ, ಕೋಳಿ, ನಾಯಕ, ಕುರುಬ(ದನಗರ) ಕುಣಬಿ, ಭಂಡಾರಿ ಮೊದಾಲಾದ ಜಾತಿ ಜನಾಂಗಗಳಲ್ಲಿ ಈ ಪದ್ಧತಿಯನ್ನು ಪಾಲಿಸಿಕೊಂಡು ಬರಲಾಗಿದೆ.[೧೯]**(ಉತ್ತಮ ಕಾಂಬಳೆ;೨೦೧೩)**

ಒಡಿಸ್ಸಾದ ಪೂರಿ ಜಗನ್ನಾಥ ದೇವಾಲಯದಲ್ಲಿದ್ದ ಇಬ್ಬರು ದೇವದಾಸಿಯರಾದ ಶಶಿಮಣಿದೇವಿ ಮತ್ತು ಪರಸಾಮಣಿ ದೇವಿ ಇಬ್ಬರನ್ನು ಸಂದರ್ಶಿಸಿದ ಲೇಖನದಲ್ಲಿ; ಇಬ್ಬರ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ಪ್ರಸ್ತುತದಲ್ಲಿ ದೇವಸ್ಥಾನದಲ್ಲಿ ಯಾವುದೇ ಸೌಕರ್ಯಗಳು ದೊರಕುತ್ತಿಲ್ಲ ಮತ್ತು ಸರ್ಕಾರದಿಂದ ಶಶಿಮಣಿ ದೇವಿಗೆ ಮತ್ತು ಪರಸಾಮಣಿ ದೇವಿಗೆ ಒಂದಿಷ್ಟು ಮಾಸಾಶನದ ಬೆಂಬಲದಿಂದ ಮಾತ್ರ ತಮ್ಮ ಕೊನೆಯ ಜೀವನವನ್ನು ಕಳೆಯುತ್ತಿದ್ದಾರೆ. ಇಲ್ಲಿ ದೇವದಾಸಿಯರ ಕೆಲಸ ಕಾರ್ಯಗಳು ದೇವಸ್ಥಾನ ಮತ್ತು ಅದರ ಜಗತ್ತಿನೊಳಗೆ ಮಾತ್ರ ನಡೆಯುತ್ತಿದ್ದವು.[೨೦]**(ಶಾರದ ಲಹಂಗಿರ್, ೨೦೧೨)** ಅರುಂಧತಿಯಾರ್ ಸಮುದಾಯದಲ್ಲಿ ತಮ್ಮ ಕುಲದೇವತೆಗಳ ಹೆಸರಲ್ಲಿ ಹೆಣ್ಣು ಮಕ್ಕಳನ್ನು ಮಾತಮ್ಮನಿಗೆ ಅರ್ಪಿಸುವುದು ವಾಡಿಕೆ ಇಲ್ಲಿನ ದೇವದಾಸಿಯ ತರ. ಇಲ್ಲಿಯ ದೇವಿಯನ್ನು ತನ್ನ ಅನುಮತಿಯಿಲ್ಲದೆ ದೇವರಿಗೆ ಅರ್ಪಿಸಿ ಉನ್ನತ ಜಾತಿಯ ಮತ್ತು ತನ್ನ ಸಮುದಾಯದ ಗಂಡಸರು ತಮ್ಮ ಕಾಮತೃಷೆಯನ್ನು ತೀರಿಸಿಕೊಳ್ಳುತ್ತಿದ್ದರು.[೨೧]**(ಎಸ್.ಆನಂದಿ; ೨೦೧೩)** ದಕ್ಷಿಣ ಭಾರತದಲ್ಲಿ ಜಾತಿ ಪದ್ಧತಿ ಪ್ರಸ್ತುತದಲ್ಲಿಯೂ ಸಹ ಸಾಂಸ್ಥಿಕ ರೂಪದ ತಾರತಮ್ಯವನ್ನು ಮೇಲ್ವರ್ಗದ ಪುರುಷರಿಂದ ಕೆಳ ಜಾತಿಯ ಮಹಿಳೆಯರು ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಜಾತಿಯಾಧಾರಿತವಾದ ಕೀಳುಮಟ್ಟದ ವೃತ್ತಿಯಲ್ಲಿ ಹಲವಾರು ಮಹಿಳೆಯರು ಆಚರಣೆಯನ್ನು ಮಾಡುತ್ತಿದ್ದಾರೆ. ದೇವದಾಸಿ ಪದ್ಧತಿಯಲ್ಲಿ ದೇವತೆ/ರಿಗೆ ಅರ್ಪಿಸಿಕೊಂಡರೆ ಇನ್ನಾವುದೇ ಕಾರಣದಿಂದ ಪರಪುರುಷರನ್ನು ಮದುವೆಯಾಗುವಂತಿಲ್ಲ. ಜೊತೆಗೆ ತನ್ನ ವಯಸ್ಸು ಇರುವವರೆಗೂ ಪರಪುರುಷರ ಲೈಂಗಿಕ ತೃಷೆಯನ್ನು ತೀರಿಸುವ ಗುಲಾಮಗಿರಿಯಾಗಿರಬೇಕು. ದೇವಸ್ಥಾನದಲ್ಲಿ ಪೂಜಾರಿಯು ದಲಿತ ಸಮುದಾಯಕ್ಕೆ ಇಲ್ಲಸಲ್ಲದ ಕಥೆಯನ್ನು ಕಟ್ಟಿ ದೇವರಿಗೆ ದಲಿತ ಯುವತಿಯರನ್ನು ಅರ್ಪಿಸಲು ಪರೋಕ್ಷವಾಗಿ ಅಣಿಮಾಡಿ ಅದರ ಆಚರಣೆಯನ್ನು ಮಾಡುತ್ತಿದ್ದರು. ಕರ್ನಾಟಕದಲ್ಲಿ ಸುಮಾರು ಲಕ್ಷಕ್ಕೂ ಹೆಚ್ಚು ದೇವದಾಸಿಯರಿದ್ದಾರೆಂದು ಅಂದಾಜಿಸಿದ್ದಾರೆ. ಶೇಕಡಾ ೯೯ರಷ್ಟು ದಲಿತ, ಅದಿವಾಸಿ ಹಾಗೂ ಹಿಂದುಳಿದ ಜಾತಿಗಳಿಂದ ಬಂದವರಾಗಿದ್ದಾರೆ. ವೇಶ್ಯಾವೃತ್ತಿಯು ಹೊಸತೆರನಾದ ಶೋಷಣೆಯ ಪರಂಪರೆಯನ್ನು ತುಂಬಾ ಕಾಲದವರೆಗೂ ಕಾಯ್ದಿಟ್ಟಿದೆ. ಮಧ್ಯಪ್ರದೇಶ ದಲ್ಲಿಯೂ ಸಹ ಬೇಡಿಯಾ ಸಮುದಾಯವು ಸಭೆ ಸಮಾರಂಭಗಳಲ್ಲಿ ನೃತ್ಯ ಮಾಡುವುದು ಮತ್ತು ಲೈಂಗಿಕ ವೃತ್ತಿಯನ್ನು ಮಾಡುವುದು ಅವರಿಗೂ ಸಹ ಮದುವೆಯಿಲ್ಲ ಆದರೆ ದೇವದಾಸಿ ಪದ್ಧತಿಯೆಂದು ಕರೆಯುವುದಿಲ್ಲಾ. ಇದು ಮುಂದುವರಿದು ಐಷರಾಮಿಯ ವೇಶ್ಯಾವೃತ್ತಿಯಲ್ಲಿ ಈ ಹೆಣ್ಣುಮಕ್ಕಳು ತೊಡಗಿಕೊಂಡಿದ್ದಾರೆ.**(ಕಬೀರ್‌ಶರ್ಮ:೨೦೧೫)** ದೇವದಾಸಿ ಪದ್ಧತಿಯ ಉಗಮ, ಅರ್ಪಣೆಯ ಪ್ರಕ್ರಿಯೆಗಳು, ಅರ್ಪಣೆಯ ನಂತರದ ಜೀವನದ ಸ್ಥಿತಿಗಳನ್ನು ವಿಶ್ಲೇಷಿಸಿದ್ದಾರೆ, ದೇವದಾಸಿ ಸಂಸ್ಕೃತಿ ಧೀರ್ಘವಾಗಿ ಮತ್ತು ನಿರಂತರವಾಗಿರುವುದಕ್ಕೆ ಬಹುಮುಖ್ಯ ಅಂಶಗಳೆಂದರೆ ಧಾರ್ಮಿಕತೆ, ಸಾಮಾಜಿಕ ಮತ್ತು ಆರ್ಥಿಕತೆಗಳಾದ ಈ ಮೂರು ಅಂಶಗಳು ಕಾರಣವಾಗಿವೆ. ಇವು ಒಂದೊಕ್ಕೊಂದು ಅಂತರ್ ಸಂಬಂಧವನ್ನು ಹೊಂದಿವೆ. ದಲಿತರಲ್ಲಿ ಹೊಲೆಯರು, ಮಾದಿಗರು, ಸಮಗಾರ ಮತ್ತು ಭೋವಿ ಸಮುದಾಯದವರು ಈ ಪದ್ಧತಿಗೆ ಬಲಿಯಾಗಿದ್ದಾರೆ ಎಂಬುದನ್ನು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ[೨೨]**(ಪ್ರತಿಭಾ ಬಿ. ದೇಸಾಯಿ; ೨೦೧೨).**

ದೇವದಾಸಿಯರು ಕ್ರಮೇಣ ಹೇಗೆ ಕಲಾವಿದರಾದರು. "ನಾವು ದೇವದಾಸಿಯರಲ್ಲ; ಕಲಾವಿದರು" ಎನ್ನುವ ಸ್ವಾಭಿಮಾನದ ಮಾತು ಬರೀ ಸುಮ್ಮನೆ ಬರುವುದಿಲ್ಲಾ ಏಕೆಂದರೆ ಅದರೊಳಗೆ ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಯಾಜಮಾನಿಕೆಯಿಂದ ನೊಂದು-ಬೆಂದು ತಮ್ಮ ಐಡೆಂಟಿಟಿಯನ್ನು ಕಲಾವಿದರನ್ನಾಗಿ ಮಾರ್ಪಡಿಸಿದ ಹಿನ್ನಲೆ ಮತ್ತು ಮಹಿಳೆ ಯಾಗಲೂ ಎರಡನೇ ದರ್ಜೆಯ ವ್ಯಕ್ತಿಯಾಗಿ ನೋಡುವ ಸಮಾಜ ಅದರಲ್ಲಿ ವಿಶೇಷವಾಗಿ ಕಲೆಯನ್ನು ಕಲಿಸುವಲ್ಲಿನ ತಾರತಮ್ಯ ಮತ್ತು ಕಲಿತ ಮೇಲೆ ಅದರ ನಿರ್ವಹಣೆಯಲ್ಲಿನ ರಾಜಕಾರಣ ಎಲ್ಲವನ್ನು ಪ್ರತ್ಯಕ್ಷವಾಗಿ ಕಾಣಬಹುದು. ಈ ಜ್ಞಾನದಿಂದ ವಿದ್ಯೆ, ಹಣ ಮತ್ತು ಸಾಮಾಜಿಕ ಸ್ಥಾನಮಾನಗಳು ಬರುತ್ತವೆ ಎಂಬುದು ಇವರ ನಂಬಿಕೆ. ಗ್ರಾಮೀಣ ಪ್ರದೇಶದಲ್ಲಿ ನಡೆಯುವ ನಾಟಕಗಳಲ್ಲಿ ಹೆಣ್ಣುಪಾತ್ರಕ್ಕೆ ದೇವದಾಸಿ ಹೆಂಗಸರೇ ಬೇಕಾಗಿತ್ತು ಆದರೆ ಇವರ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿರುವುದರಿಂದ ಇಂತಹ ನಾಟಕಗಳೇ ಕಡಿಮೆಯಾಗಿವೆ ಎನ್ನುವ ಕಲಾವಿದರ ವಾದ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಜಾತಿ ಶ್ರೇಣಿಕರಣಕ್ಕೆ ಅನುಗುಣವಾಗಿರುವ ಲಿಂಗ ಶ್ರೇಣಿಕರಣ ಇವುಗಳಿಗೆ ಪೂರಕವಾಗಿ ಹೊಂದಿ ಕೊಂಡಿರುವಂತಹ ಹಳೆಯ ಸಾಮಾಜಿಕ ಅಂದಾನುಕರಣೆಯ ಆಚರಣೆಗಳು ಚಾಲ್ತಿಯಲ್ಲಿರುತ್ತವೆ. ಆದರೂ ಸಹ ಹಳ್ಳಿಗಳ ನಾಟಕಗಳಲ್ಲಿ ತಳ ಸಮುದಾಯಗಳಿಂದ ಬಂದಂತಹ ಮಹಿಳೆಯರೇ ಈಗಲೂ ಸಹ ನಿರ್ವಹಿಸುತ್ತಿದ್ದಾರೆ[೨೬] **(ಶೈಲಜಾ ಹಿರೇಮಠ; ೨೦೧೧)**.

ಭಾರತದಲ್ಲಿ ವೇಶ್ಯಾವಾಟಿಕೆಯ ಬಗ್ಗೆ ವಿಶ್ಲೇಷಣಾತ್ಮಕವಾದಂತಹ ಸತ್ಯಗಳನ್ನು ಪ್ರಚಲಿತದಲ್ಲಿ ಮಾರುಕಟ್ಟೆಯ ಸರಕಿನ ಮಾದರಿಯದ್ದು ಮತ್ತು ಮಹಿಳೆಯರ ಮತ್ತು ಮಕ್ಕಳ ದೇಹ ಮತ್ತು ಮನಸ್ಸನ್ನು ಗಂಡಸರ ಕಾಮತೃಷೆಗೆ, ಅಧಿಕ ಸಂಪಾದನೆಗೆ ಒಳ್ಳೆಯ ವ್ಯವಸ್ಥೆಯಾಗಿತ್ತು. ಅಂತರರಾಷ್ಟ್ರೀಯ ಮಟ್ಟದಲ್ಲಿ ವೇಶ್ಯಾವಾಟಿಕೆಯು ಒಂದು ಲಾಭತರುವಂತಹ ಉದ್ಯಮವಾಗಿದೆ. ಭಾರತದಲ್ಲಿ ಈ ಪದ್ಧತಿಯು ಗಂಬೀರವಾದ ಸಾಮಾಜಿಕವಾದ ಸಮಸ್ಯೆಯಾಗಿದೆ. ಈ ವೃತ್ತಿಯು ದೇಶದ ದೊಡ್ಡ ಮಾಹಾ ನಗರಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತದೆ. ಇದರ ಬಗ್ಗೆ ನಿಖರವಾದ ದಾಖಲೆ ಅಥವಾ ವರದಿಗಳು ಇಲ್ಲಾವಾಗಿರುವುದರಿಂದ ಇವರ ಅಂಕಿ ಸಂಖ್ಯೆಗಳನ್ನು ನಿಖರವಾಗಿ ಹೇಳಲು ಸಾದ್ಯವಿಲ್ಲ. ಉಗಮ, ಕಾರಣಗಳು, ಸಮಸ್ಯೆಗಳು, ಪರಿಮಾಣ, ಪ್ರಚಲಿತ ವಿಷಯಗಳು ಮತ್ತು ಒಲವುಗಳ ಬಗ್ಗೆ ವಿಶ್ಲೇಶಣೆಯನ್ನು ಮಾಡಲಾಗಿದೆ ಹಾಗೆ ದೇವದಾಸಿಯ ಪದ್ಧತಿಗೆ ಮೂಲ ಕಾರಣ ಜಮೀನುದಾರ ಮತ್ತು ಪೂಜಾರಿಗಳ(ಪುರೋಹಿತರ) ದ್ರೋಹ ಮತ್ತು ವಂಚನೆಯಿಂದ, ಮೂಡನಂಬಿಕೆ, ಬಡತನಗಳಿಂದ ಈ ಪದ್ಧತಿ ಹೆಚ್ಚು ಚಾಲ್ತಿಗೆ ಬಂತು ಎಂದು ತಿಳಿಸಿದ್ದಾರೆ.[೨೭] **(ಜಯಕುಮರ್ ಕೆ ಮತ್ತು ದಿಭಾರತಿ ಹಾಲ್ದಾರ್)** ಭಾರತದಲ್ಲಿ ದೇವದಾಸಿಯರ ಆಚರಣೆಯಲ್ಲಿ ಲೈಂಗಿಕವಾಗಿ ಆಕೆಯನ್ನು ಮಾತ್ರ ಶೋಷಿಸದೆ ಇಡೀ ಕುಂಟುಂಬವನ್ನು ಸಾಂಸ್ಥಿಕವಾಗಿ ಶೋಷಿಸಿದ್ದಾರೆ. ಅದರಲ್ಲೂ ತಳಸಮುದಾಯದಲ್ಲಿ ಮಾತೃ ಮತ್ತು ದೇವತೆಯ ಭಾವನೆಯಿಂದ ನಂಬಿಸಿ ಇವರ ಮಾನಸಿಕ ಸ್ಥಿತಿಗತಿಯನ್ನು ಅರಿತು, ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅಂತರ್ಗತ

ಮಾಡಿದ್ದಾರೆ ಮತ್ತು ಬದುಕು ಸಾರ್ವಜನಿಕವಾಗಿ ಪ್ರಾರಂಬಿಸಿ ಸಾರ್ವಜನಿಕವಾಗಿ ಕೊನೆಗೊಳ್ಳುತ್ತಿತ್ತು. ಇಲ್ಲಿ ದೇವದಾಸಿಯರ ಸಾಂಸ್ಕೃತಿಕ ಕಲೆಗಳನ್ನು ಗೌರವಿಸಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಮಟ್ಟದ ಜೀವನವನ್ನು ನಡೆಸುವಂತಾಯಿತು[೨೫](**ಜೋಯಾ ಜೈದಿ; ೨೦೦೫**). ವೇಶ್ಯಾವಾಟಿಕೆಯನ್ನು ಅತ್ಯಂತ ಪ್ರಾಚೀನ ವೃತ್ತಿ ಎಂದು ಹೇಳುವಾಗಲೇ ಈ ಸಾಮಾಜಿಕ ವ್ಯವಸ್ಥೆಯ ದ್ವಿಮುಖ ಧೋರಣೆ ಬಯಲಾಗುತ್ತದೆ. ವೇಶ್ಯಾವಾಟಿಕೆ ಪ್ರಾಚೀನದಿಂದಲೂ ಮೆರೆದಿರುವ ದೌರ್ಜನ್ಯದ ಪ್ರತೀಕ. ವೇಶ್ಯಾವಾಟಿಕೆ ಎನ್ನುವಾಗಲೇ ಮಡಿವಂತಿಕೆಯ ಸಮಾಜಕ್ಕೆ ಪ್ರಾಚೀನ ವೃತ್ತಿ ಎಂಬ ಗರಿಮೆಯನ್ನು ಕಣ್ಣಿಗೆ ರಾಚುತ್ತದೆ. ಧರ್ಮ, ಪರಂಪರೆಯ ಪ್ರಾಚೀನತೆಯ ಐತಿಹಾಸಿಕ ಮಜಲುಗಳ ಸಿದ್ಧಾಂತಗಳ ಬೇರುಗಳಲ್ಲಿಯ ಅಗತ್ಯ ಅನಿವಾರ್ಯತೆಗಳ ನೆಲೆಗಟ್ಟಿನಲ್ಲಿ ನೋಡಬೇಕಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ಪಾತಿವ್ರತ್ಯದ ಕೋಟೆ ನಿರ್ಮಿಸುತ್ತಲೇ ಗಂಡು ಸ್ವೇಚ್ಛಾಚಾರಿಯಾಗಿಯೂ ಬದುಕುನ್ನು ತನ್ನ ಬಯಕೆ ಗಳಿಗನುಸಾರವಾಗಿ ರೂಪಿಸಿಕೊಳ್ಳುತ್ತಾ ಹೋಗಿದ್ದರ ಪ್ರತಿಫಲವೇ ವೇಶ್ಯಾವಾಟಿಕೆಯ ಉಗಮಕ್ಕೆ ಕಾರಣವಾಗಿದೆ. "ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಟ್ಟು ಸೇವೆ ಸಲ್ಲಿಸುವ ಅವಿವಾಹಿತ ಮಹಿಳೆ ದೇವದಾಸಿ" ಎಂದು ಗುರುತಿಸಿದ್ದಾರೆ. ಹಾಗೆ ವೇಶ್ಯಾ ವೃತ್ತಿಯು ಧಾರ್ಮಿಕ ಹಿತಾಶಕ್ತಿಯ ಕಟ್ಟುಪಾಡುಗಳ, ಮೂಢನಂಬಿಕೆ, ದೈವಭಕ್ತಿ, ಪರಂಪರೆ ಹೀಗೆ ಮುಂತಾದ ಮನೋ ಸಾಮಾಜಿಕವಾದಂತಹ ಕಟ್ಟಲೆಗಳಿಗೆ ಮಹಿಳೆ ತನ್ನನ್ನು ತಾನು ಬೆತ್ತಲೆಯಾಗಿಸುವ ಪ್ರಕ್ರಿಯೆ. ಬೂದಿ ಮತ್ತು ಪೊಡ್ಡಿ ಎಂಬ ಇಬ್ಬರು ದೇವದಾಸಿಯರು ಕರ್ನಾಟಕದ ದೇವಾಲಯದ ಸೂಳೆಯರಲ್ಲಿ ಮೊದಲಿಗರು. ಇಲ್ಲಿ ಲೈಂಗಿಕ ಕಾರ್ಯಕರ್ತರಿಗೂ ಮತ್ತು ದೇವಾದಾಸಿಯರಿಗೂ ನಿಕಟ ಸಂಬಂಧವಿದೆ[೨೬] (**ಲೀಲಾ ಸಂಪಿಗೆ**) ವೇಶ್ಯಾಜಗತ್ತಿನ ಅನಾವರಣ ಕೆಂಗುಲಾಬಿ ಎಂಬ ಕಾದಂಬರಿಯಲ್ಲಿ ಲೈಂಗಿಕ ವೃತ್ತಿ ಜಗತ್ತಿನ ತುತ್ತು ಅನ್ನಕ್ಕಾಗಿ ಈ ಕಾರ್ಯಕರ್ತೆಯರು ನಡೆಸುವ ನಿರಂತರ ಹೋರಾಟದ ಬದುಕನ್ನು ಹಾಗೂ ಅವರು ಅನಿವಾರ್ಯವಾಗಿ ಬೀದಿಗಿಳಿಯಬೇಕಾಗಿ ಬಂದ ದುರಂತವನ್ನು ಹೃದಯಕ್ಕೆ ತಟ್ಟುವಂತಹ ಸನ್ನಿವೇಶಗಳು ಈ ಕಾದಂಬರಿಯಲ್ಲಿ ನಿರೂಪಿಸಲಾಗಿದೆ. ಉತ್ತರಕರ್ನಾಟಕದ ದೇವದಾಸಿ ಪದ್ಧತಿಯಿಂದ ಹಿಡಿದು ಬೆಂಗಳೂರಿನ ಫ್ಲೈಓವರ್ ಕೆಳಗೆ, ಬೀದಿ ಬೀದಿಯ ಬದಿಗಳಲ್ಲಿ ಮೈಮಾರಿಕೊಂಡು ಬದುಕು ಸಾಗಿಸುವ ಇವರು ಈ ಸಮಾಜದಲ್ಲಿ ಬಲಿಪಶುಗಳಾಗಿ ಅನುಭವಿ ಸುತ್ತಿರುವ ರೋಗರುಜಿನಗಳ ತಾಕಲಾಟಗಳನ್ನು ಅನುಭವಿಸುತ್ತಿದ್ದಾರೆ[೨೭] (**ಹನುಂಮತ ಹಾಲಿಗೇರಿ; ೨೦೧೦**).

ರಾಜರ ವಿಲಾಸ ಜೀವನ ತಮಗೂ ದಕ್ಕಬೇಕೆಂಬ ಆಸೆಯಿಂದ ಪುರೋಹಿತರು ರಾಜರನ್ನು ಅನುಸರಿಸಿ ದೇವದಾಸಿ ಪದ್ಧತಿಯನ್ನು ಹುಟ್ಟುಹಾಕಿದ್ದರು. ಈ ಪದ್ಧತಿಯು ದೇವಾಲಯ, ಸರ್ಕಾರ ಹಾಗೂ ದೇವದಾಸಿಯರ ಕುಟುಂಬಗಳಿಗೆ ನಿರಂತರ ಮತ್ತು ನಿಯಮಿತವಾದ ಆದಾಯದ ಮೂಲವು ಆಯಿತು. ಹೀಗಾಗಿ ಈ ಪದ್ಧತಿಯನ್ನು ರದ್ದುಪಡಿಸುವುದಿರಲಿ, ನಿಯಂತ್ರಿಸುವ ಯತ್ನಗಳು ಕೂಡಾ ನಡೆಯಲೇ ಇಲ್ಲ. ಬ್ರಿಟಿಷ್ ಆಡಳಿತದಲ್ಲಿ ಇವರ ವಯಸ್ಸು ಇಂತಿಷ್ಟೆ ಇರಬೇಕೆಂದು

ನಿಯಮ ಬಂದಿತು. ಆದರೆ ಹುಡುಗಿಯರ ತಂದೆ ತಾಯಿಗಳ ಸ್ವಾರ್ಥದಿಂದ ವಯಸ್ಸನ್ನು ತಪ್ಪಾಗಿ ಇಲ್ಲವೆ ಧಾರ್ಮಿಕ ನೆಲೆಯಿಂದ ಅನುಮತಿ ಪಡೆದು ಈ ಪದ್ಧತಿಯನ್ನು ಪೋಷೀಸುತ್ತಿದ್ದರು. ಆದರೆ ದಕ್ಷಿಣದಲ್ಲಿ ಶ್ರೀ ಆರ್ ವೆಂಕಟರತ್ನಂ ನಾಯುಡು ೧೮೬೨–೧೯೩೯ ರವರೆಗೆ ಈ ದುಷ್ಟ ಪದ್ಧತಿಯ ವಿರುದ್ಧ ಹೋರಾಟ ಮಾಡಿದರು. ಆದರೂ ಸಹ ಸಮಾಜ ಸುಧಾರಣಾ ಚಳುವಳಿಗಳು ಈ ಪದ್ಧತಿಯ ಮೇಲೆ ಬೀರಿದ ಪ್ರಭಾವವಂತೂ ತೀರ ಅತ್ಯಲ್ಪ. ೧೯೨೪ರಲ್ಲಿ ಭಾರತೀಯ ದಂಡ ಸಂಹಿತೆಯಲ್ಲಿ ಈ ಪದ್ಧತಿಯ ವಿಚಾರಕ್ಕೆ ತಿದ್ದುಪಡಿ ತರಲಾಯಿತು. ೩೭೨ ಹಾಗೂ ೩೭೩ನೇ ಕಲಮಿನಲ್ಲಿ ದೇವಾಲಯಗಳಿಗೆ ಹಾಗೂ ಪೂಜಾ ವಿಗ್ರಹಗಳಿಗೆ ಹುಡುಗಿಯರನ್ನು ಸಮರ್ಪಿಸುವ ಆಚರಣೆಯು ಕೊನೆಗೊಮ್ಮೆ ವೇಶ್ಯಾವಾಟಿಕೆಯನ್ನು ಕೈಗೊಳ್ಳುವ ವಿಧಾನವಾಗಿ ಮಾರ್ಪಾಡಾಗುವ ಈ ಪದ್ಧತಿಯು ಅನೈತಿಕವೆಂದು ಘೋಷಿಸಿದೆ. ಬೊಂಬಾಯಿ ದೇವದಾಸಿ ರಕ್ಷಣಾ ಅಧಿನಿಯಮ ೧೯೩೪, ೧೯೪೭ರ ಮದ್ರಾಸ್ ಪ್ರಾಂತ್ಯವು ದೇವದಾಸಿ ಸಮರ್ಪಣಾ ತಡೆ ಅಧಿನಿಯಮವನ್ನು ಜಾರಿಗೊಳಿಸಿತು ಎಂಬ ಹಲವಾರು ವಿಚಾರಗಳನ್ನು ತಮ್ಮ ಲೇಖನದಲ್ಲಿ ದೇವದಾಸಿಯರ ಮತ್ತು ಅವರ ಸಮಸ್ಯೆಯ ಮತ್ತು ಪ್ರಸ್ತುತದ ಮತ್ತು ಅಯಾ ಕಾಲಗಟ್ಟದ ಸ್ಥಿತಿಯನ್ನು ತಮ್ಮದೇ ಅದ ಅನುಭವದಲ್ಲಿ ಗುರುತಿಸಿದ್ದಾರೆ. ದೇವದಾಸಿ ಪದ್ಧತಿಯು ಹಲವು ವರ್ಷಗಳಿಂದ ಔಪಚಾರಿಕವಾಗಿ ಮತ್ತು ಕಾನೂನಾತ್ಮಕವಾಗಿ ನಿಷಿದ್ಧಗೊಳಿಸಿದ್ದರೂ ಸಹ ಈ ಪದ್ಧತಿಯು ತನ್ನದೇ ಆದ ಪಳೆಯುಳಿಕೆ ಗಳನ್ನು ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಬಿಟ್ಟುಹೋಗಿದೆ ಅಂದರೆ ಇನ್ನೂ ಜೀವಂತವಾಗಿದೆ. ಕರ್ನಾಟಕ ಸರ್ಕಾರದ ಅಂಕಿ ಅಂಶಗಳ ಪ್ರಕಾರ ೪೬೬೦೦ ದೇವದಾಸಿಯರು ಕರ್ನಾಟಕದಲ್ಲಿದ್ದಾರೆ ಎಂದು ಗುರುತಿಸಲಾಯಿತು. ಆದರೆ ನಿಜಾವಾದ ಅಂಕಿ ಸಂಖ್ಯೆಯನ್ನು ನೋಡಬೇಕಾದರೆ ಖುದ್ದಾಗಿ ಹಳ್ಳಿಗಳಲ್ಲಿ ಕ್ಷೇತ್ರಕಾರ್ಯ ಮಾಡಿದರೆ ನಿಖರವಾದಂತಹ ಮಾಹಿತಿ ದೊರೆಯುವುದು ಎಂಬ ಸತ್ಯ ಈ ಅಧ್ಯಯನದಿಂದ ತಿಳಿದುಬಂದಿದೆ. ಈ ಪದ್ಧತಿಯಿಂದ ಸಾವಿರಾರು ದಲಿತ ಮಹಿಳೆಯರ ಬದುಕುಗಳು ತಮ್ಮ ಅಸ್ಮಿತೆ ಮತ್ತು ಅಸ್ಥಿತ್ವವನ್ನು ಕಳೆದುಕೊಂಡು ಬೀದಿ ಪಾಲಾಗಿರುವುದನ್ನು ಇಲ್ಲಿ ಕಾಣಬಹುದು. ಇಲ್ಲಿ ದೇವದಾಸಿಯು ನಾಲ್ಕು ವಿಧಗಳಲ್ಲಿ ಶೋಷಣೆಗೆ ಒಳಪಡುತ್ತಾಳೆ. ಹೇಗೆಂದರೆ ಜಾತಿ, ವರ್ಗ, ಲಿಂಗ ಮತ್ತು ದಲಿತ ಮಹಿಳೆಯಾಗಿರುತ್ತಾಳೆ. ಅಂದರೆ ಸಾಮಾನ್ಯ ದಲಿತ ಮಹಿಳೆಗಿಂತ ಸಾಮಾಜಿಕವಾಗಿ ಕಡಿಮೆ ದರ್ಜೆಯ ಸ್ಥಾನಮಾನವನ್ನು ಹೊಂದಿದ್ದಾಳೆ ಎಂದರ್ಥ. ಈ ಪದ್ಧತಿಯು ಕರ್ನಾಟಕದಲ್ಲಿ ದೇವದಾಸಿ, ಆಂಧ್ರದಲ್ಲಿ ಜೋಗತಿ ಮತ್ತು ತಮಿಳುನಾಡಿನಲ್ಲಿ ಮುತ್ತಮ್ಮ ಮತ್ತು ಬಸವಿ ಹೀಗೆ ದಕ್ಷಿಣ ರಾಜ್ಯಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಸಾಮಾನ್ಯವಾಗಿ ದೇವದಾಸಿ ಪದ್ಧತಿಯಲ್ಲಿ ದಲಿತ ಅಂದರೆ ಅಸ್ಪೃಶ್ಯ ಜಾತಿಗಳಿಗೆ ಸೇರಿದ ಮಾದಿಗ, ಹೊಲೆಯ(ಚಲವಾದಿ) ಮತ್ತು ಬುಡಕಟ್ಟು ಅಥವಾ ನಾಯಕ ಸಮುದಾಯಗಳಲ್ಲಿ ಕಂಡು ಬರುತ್ತದೆ. ಆದರೆ ಮಾದಿಗ ಸಮುದಾಯದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ಕರ್ನಾಟಕದ ಉತ್ತರ ಭಾಗದ ಬಾಗಲಕೋಟೆ, ಬೆಳಗಾವಿ, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚಾಗಿ ಗುರುತಿಸಬಹುದು. ಈ ಪದ್ಧತಿಯಲ್ಲಿ ದಲಿತ ಹೆಣ್ಣುಮಕ್ಕಳಿಗೆ ದೇವರ ಹೆಸರಲ್ಲಿ ಮುತ್ತು ಕಟ್ಟುವುದು, ತಾಳಿ ಕಟ್ಟುವುದು

ಮತ್ತು ಇತರೆ ಸಾಂಪ್ರದಾಯಕವಾಗಿ ಗುರುತಿಸಿಕೊಳ್ಳುವ ಆಚರಣೆಯಿದೆ. ಒಂದು ಸಲ ಈ ವ್ಯವಸ್ಥೆಗೆ ಬಲಿಯಾದರೆ ಆಕೆ ಇನ್ನಾವುದೇ ರೀತಿಯಲ್ಲಿ ಮದುವೆಯಾಗುವಂತಿಲ್ಲ ಆದರೆ ಆಕೆ ಬೇರೆ ಜಾತಿಯ ಅಥವಾ ತಮ್ಮದೇ ಜಾತಿಯ ಗಂಡಸರೊಟ್ಟಿಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಂಬಂಧವನ್ನು ಇಟ್ಟುಕೊಳ್ಳಬಹುದು. ಇಲ್ಲಿ ತಮಗೆ ಹುಟ್ಟಿದ ಮಕ್ಕಳು ತಂದೆಯ ಹೆಸರನ್ನು ಹೇಳುವ ಬದಲು ತಾಯಿಯ ಹೆಸರನ್ನು ಹೇಳುತ್ತವೆ. ಕಾನೂನಾತ್ಮಕವಾಗಿ ಸರ್ಕಾರಿ ದಾಖಲೆಗಳಲ್ಲಿ ತಂದೆ ಹೆಸರಿಗೆ ಬದಲಾಗಿ ತಾಯಿಯ ಹೆಸರು ಮಾತ್ರ ದಾಖಲೆಯಾಗುತ್ತದೆ. ಪ್ರಮುಖ ವಿಚಾರವೆಂದರೆ ಶೋಷಣೆಯು ಲೈಂಗಿಕ ದೌರ್ಜನ್ಯ, ಜಾತಿ ಮತ್ತು ಲಿಂಗದ ಆಧಾರದಲ್ಲಿ ಮತ್ತು ಧಾರ್ಮಿಕತೆಯ ಹೆಸರಿನಲ್ಲಿ ಆಗುವುದನ್ನು ಗಮನಿಸಬಹುದು. ಕರ್ನಾಟಕ ಸರ್ಕಾರವು ೧೯೮೨ರಲ್ಲಿ ಈ ಪದ್ಧತಿಯ ನಿಯಂತ್ರಣಕ್ಕೆ ಕಾಯ್ದೆಯನ್ನು ತಂದಿತು: ಆದರೆ ಈ ಕಾಯ್ದೆಯಿಂದ ಹೆಚ್ಚೇನು ಪರಿಣಾಮಕಾರಿಯಾಗಿ ಕೆಲಸವಾಗಿಲ್ಲ ಎಂದು ಹೇಳಬಹುದು. ಏಕೆಂದರೆ ೧೯೮೨ರ ನಂತರ ಸಾವಿರಾರು ಮಹಿಳೆಯರು ಈ ಪದ್ಧತಿಗೆ ಬಲಿಯಾಗಿರುವುದನ್ನು ಕಾಣಬಹುದು. ಹೇಗೆಂದರೆ ಅಧ್ಯಯನದ ಉದ್ದೇಶಕ್ಕಾಗಿ ಕೆಲವು ದೇವದಾಸಿಯರನ್ನು ಪ್ರಶ್ನಾವಳಿಯ ಮೂಲಕ ಸಂದರ್ಶಿಸಿದ ಸಂದರ್ಭದಲ್ಲಿ ದೇವದಾಸಿಯರ ವಯಸ್ಸನ್ನು ಗಮನಿಸಲಾಗಿದೆ ಮತ್ತು ಅವರನ್ನು ಎದುರಿಗೆ ನೋಡಿದರೆ ನಮಗೆ ತಿಳಿದು ಬರುತ್ತದೆ. ಈ ಪದ್ಧತಿಯು ಕಾಲ ಕ್ರಮೇಣ ವೇಶ್ಯಾವಾಟಿಕೆಗೆ ದಾರಿ ಮಾಡಿಕೊಡುತ್ತದೆ ಎಂಬುದು ಸಹ ಸತ್ಯವಾಗಿದೆ. ಏಕೆಂದರೆ ಒಂದು ಹೆಂಗಸಿಗೆ ಯಾರ ಆಶ್ರಯವಿಲ್ಲದಾಗ, ತನ್ನ ಜೀವನ ನಡೆಸಲು ಕಷ್ಟವಾದಾಗ ಮತ್ತು ಬೇರೆ ಕೆಲಸ ಕಾರ್ಯಗಳು ಪ್ರಸ್ತುತದಲ್ಲಿ ಸಿಗದ್ದಿದ್ದಾಗ ಅನ್ಯಮಾರ್ಗವಿಲ್ಲದೆ ತಮ್ಮ ಜೀವನ ಮತ್ತು ಮಕ್ಕಳ ಪೋಷಣೆಗೊಸ್ಕರ ವ್ಯಾವಹಾರಿಕವಾಗಿ ವೇಶ್ಯಾವಾಟಿಕೆಯ ದಂಧೆಗೆ ಇಳಿಯುವ ವಾತಾವರಣವು ಸೃಷ್ಟಿಯಾಗುತ್ತದೆ. ಹೀಗೆ ಈ ಪದ್ಧತಿಯಲ್ಲಿ ಮಹಿಳೆಯು ಸಿಕ್ಕಿಕೊಂಡರೆ ಮತ್ತೆ ಮೇಲೇಳಲಾಗುವುದಿಲ್ಲ. ಇಲ್ಲಿಯವರೆಗಿನ ದೇವದಾಸಿಯರ ಅಧ್ಯಯನಗಳೆಲ್ಲವೂ ಸಹ ಅನುಕಂಪ ದಿಂದ, ಸಹಾನುಭೂತಿಯಿಂದ ಮಾತ್ರ ನೋಡುತ್ತಿವೆ. ಇವರ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಆರೋಗ್ಯದ ವಿಚಾರಗಳಾದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಹೆಚ್ಚು ಅಧ್ಯಯನಗಳು ಕಂಡುಬಂದಿಲ್ಲ. ಅದ್ದರಿಂದ ಪ್ರಸ್ತುತ ಅಧ್ಯಯನವು ಇಂತಹ ಕೆಲವು ಪ್ರಶ್ನೆಗಳಿಗೆ ಉತ್ತರಗಳನ್ನು ನೀಡಿದೆ.

ಪ್ರಸ್ತುತ ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯರ ಸಂಖ್ಯೆಯು ಸರ್ಕಾರದ ಲೆಕ್ಕಚಾರದಲ್ಲಿ ಅಧಿಕವಾಗಿರುವುದರಿಂದ ಹಾಗೂ ಹೈದರಾಬಾದ್ ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿರುವ ಈ ಜಿಲ್ಲೆಯ ಅಧ್ಯಯನವು ಸಹ ಅಗತ್ಯವಿರುವುದರಿಂದ ಈ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಸಮಗ್ರ ವಿಚಾರವನ್ನು ಅಭಿವೃದ್ಧಿ ಪರಿಕಲ್ಪನೆಯ ಹಿನ್ನಲೆ ಯಲ್ಲಿ ಮತ್ತು ದೇವದಾಸಿಯರು ಯಾವ ಯಾವ ಸ್ಥಾನಮಾನಗಳನ್ನು ಪಡೆದಿದ್ದಾರೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಬೇಕಾದಂತಹ ಸಂಶೋಧನಾ ಪ್ರಬಂಧಗಳು, ಲೇಖನಗಳು, ವರದಿಗಳು, ಅಂಕಿಸಂಖ್ಯೆಗಳ ವಿಮರ್ಶೆ, ಸರ್ಕಾರಿ ಮಾಹಿತಿ, ನಿಯಂತ್ರಣದ ಕಾಯ್ದೆ

ಮತ್ತು ಅಭಿವೃದ್ಧಿಯ ಕಾರ್ಯಕ್ರಮಗಳು, ಸಂಘ-ಸಂಸ್ಥೆಗಳ ಕಾರ್ಯಕ್ರಮಗಳು ಇತ್ಯಾದಿ ಸಿದ್ಧವಿರುವ ಹಾಗೂ ಆನುಷಂಗಿಕ ಆಧಾರದಲ್ಲಿ ದೊರೆತ ಮಾಹಿತಿಯನ್ನು ಕಲೆಹಾಕಿ ಅವುಗಳ ವಿಚಾರವನ್ನು ಚರ್ಚೆ ಮತ್ತು ವಿಮರ್ಶೆಗೊಳಪಡಿಸಿ ತನ್ನದೇ ಅಭಿಪ್ರಾಯಗಳನ್ನು ದಾಖಲಿಸುವುದರ ಮೂಲಕ ಪ್ರಸ್ತುತ ಅಧ್ಯಯನಕ್ಕೆ ಬೇಕಾದಂತಹ ಪ್ರಶ್ನೆಗಳನ್ನು ಹಾಕಿಕೊಳ್ಳಲಾಗಿದೆ.

**ಸಂಶೋಧನಾ ಪ್ರಶ್ನೆಗಳು**

ಪ್ರಸ್ತುತ ಅಧ್ಯಯನದಲ್ಲಿ ವ್ಯವಸ್ಥೆಯ ಕಟ್ಟಕಡೆಯ ದಲಿತ ಮಹಿಳೆಯರಲ್ಲಿ ಇನ್ನಷ್ಟು ಶೋಷಿತ ದಲಿತ ಮಹಿಳೆಯರಾಗಿರುವ ದೇವದಾಸಿಯರ ಸಮಾಜೋ-ಆರ್ಥಿಕ ಸಮಗ್ರ ಸ್ಥಿತಿಗತಿಗಳನ್ನು ಅಭಿವೃದ್ಧಿ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಈ ಸಂಶೋಧನೆಯ ಅಧ್ಯಯನದಲ್ಲಿ ಕೆಲವು ಸಮಕಾಲೀನ ಮತ್ತು ವಾಸ್ತವಿಕ ಪ್ರಶ್ನೆಗಳನ್ನು ಎತ್ತಲಾಗಿದೆ. ಅವುಗಳಲ್ಲಿ ಈಗಾಗಲೇ ಆಗಿರುವ ಅಧ್ಯಯನಗಳನ್ನು ಪರಿಶೀಲಿಸಿದಾಗ ಎಲ್ಲ ಕಡೆಯೂ ಸಹ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಮತ್ತು ಅವರ ಸ್ಥಾನಮಾನ ಕುರಿತು ಚರ್ಚಿಸಿದ್ದಾರೆ. ಆದರೆ ಅವುಗಳಲ್ಲಿ-ದೇವದಾಸಿಯ ರೆಂದರೆ ಯಾರು ಮತ್ತು ಏಕೆ ಈ ಪದ್ಧತಿ ಇನ್ನೂ ಇದೆ? ದೇವದಾಸಿಯರ ಸಾಮಾಜಿಕ ಅಂಶ ಗಳಾದ ಜಾತಿ ಮತ್ತು ಉಪಜಾತಿಯಲ್ಲಿನ ಸ್ಥಾನಮಾನ, ವರ್ಗ, ಶಿಕ್ಷಣ, ಆರೋಗ್ಯ, ಸಾಮಾಜಿಕ ಗೌರವ ಮತ್ತು ಅಂತಸ್ತು ಮುಂತಾದ ವಿಷಯಗಳ ಸ್ಥಿತಿಗತಿಗಳೇನು? ಇವರ ಆರ್ಥಿಕ ವಿಚಾರಗಳಿಗೆ ಸಂಬಂಧಿಸಿದಂತೆ ಕೆಲಸ ಮತ್ತು ವರಮಾನ, ಆಸ್ತಿಪಾಸ್ತಿ ಮತ್ತು ಆರ್ಥಿಕ ಹಿನ್ನೆಲೆಯಿಂದ ಇವರ ಸಾಮಾಜಿಕ ಜೀವನದ ಮೇಲಿನ ಪ್ರಭಾವ ಮುಂತಾದ ವಿಷಯಗಳಲ್ಲಿ ಯಾವ ಸ್ಥಿತಿಯಲ್ಲಿದ್ದಾರೆ? ಸರ್ಕಾರದ ಹಾಗೂ ಇತರೆ ಅಭಿವೃದ್ಧಿ ಯೋಜನೆಗಳಲ್ಲಿ ದೇವದಾಸಿಯರು ಸಂಪೂರ್ಣವಾಗಿ ಒಳಗೊಳ್ಳುವರೇ? ನಿರ್ಮೂಲನೆಯ ವಿಚಾರದಲ್ಲಿ ಕಾನೂನು, ಕಾಯ್ದೆಗಳಿದ್ದಿರೂ ಸಹ ಏಕೆ ಇನ್ನೂ ಈ ಪದ್ಧತಿ ಇದೆ? ಸರ್ಕಾರಿ ಸೌಲಭ್ಯವನ್ನು ಪಡೆಯುವಲ್ಲಿರುವ ಸಮಸ್ಯೆಗಳೇನು? ಸರ್ಕಾರಿ ಸೌಲಭ್ಯ ಪಡೆದಿರುವವರ ಮತ್ತು ಪಡೆಯದೆಯಿರುವವರ ನಡುವಿನ ವ್ಯತ್ಯಾಸಗಳೇನು? ಈ ತರದ ಕೆಲವು ಪ್ರಶ್ನೆಗಳು ಎದುರಾದವು. ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವನ್ನು ಪ್ರಸ್ತುತದ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

**೧.೫. ಅಧ್ಯಯನದ ಉದ್ದೇಶಗಳು**

ಈ ಮೇಲೆ ಚರ್ಚಿಸಿರುವ ಪ್ರಶ್ನೆಗಳಿಗೆ ಪೂರಕವಾಗಿ ಅಧ್ಯಯನದ ಉದ್ದೇಶಗಳನ್ನು ಈ ಕೆಳಗಿನಂತೆ ನೋಡಬಹುದು:

- ದೇವದಾಸಿಯರೆಂದರೆ ಯಾರು? ಮತ್ತು ಏಕೆ? ಈ ಪದ್ಧತಿ ಇದೆ ಎಂಬುದನ್ನು ಪತ್ತೆ ಹಚ್ಚುವುದು.
- ದೇವದಾಸಿಯರ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ತಿಳಿಯುವುದು.

- ದೇವದಾಸಿ ಪದ್ಧತಿಯ ನಿರ್ಮೂಲನೆ ಕಾರ್ಯಕ್ರಮಗಳು ಮತ್ತು ಪುನರ್ವಸತಿ ಯೋಜನೆಗಳ ಬಗ್ಗೆ ವಿಮರ್ಶಾತ್ಮಕವಾಗಿ ಪರಿಶೀಲಿಸುವುದು.
- ಸರ್ಕಾರಿ ಸೌಲಭ್ಯ ಪಡೆದಿರುವವರ ಮತ್ತು ಪಡೆಯದೆಯಿರುವವರ ನಡುವಿನ ವ್ಯತ್ಯಾಸಗಳನ್ನು ಅರ್ಥ ಮಾಡಿಕೊಳ್ಳುವುದು.

**೧.೬. ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಬೇಕಾದ ಮಾಹಿತಿಯನ್ನು ಹೀಗೆ ಸಂಗ್ರಹಿಸಲಾಗಿದೆ. ಸಂಶೋಧನಾ ಉದ್ದೇಶಗಳು ಅಧ್ಯಯನದ ವಿಧಾನವನ್ನು ನಿರ್ಧರಿಸುತ್ತವೆ. ಸಂಶೋಧನಾ ಉದ್ದೇಶಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಯಾವ ಮೂಲದಿಂದ ಮತ್ತು ಯಾವ ವಿಧಾನದಲ್ಲಿ ಮತ್ತು ಹೇಗೆ ಸಂಗ್ರಹಿಸಬೇಕೆನ್ನುವುದೇ ಸಂಶೋಧನಾ ವಿಧಾನ. ಆದರೆ ಇಂದು ಸಮಾಜ ವಿಜ್ಞಾನ ಅಥವಾ ಯಾವುದೇ ಸಂಶೋಧನೆ ನಿರ್ದಿಷ್ಟ ವಿಧಾನಕ್ಕೆ ಅಂಟಿಕೊಳ್ಳುವುದು ಸಾಧ್ಯವಿಲ್ಲ. ಹಾಗಾಗಿ ಪ್ರಸ್ತುತ ಈ ಸಂಶೋಧನೆಯಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳನ್ನು ಒಳಗೊಂಡು ಹಲವು ವಿಧಾನಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಮತ್ತು ವಿಶ್ಲೇಷಿಸಲಾಗಿದೆ. ಅವುಗಳೆಂದರೆ ಕ್ಷೇತ್ರಕಾರ್ಯ, ಗುಂಪು ಚರ್ಚೆಗಳ ಮೂಲಕ ಅವಲೋಕನ, ಪ್ರಶ್ನಾವಳಿ, ಸಂದರ್ಶನ, ದಾಖಲೆಗಳು, ವರದಿಗಳು, ಸುತ್ತೋಲೆಗಳು ಸಂಶೋಧನಾ ಪ್ರಭಂದಗಳು, ವರದಿಗಳು, ಕ್ರಿಯಾತ್ಮಕ ಸಂಶೋಧನಾ ವರದಿಗಳು ಮುಂತಾದವುಗಳು. ಈ ಅಧ್ಯಯನವು ಮೂಲತಃ ಕ್ಷೇತ್ರಕಾರ್ಯದ ಮೂಲಕವಾಗಿರುವ ಅನುಭವಜನ್ಯ(ಎಂಪರಿಕಲ್) ಅಧ್ಯಯನದ ವಿಧಾನವಾಗಿದೆ. ಅಧ್ಯಯನವು ಪರಿಮಾಣಾತ್ಮಕ, ಗುಣಾತ್ಮಕ ವಿಧಾನಗಳೊಂದಿಗೆ ಕ್ರಿಯಾತ್ಮಕತೆ ಮತ್ತು ವಿವರಣಾತ್ಮಕವಾಗಿಯೂ ಹಾಗೂ ಅಧ್ಯಯನದ ತಾತ್ವಿಕ-ಸೈದ್ಧಾಂತಿಕ ಚೌಕಟ್ಟನ್ನು ಹಾಕುವುದರ ಮೂಲಕ ಸಿದ್ಧವಿರುವ ಅಧ್ಯಯನಗಳನ್ನು ವಿಮರ್ಶೆಗೊಳಪಡಿಸಿ ಪ್ರಸ್ತುತ ಅಧ್ಯಯನವನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಮಂಡಿಸಲಾಗಿದೆ. ಈ ಅಧ್ಯಯನವನ್ನು ಕರ್ನಾಟಕ ರಾಜ್ಯದ ಹೈದರಾಬಾದ್-ಕರ್ನಾಟಕ ಪ್ರಾಂತ್ಯದ ಕೊಪ್ಪಳ ಜಿಲ್ಲೆಯಲ್ಲಿ ಕೈಗೊಳ್ಳಲಾಗಿದೆ. ಅಧ್ಯಯನಕ್ಕೆ ಬೇಕಾದ ಮಾಹಿತಿಗಾಗಿ ೨೦೦ ದೇವದಾಸಿಯರನ್ನು ಕೊಪ್ಪಳ, ಕುಷ್ಟಗಿ, ಗಂಗಾವತಿ ಮತ್ತು ಯಲಬುರ್ಗಾ ನಾಲ್ಕು ತಾಲೂಕುಗಳ ೬೦ ಹಳ್ಳಿಗಳಲ್ಲಿ ಕ್ಷೇತ್ರಕಾರ್ಯದ ಮೂಲಕ ನೇರವಾಗಿ ಭೇಟಿ ಮಾಡಿ ಪ್ರಶ್ನಾವಳಿಯ ಮೂಲಕ ಸಂದರ್ಶನವನ್ನು ಮಾಡಲಾಗಿದೆ. ಎಲ್ಲಾ ವರ್ಷದ ವಯಸ್ಸಿನವರ ದೇವದಾಸಿಯರನ್ನು ಅಧ್ಯಯನದಲ್ಲಿ ಒಳಪಡಿಸಲಾಗಿದೆ. ಅಧ್ಯಯನಕ್ಕೆ ತಗೆದುಕೊಂಡಿರುವ ಹಳ್ಳಿಗಳಲ್ಲಿ ದೇವದಾಸಿಯರ ಸಂಖ್ಯೆಗೆ ಅನುಗುಣವಾಗಿ ಯಾದೃಚ್ಛಿಕ ನಮೂನೆಯ ಸರಳ ಮಾದರಿಯನ್ನು ಬಳಸಿ ಮಾಹಿತಿಯನ್ನು ಕಲೆಹಾಕಲಾಗಿದೆ.

ದೇವದಾಸಿಯರೆಂದರೆ ಯಾರು ಮತ್ತು ಏಕೆ ಈ ಪದ್ಧತಿ ಇದೆ ಎಂಬುದನ್ನು ಪತ್ತೆ ಹಚ್ಚುವುದು ಎಂಬ ಪ್ರಮುಖ ಉದ್ದೇಶಕ್ಕೆ ಸಂಬಂಧಿಸಿದಂತೆ ನೇರವಾಗಿ ಪ್ರಾಥಮಿಕ ಮೂಲದಿಂದ ದೇವದಾಸಿ ಯರನ್ನು ಸಂದರ್ಶನ, ಅವಲೋಕನ, ಪ್ರಶ್ನಾವಳಿ ಮತ್ತು ಲಕ್ಷ್ಯ ಗುಂಪಿನ ಚರ್ಚೆ ಮತ್ತು

ಆನುಷಂಗಿಕ ಆಧಾರದ ಮೂಲಕ ಈಗಾಗಲೇ ನಡೆದಿರುವ ಸಂಶೋಧನ ಪ್ರಬಂಧಗಳು, ಲೇಖನಗಳು, ಕ್ರಿಯಾ ಸಂಶೊಧನಾ ವರದಿಗಳ ಮಾಹಿತಿಯನ್ನು ಅಧ್ಯಯನ ಮಾಡಲಾಗಿದೆ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಸಂಬಂಧವಿರುವ ವಿಚಾರಗಳನ್ನು ತಜ್ಞರೊಡನೆ ಚರ್ಚಿಸಲಾಗಿದೆ. ಕೆಲವು ಮುಖ್ಯವಾದ ಮತ್ತು ವಿವಿಧ ಸಮುದಾಯದ ಹಿನ್ನೆಲೆಯಿರುವ ದೇವದಾಸಿಯರ ವ್ಯಕ್ತಿಗತ ಅಧ್ಯಯನಗಳನ್ನು ಗುಣಾತ್ಮಕವಾದ ಅಧ್ಯಯನದ ವಿಧಾನದ ರೂಪದಲ್ಲಿ ದಾಖಲಿಸಲಾಗಿದೆ. ಈಗಾಗಲೇ ಕಂಡುಕೊಂಡಿರುವ ಸತ್ಯಾಸತ್ಯತೆಗಳನ್ನು ಆಯಾ ಸಮಯ ಪ್ರದೇಶಕ್ಕನು ಗುಣವಾಗಿ ವಿಮರ್ಶೆ ಮತ್ತು ವಿಶ್ಲೇಷಣೆಗೆ ಒಳಪಡಿಸಲಾಗಿದೆ ಮತ್ತು ಉದ್ದೇಶಳಿಗೆ ಸಮದಾನಕರ ವಾದಂತಹ ಸತ್ಯಗಳನ್ನು ಕಂಡುಕೊಳ್ಳಲಾಗಿದೆ. ದೇವದಾಸಿ ಕುರಿತ ಅಧ್ಯಯನಗಳು ತುಂಬಾ ಹಳೆಯ ಮತ್ತು ಇತ್ತೀಚಿನ ಅಧ್ಯಯನದವರೆಗೆ ಪರಮಾರ್ಶಿಸಲಾಗಿದೆ.

ದೇವದಾಸಿಯರ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯುವುದು. ಈ ಅಧ್ಯಯನ ಮುಖ್ಯ ಉದ್ದೇಶವಾಗಿದೆ. ಇದಕ್ಕೆ ನೇರವಾಗಿ ಪ್ರಾಥಮಿಕ ಮೂಲದಿಂದ; ಸಾಮಾಜಿಕ ಅಂಶಗಳಲ್ಲಿ ಜಾತಿ,ಉಪಜಾತಿ, ಶಿಕ್ಷಣ, ಆರೋಗ್ಯ, ಸಾಮಾಜಿಕ ಪರಿಸರ ಅಂದರೆ ಸಮುದಾಯದಲ್ಲಿ ಮತ್ತು ಸಮಾಜದಲ್ಲಿ ಇವರ ಸ್ಥಾನಮಾನ, ದೌರ್ಜನ್ಯ, ಶೋಷಣೆ, ನಡೆಸಿಕೊಂಡ ಬಗೆ, ಮಕ್ಕಳ ಶಿಕ್ಷಣದ ಮೇಲೆ ಪರಿಣಾಮ ಮತ್ತು ಅವರ ಮನೋ-ಸಾಮಾಜಿಕ ವೇದೆನೆಗಳು ಮುಂತಾದವುಗಳನ್ನು ಸಾಮಾಜಿಕ ವಿಚಾರಗಳಲ್ಲಿ ಚರ್ಚಿಸಲಾಗಿದೆ. ಆರ್ಥಿಕ ವಿಚಾರದಲ್ಲಿ ಕೆಲಸ, ವರಮಾನ, ಸ್ಥಿರ ಮತ್ತು ಚರಾಸ್ತಿ, ಭೂಮಿ, ಪರ್ಯಾಯ ಹಣಕಾಸಿನ ವರ್ಧನೆ, ಸಂಘ ಸಂಸ್ಥೆಗಳಲ್ಲಿನ ಸದಸ್ಯತ್ವ ಮತ್ತು ಹಣಕಾಸಿನ ಉಳಿತಾಯ ಮತ್ತು ವಹಿವಾಟು, ಬ್ಯಾಂಕಿನ ಖಾತೆ ಮತ್ತು ಅದರ ನಿರ್ವಹಣೆ, ಇತರೆ ಮೂಲಗಳಿಂದ ಆದಾಯ ಮತ್ತು ಸರ್ಕಾರದ ಯೋಜನೆಗಳಿಂದ ಸಿಗುವ ಅಭಿವೃದ್ಧಿಪರ ಕಾರ್ಯಕ್ರಮಗಳ ಮೂಲಕ ಪ್ರಗತಿ ಮುಂತಾದವುಗಳ ವಿವರಣೆಯನ್ನು ಪಡೆಯಲಾಗಿದೆ, ರಾಜಕೀಯ ವಿಚಾರದಲ್ಲಿ ಇವರ ಭಾಗವಹಿಸುವಿಕೆ ಮತ್ತು ನಿರ್ಧಾರ ತಗೆದುಕೊಳ್ಳುವಾಗ ಇವರ ಪಾತ್ರ ಮುಂತಾದವುಗಳನ್ನು ಚರ್ಚಿಸಲಾಗಿದೆ ಈ ಎಲ್ಲಾ ವಿಚಾರಗಳನ್ನು ದೇವದಾಸಿಯರಿಗೆ ಪ್ರಶ್ನಾವಳಿಯ ಮೂಲಕ ಸಂದರ್ಶನ, ಅವಲೋಕನ, ದೇವದಾಸಿಯರೊಟ್ಟಿಗೆ ಕೆಲಸ ಮಾಡುವ ತಳಸ್ತರದ ಕಾರ್ಯಕರ್ತರು, ಸಂಶೋಧಕರು, ತಜ್ಞರುಗಳೊಂದಿಗೆ ಔಪಚಾರಿಕ ಮತ್ತು ಅನೌಪಚಾರಿಕ ರೀತಿಯ ಮೌಖಿಕ ಸಂದರ್ಶನಗಳು, ಪ್ರಮುಖವಾಗಿ ದೇವದಾಸಿಯರಿರುವ ಹಳ್ಳಿಗಳಲ್ಲಿ, ವೈಯಕ್ತಿಕ ಮತ್ತು ಗುಂಪು ಚರ್ಚೆ ಮಾಡಲಾಗಿದೆ. ರಾಷ್ಟ್ರ, ರಾಜ್ಯ ಮಟ್ಟದ ಸಮಾವೇಶ, ತರಬೇತಿ, ಕಾರ್ಯಗಾರಗಳ ಮೂಲಕ ಗುಂಪು ಚರ್ಚೆಗಳು ಅಥವಾ ಲಕ್ಷ್ಯ ಗುಂಪಿನ ಚರ್ಚೆ ಮಾಡಿ ಅಲ್ಲಿನ ಸಾರಾಂಶದ ವಿಚಾರಗಳನ್ನು ದಾಖಲಿಸಲಾಗಿದೆ. ಆನುಷಂಗಿಕ ಆಧಾರದ ಮೂಲಕ ಈಗಾಗಲೇ ನಡೆದಿರುವ ಸಂಶೋಧನ ಪ್ರಬಂಧಗಳು, ಪತ್ರಿಕೆಗಳ ವರದಿಗಳು, ಲೇಖನಗಳು, ಕ್ರಿಯಾ ಸಂಶೊಧನಾ ವರದಿಗಳ ಮಾಹಿತಿಯನ್ನು ಕಲೆಹಾಕಲಾಗಿದೆ. ಪ್ರತಿ ವಾದಗಳಿಗೆ ಪ್ರಸ್ತುತದ ಅಧ್ಯಯನದ ಅಭಿಪ್ರಾಯಗಳನ್ನು ಸಹ ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಪ್ರಾಥಮಿಕ ಮಾಹಿತಿಯನ್ನು ಸರಳ ಅಂಕಿಸಂಖ್ಯೆಗಳ ಮೂಲಕ ವರ್ಗೀಕರಿಸಿ, ಕೋಷ್ಟಕಗಳ ಮತ್ತು

ರೇಖಾನಕ್ಷೆಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಿ ಈಗಾಗಲೇ ಅಗಿರುವ ಅಧ್ಯಯನಗಳ ವಾದಗಳನ್ನು ಮುಖಾಮುಖಿಯಾಗಿಸಿ ಮತ್ತು ಸಮಕಾಲೀನತೆ ಯಲ್ಲಿರುವ ವಾಸ್ತವಿಕತೆಯನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ದೇವದಾಸಿ ಪದ್ಧತಿಯ ನಿರ್ಮೂಲನೆ ಕಾರ್ಯಕ್ರಮಗಳು ಮತ್ತು ಪುನರ್ವಸತಿ ಯೋಜನೆಗಳ ಬಗ್ಗೆ ಪರಿಶೀಲಿಸುವುದು ಇದಕ್ಕೆ ಸಂಬಂಧಿಸಿದಂತೆ ಗ್ರಾಮ ಮಟ್ಟದ ಹಂತದಿಂದ ರಾಜ್ಯಮಟ್ಟದ ಅಧಿಕಾರಿಗಳನ್ನು ಸಂದರ್ಶಿಸಿ ಚರ್ಚೆ ಮಾಡಲಾಗಿದೆ, ರಾಷ್ಟ್ರ ಮತ್ತು ರಾಜ್ಯ ಮಟ್ಟದ ಸಮಾವೇಶಗಳಲ್ಲಿ ಅಧಿಕಾರಿಗಳನ್ನು ಕರೆಯಿಸಿ ಸರ್ಕಾರಿ ಕಾರ್ಯಕ್ರಮಗಳ ಮಾಹಿತಿಯನ್ನು ಚರ್ಚಿಸಿದ ಅಂಶಗಳನ್ನು ವಿಶ್ಲೇಷಿಸಲಾಗಿದೆ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಕಚೇರಿಗೆ ಭೇಟಿ ನೀಡಿ ನಿರ್ಧಿಷ್ಟ ಮಾಹಿತಿಯನ್ನು ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ಪಡೆಯಲಾಗಿದೆ ಮತ್ತು ಕಾನೂನು ತಜ್ಞರೊಡನೆ ಚರ್ಚಿಸಲಾಗಿದೆ, ಪ್ರಾಚೀನ ಕಾಲದಿಂದ ಇಲ್ಲಿಯವರೆಗಿನ ದೇವದಾಸಿ ಸಮರ್ಪಣ ತಡೆ ಕಾಯ್ದೆಗಳನ್ನು ಮತ್ತು ಹೊಸ ಯೋಜನೆಗಳ ಪ್ರಸ್ತಾವನೆಯುಳ್ಳ ಬಿಲ್ಲುಗಳನ್ನು ಸಹ ಅಧ್ಯಯನಕ್ಕೊಳಪಡಿಸಲಾಗಿದೆ ಅದರಲ್ಲಿರುವ ಕೆಲವು ಅಂಶಗಳನ್ನು ಪ್ರಸ್ತುತದ ಅಧ್ಯಯನದಲ್ಲಿ ವರದಿ ಮಾಡಲಾಗಿದೆ. ದೇವದಾಸಿ ಪುನರ್ವಸತಿ ಕಾರ್ಯಕ್ರಮದ ಇತ್ತೀಚಿನ ಸಂಪೂರ್ಣ ಮಾಹಿತಿಯನ್ನು ಪಡೆಯಲಾಗಿದೆ ಮತ್ತು ಅದನ್ನು ಪಡೆಯಲು ಇರುವ ಅರ್ಹತಾ ಮಾನದಂಡಗಳನ್ನು ಸಹ ಪರಿಶೀಲಿಸಲಾಗಿದೆ, ಹಾಗೆ ಸಂಘ ಸಂಸ್ಥೆಗಳ ಕಾರ್ಯಕರ್ತರೊಂದಿಗೆ ಚರ್ಚೆ ಮಾಡಿ ಸಂಘಟನಾತ್ಮಕ ವಿಚಾರದಲ್ಲಿ ಏನಾಗುತ್ತಿದೆ ಎಂಬುದನ್ನು ದಾಖಲಿಸಲಾಗಿದೆ.

ಸರ್ಕಾರಿ ಸೌಲಭ್ಯವನ್ನು ಪಡೆಯುವವರ ಮತ್ತು ಪಡೆಯದೇ ಇರುವವರ ನಡುವಿನ ಸ್ಥಾನಮಾನ ಗುರುತಿಸುವುದು ಮತ್ತು ಸರ್ಕಾರಿ ಸೌಲಭ್ಯ ಪಡೆಯದೆ ಇರುವುದಕ್ಕೆ ಕಾರಣಗಳನ್ನು ಗುರುತಿಸುವುದು. ಇದಕ್ಕೆ ದೇವದಾಸಿಯರಿಂದ ನೇರವಾಗಿ ಪ್ರಾಥಮಿಕ ಮೂಲದಿಂದ ಮಾಹಿತಿ ಸಂಗ್ರಹಿಸಲಾಗಿದೆ ಮತ್ತು ಯೋಜನೆಯನ್ನು ಪಡೆಯುವಲ್ಲಿರುವ ಮಾನದಂಡಗಳನ್ನು ಪರಿಶೀಲಿಸಲಾಗಿದೆ.

ಅಭಿವೃದ್ಧಿಗೆ ಸಂಬಂಧಿಸಿದಂತೆ ಇಲ್ಲಿಯವರೆಗಿನ ನಡೆದಿರುವ ಅಧ್ಯಯನಗಳ, ಪ್ರಬಂಧಗಳು, ಲೇಖನಗಳು, ನಿಯತಕಾಲಿಕೆಗಳನ್ನು ಆನುಷಂಗಿಕ ಮೂಲದಿಂದ ಪ್ರಸ್ತುತದ ಅಧ್ಯಯನಕ್ಕೆ ಸಂಕ್ಷಿಪ್ತವಾಗಿ ಮತ್ತು ಒಟ್ಟು ಅಧ್ಯಯನದ ಮಿತಿಯನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಲಾಗಿದೆ. ಅಂದರೆ ಪ್ರಸ್ತುತದ ಅಧ್ಯಯನದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಮುಖ ಉದ್ದೇಶವನ್ನು ಅಧ್ಯಯನದಲ್ಲಿ ಗಣನೀಯವಾಗಿ ಗಮನಿಸಿಲ್ಲ ಆದರೆ ಒಟ್ಟು ಪ್ರಬಂಧದ ಪರಿಕಲ್ಪನಾತ್ಮಕ ಚೌಕಟ್ಟಿನಲ್ಲಿ ಮತ್ತು ಸೈದ್ಧಾಂತಿಕವಾಗಿ ವಸ್ತುವಿಷಯದ ವಿಸ್ತಾರತೆಯನ್ನು ಅಧ್ಯಯನ ಮಾಡಲು ಅಭಿವೃದ್ಧಿಯ ವಸ್ತುವನ್ನು ಶೀರ್ಷಿಕೆಯಲ್ಲಿ ಮತ್ತು ಅದರ ಅರ್ಥ ವಿವರಣೆ, ಸೈದ್ಧಾಂತಿಕ ವಿಚಾರವನ್ನು ವಿಶ್ಲೇಷಣೆಗೆ ಒಳಪಡಿಸಿ ಅಧ್ಯಯನದ ಮಹತ್ವವನ್ನು ಮತ್ತು ಮೂಲ ಅಧ್ಯಯನದ ವಸ್ತುವಿಗೆ ಇರುವ ಸಂಬಂಧವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ನಂತರ ಪ್ರಸ್ತುತ ಅಧ್ಯಯನದ ವಿಶ್ಲೇಷಣೆಯನ್ನು ಸರಳ ಅಂಕಿಸಂಖ್ಯೆಗಳ

ಸಹಾಯದಿಂದ ಮಾಹಿತಿಯನ್ನು ವರ್ಗೀಕರಿಸಿ ಶೇಕಡವಾರು ಮಾಹಿತಿಯನ್ನು ತಗೆದು ಕೋಷ್ಟಕಗಳ ಮೂಲಕ ವೈಜ್ಞಾನಿಕವಾಗಿ ವಿಶ್ಲೇಷಿಸಿ ಪ್ರತಿ ಕೋಷ್ಟಕ ಮತ್ತು ಪ್ರತಿ ಪ್ರಶ್ನಾವಳಿ ಯಲ್ಲಿ ಬಂದಂತಹ ಮಾಹಿತಿಯನ್ನು ಚರ್ಚೆಗೆ ಒಳಪಡಿಸುವುದರ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ.

### ೧.೭. ಅಧ್ಯಯನದ ವ್ಯಾಪ್ತಿ ಮತ್ತು ಮಿತಿ

ಪ್ರಸ್ತುತದ ಅಧ್ಯಯನವು ಹೈದರಾಬಾದ್ ಕರ್ನಾಟಕ ಭಾಗದ ಹಿಂದಿಳಿದ ಜಿಲ್ಲೆಯಯಾಗಿರುವ ಕೊಪ್ಪಳ ಜಿಲ್ಲೆಯಲ್ಲಿ ೪ ತಾಲೂಕುಗಳಾದ ಗಂಗಾವತಿ, ಕುಷ್ಟಗಿ, ಯಲಬುರ್ಗಾ ಮತ್ತು ಕೊಪ್ಪಳಗಳಲ್ಲಿ ಪ್ರಮುಖ ದೇವದಾಸಿಯರಿರುವ ೬೦ ಹಳ್ಳಿಗಳಲ್ಲಿ ೨೦೦ ದೇವದಾಸಿಯರನ್ನು ಇದರಲ್ಲಿ ಅಧ್ಯಯನದ ಸಮಯದಲ್ಲಿ ಆಯ್ಕೆ ಮಾಡಿದ ಹಳ್ಳಿಹಳಲ್ಲಿ ದೊರೆತ ಎಲ್ಲಾ ವಯಸ್ಸಿನವರನ್ನು ಪ್ರಶ್ನಾವಳಿಯ ಮೂಲಕ ಸಂದರ್ಶಿಸುವುದರ ಮೂಲಕ ಅಧ್ಯಯನವನ್ನು ಯಾದೃಚ್ಚಿಕ ನಮೂನೆಯ ಸರಳ ವಿಧಾನವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನದ ವಿಷಯವು ರಾಜ್ಯ–ರಾಷ್ಟ್ರ ವ್ಯಾಪ್ತಿ ಯಲ್ಲಿದ್ದರೂ ಸಹ ಜಿಲ್ಲೆಯ ಹಂತಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ಇದಕ್ಕೂ ಸಹ ತರ್ಕಬದ್ಧವಾದ ಮಾಹಿತಿಯನ್ನು ಒದಗಿಸಲಾಗಿದೆ. ಅಧ್ಯಯನದ ಉದ್ದೇಶಗಳಿಗೆ ಅನುಸಾರವಾಗಿ ಮಾತ್ರ ಸಂಶೋಧನಾ ವಿಷಯವನ್ನು ಇಡೀ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಅಭಿವೃದ್ಧಿ ಪರಿಕಲ್ಪನೆಯ ಚರ್ಚೆ ಮತ್ತು ಈ ವಿಚಾರವನ್ನು ಸಂಕ್ಷಿಪ್ತ ರೀತಿಯಲ್ಲಿ ಮಾತ್ರ ಚರ್ಚೆಗೆ ಒಳಪಡಿಸಿ ಪ್ರಸ್ತುತ ಅಧ್ಯಯನದ ಸಮಗ್ರವಾಗಿ ನೋಡುವ ನಿಟ್ಟಿನಲ್ಲಿ ಮಾತ್ರ ಗಮನಿಸಲಾಗಿದೆ. ಆದರೆ ಅಭಿವೃದ್ಧಿಯ ಚರ್ಚೆ ಅಧ್ಯಯನದ ವಸ್ತುವಾದ ದೇವದಾಸಿ ಪದ್ಧತಿಯಾಗಲೀ, ದೇವದಾಸಿಯರಾಗಲಿ ಆ ಸಮಸ್ಯೆಯನ್ನು ಪ್ರಭುತ್ವದ ನೀತಿ, ಕಾಯ್ದೆ, ಹಕ್ಕು ಮತ್ತು ಅವರ ಉದ್ಧಾರಗಳನ್ನು ಗಮನದಲ್ಲಿಟ್ಟುಕೊಂಡು ಚರ್ಚೆಯನ್ನು, ಅಭಿವೃದ್ಧಿಯನ್ನು ರಾಷ್ಟ್ರ, ರಾಜ್ಯದ ಮಟ್ಟದಲ್ಲಿರುವ ಕೆಲವು ವಿಚಾರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿದೆ ಮತ್ತು ಗ್ರಹಿಸಲಾಗಿದೆ. ದೇವದಾಸಿಯರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವಾಗ ಅಭಿವೃದ್ಧಿಯು ಈ ಸಮುದಾಯವನ್ನು ಒಳಗೊಂಡಿರುವುದೇ ಇಲ್ಲವೆ ಎಂಬುದನ್ನು ತಿಳಿಯುವ ಸಲುವಾಗಿ ಕೆಲವು ಮಿತಿಗಳನ್ನು ಇಟ್ಟುಕೊಂಡು ಈ ಅಧ್ಯಯನಕ್ಕೆ ಬೇಕಾಗುವಷ್ಟು ಮಾತ್ರ ಚರ್ಚೆ ಮಾಡಲಾಗಿದೆ. ಅಭಿವೃದ್ಧಿಯ ಹಿನ್ನೆಲೆಯಲ್ಲಿ ನೋಡಿದರೂ ಸಹ ದೇವದಾಸಿಯರ ಚಿತ್ರಣವೇ ಮುಖ್ಯ ವಸ್ತುವಾಗಿದೆ. ಅಭಿವೃದ್ಧಿಯ ಪರಿಕಲ್ಪನೆಯನ್ನು ಸರಳವಾದ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ. ದೇವದಾಸಿಯ ಹಿನ್ನೆಲೆಯನ್ನು ಹೆಚ್ಚು ಸಮಾಜ ವಿಜ್ಞಾನದ ದೃಷ್ಟಿಕೋನದಲ್ಲಿ ಮತ್ತು ಬಹುಶಿಸ್ತೀಯ ನೆಲೆಯಲ್ಲಿ ನೋಡಲಾಗಿದೆ. ಪ್ರಸ್ತುತ ಅಧ್ಯಯನವು ೨೦೧೧ರಿಂದ ೨೦೧೮ರ ವರ್ಷದವರೆಗಿನ ಮಾಹಿತಿಯನ್ನು ಮಾತ್ರ ಮುಖ್ಯವಾಗಿ ಗಣನೆಗೆ ತಗೆದುಕೊಳ್ಳಲಾಗಿದೆ. ಕೊನೆಯಲ್ಲಿ ಅಧ್ಯಯನಕಾರನ ಅನುಭವ, ಸಂಪನ್ಮೂಲ ಮತ್ತು ಕಾಲ ಹಾಗೂ ಸಂಶೋಧಕನ ಶೈಕ್ಷಣಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ಮಿತಿಯನ್ನು ಹಾಕಿಕೊಳ್ಳಲಾಗಿದೆ.

## ೧.೮. ಅಧ್ಯಾಯಗಳ ವಿನ್ಯಾಸ

ಅಧ್ಯಯನದ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಜೊತೆಗೆ ಪ್ರಸ್ತಾವನೆಯನ್ನು ಮತ್ತು ಅಧ್ಯಯನಕ್ಕೆ ಬಳಸಿದ ಕೋಷ್ಟಕಗಳ ಪಟ್ಟಿ, ಅಧ್ಯಾಯಗಳ ಪರಿವಿಡಿ, ಕೊನೆಯ ಭಾಗದ ಅನುಬಂಧದಲ್ಲಿ ಅಧ್ಯಯನಕ್ಕೆ ಬಳಸಿದ ಆಕರ ಗ್ರಂಥಗಳು, ಕ್ಷೇತ್ರಕಾರ್ಯಕ್ಕೆ ಬಳಸಿದ ಪ್ರಶ್ನಾವಳಿ ಮತ್ತು ಸಂಶೋಧನಾ ಸಮಯದಲ್ಲಿ ಸಂಗ್ರಹಿಸಿದ ಕೆಲವು ಪ್ರಮುಖ ದಾಖಲೆಗಳು ಪ್ರಬಂಧದಲ್ಲಿ ಸೇರಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಮೊದಲನೆಯ ಭಾಗದ ಪ್ರಸ್ತಾವನೆ, ಅಧ್ಯಯನದ ಪ್ರೇರಕಾಂಶ ಮತ್ತು ಅಗತ್ಯತೆ, ಅಧ್ಯಯನದ ಮಹತ್ವ ಇಲ್ಲಿ ಪ್ರಸ್ತುತದ ಅಧ್ಯಯನವನ್ನು ಕೈಗೊಳ್ಳಲಿಕ್ಕೆ ಮುಂಚೆ ಸಂಶೋಧಕನಿಗಿದ್ದ ಆಸಕ್ತಿ, ಸಂಶೋಧನಾ ವಸ್ತುವಿನ ಪ್ರಸ್ತುತದಲ್ಲಿ ಅಗತ್ಯತೆ ಮತ್ತು ಈ ಅಧ್ಯಯನದ ಮೂಲಕ ಶೈಕ್ಷಣಿಕ ಮತ್ತು ಸಂಶೋಧನಾ ಕ್ಷೇತ್ರಕ್ಕೆ ಸಿಗುವ ಮಹತ್ವ ಮತ್ತು ಅಧ್ಯಯನದಿಂದ ಸಂಶೋಧಕನಿಗಾಗುವ ತಾಂತ್ರಿಕ ಪ್ರಯೋಜನವನ್ನು ಸಹ ಚರ್ಚಿಸಲಾಗಿದೆ. ಅಧ್ಯಯನದ ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳು, ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ ಮತ್ತು ವಿಶ್ಲೇಷಣೆ, ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳನ್ನು ಅಧ್ಯಯನದ ಪ್ರಸ್ತಾವನೆಯಲ್ಲಿ ವಿವರವಾಗಿ ಚರ್ಚಿಸಿದೆ. ಇಲ್ಲಿಯವರೆಗಿನ ಅಧ್ಯಯನಗಳ ಪರಾಮರ್ಶೆ ಮತ್ತು ಅವುಗಳ ವಿಮರ್ಶೆಯ ಮೂಲಕ ಅಧ್ಯಯನದ ಸಮಸ್ಯೀಕರಣ ಅದಕ್ಕೆ ಅನುಗುಣವಾಗಿ ಸಂಶೋಧನಾ ಪ್ರಶ್ನೆಗಳು, ಇದಕ್ಕೆ ಪೂರಕವಾಗಿ ಅಧ್ಯಯನದ ಉದ್ದೇಶಗಳು, ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನದ ವಿಧಾನ ಮತ್ತು ವಿಶ್ಲೇಷಣೆ, ಹಾಗೆ ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳನ್ನು ಮತ್ತು ಪ್ರಬಂಧದಲ್ಲಿ ಬರುವ ಅಧ್ಯಾಯಗಳ ವಿನ್ಯಾಸವನ್ನು ಹಾಕುವುದರ ಮೂಲಕ ಅಧ್ಯಯನದ ಪ್ರಸ್ತಾವನೆಯನ್ನು ವಿವರವಾಗಿ ಚರ್ಚಿಸಿದೆ.

ಎರಡನೆಯ ಅಧ್ಯಾಯದಲ್ಲಿ ಅಧ್ಯಯನದ ಸಾಹಿತ್ಯ ಸಮೀಕ್ಷೆ ಅಥವಾ ಸೈದ್ಧಾಂತಿಕ ಚೌಕಟ್ಟು ಮತ್ತು ಅದರ ತಾತ್ವಿಕ ವಿಚಾರಗಳ ವಿಮರ್ಶಾತ್ಮಕ ಚರ್ಚೆಯನ್ನು ಮಾಡಲಾಗಿದೆ. ಇದರಲ್ಲಿ ಅಭಿವೃದ್ಧಿ ಪರಿಕಲ್ಪನೆಯ ಚರ್ಚೆ ಮತ್ತು ಈ ವಿಚಾರವನ್ನು ಸಂಕ್ಷಿಪ್ತ ರೀತಿಯಲ್ಲಿ ಮತ್ತು ದೇವದಾಸಿಯರ ಪರಿಸ್ಥಿತಿಯನ್ನು ಅರ್ಥ ಮಾಡುವಾಗ ಅಭಿವೃದ್ಧಿಯು ಈ ಸಮುದಾಯವನ್ನು ಒಳಗೊಂಡಿರುವುದೇ ಇಲ್ಲವೆ ಎಂಬುದನ್ನು ತಿಳಿಯುವ ಸಲುವಾಗಿ ಕೆಲವು ಮಿತಿಗಳನ್ನು ಇಟ್ಟುಕೊಂಡು ಈ ಅಧ್ಯಯನಕ್ಕೆ ಬೇಕಾಗುವಷ್ಟು ಮಾತ್ರ ಚರ್ಚೆ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಮಹಿಳೆಯರಿಗೆ ಸಂಬಂಧಿಸಿರುವುದರಿಂದ ಸಾಮಾನ್ಯ ಮಹಿಳೆ, ದಲಿತ ಮಹಿಳೆಯರ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ದೇವದಾಸಿಯರ ಸಂಪೂರ್ಣ ಚರ್ಚೆ, ಇಲ್ಲಿ ದೇವದಾಸಿಯ ಅರ್ಥ, ಯಾರು ಬಲಿಯಾಗಿದ್ದಾರೆ, ಜಗತ್ತಿನಾದ್ಯಂತ ಈ ಪದ್ಧತಿಯ ಉಗಮ ಮತ್ತು ಬೆಳವಣಿಗೆ, ಭಾರತದಲ್ಲಿ ಇದರ ಉಗಮ ಮತ್ತು ಉಳಿವು, ಈಗಲೂ ತನ್ನ ವಿಷಬೀಜಗಳನ್ನು ಅಲ್ಲಲ್ಲಿ ಬಿತ್ತುತ್ತಿರುವ ಪ್ರಸ್ತುತ ಕರ್ನಾಟಕದಲ್ಲಿ ಇದರ ಅಸ್ತಿತ್ವಕ್ಕೆ ಸಂಬಂಧಿಸಿದ ವಿಚಾರಗಳ ಕಡೆ ಗಮನ ಹರಿಸಲಾಗಿದೆ.

ಮೂರನೆಯ ಅಧ್ಯಾಯವು ಭೌಗೋಳಿಕ ಕ್ಷೇತ್ರದ ಪರಿಚಯ ಅದರಲ್ಲಿ ಕೊಪ್ಪಳ ಜಿಲ್ಲೆಯ ವಿವರಣೆ ಮತ್ತು ನಾಲ್ಕು ತಾಲೂಕುಗಳ ಸಂಕ್ಷಿಪ್ತ ವಿವರಣೆ, ಸಾಮಾನ್ಯವಾಗಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಭೌಗೋಳಿಕ ವಿಸ್ತೀರ್ಣ, ಜನಸಂಖ್ಯೆ, ಅಲ್ಲಿನ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸಂಕ್ಷಿಪ್ತ ವಿಚಾರಗಳನ್ನು ದಾಖಲಿಸಲಾಗಿದೆ. ಕೊಪ್ಪಳವನ್ನೇಕೆ ಈ ಅಧ್ಯಯನದಲ್ಲಿ ತೆಗೆದುಕೊಂಡ ವೈಜ್ಞಾನಿಕ ವಿಚಾರ ಮತ್ತು ಅಧ್ಯಯನದ ಮೂಲ ವಸ್ತು ಮತ್ತು ಅದರ ಸ್ಥಾನಮಾನವನ್ನು ಸಹ ಚರ್ಚೆ ಮಾಡಲಾಗಿದೆ. ಕೊಪ್ಪಳ ಜಿಲ್ಲೆಯಲ್ಲಿರುವ ದೇವದಾಸಿಯರ ಅಂಕಿ ಸಂಖ್ಯೆಗಳನ್ನು ಸಹ ಈ ಅಧ್ಯಾಯದಲ್ಲಿ ಸೇರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ದೇವದಾಸಿಯರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಸ್ತುತದ ಸ್ಥಿತಿಗತಿಗಳ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ್ದನ್ನು ಕ್ರೂಢೀಕರಿಸಿ, ಸರಳ ಅಂಕಿಸಂಖ್ಯೆಗಳ ಮೂಲಕ ವಿಶ್ಲೇಷಿಸಿ ಕೋಷ್ಟಕಗಳನ್ನು ಮತ್ತು ರೇಖಾನಕ್ಷೆಯನ್ನು ಸಿದ್ಧಪಡಿಸಿ ಅದಕ್ಕೆ ಅನುಗುಣವಾಗಿ ಈಗಾಲೇ ದೊರೆತಿರುವ ಸತ್ಯದ ವಿಚಾರಗಳೊಂದಿಗೆ ಪ್ರಸ್ತುತದ ವಿಶ್ಲೇಷಣೆಯ ಫಲಿತದೊಂದಿಗೆ ಮುಖಾಮುಖಿಯಾಗಿಸುವುದೊರೊಂದಿಗೆ ವಿಶ್ಲೇಷಣೆಯ ವಿವರಣೆಯನ್ನು ಈ ಅಧ್ಯಾಯದಲ್ಲಿ ವಿವರವಾಗಿ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ದೇವದಾಸಿಯರಿಗೆ ಸಂಬಂಧಿಸಿದಂತೆ ಸರ್ಕಾರದ ಕಾಯ್ದೆಗಳು, ಯೋಜನೆಗಳು, ಸಮಕಾಲೀನ ಸನ್ನಿವೇಶದಲ್ಲಿ ದೇವದಾಸಿ ಪದ್ಧತಿಯ ನಿರ್ಮೂಲನೆ ಮತ್ತು ಅಭಿವೃದ್ಧಿಯ ಯೋಜನೆಗಳ ಕುರಿತು ಕೂಲಂಕಷ ಚರ್ಚೆ ಮತ್ತು ಸಮಕಾಲೀನತೆಯಲ್ಲಿ ಸರ್ಕಾರದಿಂದ ದೇವದಾಸಿಯರಿಗೆ ಹಕ್ಕು ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಇರುವ ಕಾರ್ಯಕ್ರಮಗಳ ವಿಮರ್ಶಾತ್ಮಕ ಪರಿಶೀಲನೆಯನ್ನು ಮಾಡಲಾಗಿದೆ. ಕಾಯ್ದೆ, ಅಭಿವೃದ್ಧಿಪರ ಯೋಜನೆಗಳನ್ನು ಕರ್ನಾಟಕದಲ್ಲಿ ಪ್ರಾರಂಭವಾದಾಗಿಲಿಂದ ಇಲ್ಲಿಯವರೆಗೂ ಇರುವ ಎಲ್ಲಾ ಕಾಯ್ದೆ ಮತ್ತು ಯೋಜನೆಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯನವು ಸಮಾರೋಪ ಶೀರ್ಷಿಕೆಯಾಗಿದ್ದು, ಇಡೀ ಅಧ್ಯಯನದಲ್ಲಿ ದೊರೆತ ಮಾಹಿತಿಗಳ ಮೂಲಕ ಒಟ್ಟಾರೆ ಅಧ್ಯಯನದ ಫಲಿತಗಳು, ಶಿಪಾರಸ್ಸುಗಳು ಹಾಗೂ ಪರಿಹಾರೋಪಾಯ ಗಳನ್ನು ನೀಡಲಾಗಿದೆ. ನಂತರ ಅನುಬಂಧದ ಭಾಗದಲ್ಲಿ ಅಧ್ಯಯನಕ್ಕೆ ಬಳಸಿದ ಗ್ರಂಥಸೂಚಿಯನ್ನು ಕೊಡಲಾಗಿದೆ ಮತ್ತು ಅಧ್ಯಯನಕ್ಕೆ ಒಳಪಡಿಸಿದ ಇತರೆ ದಾಖಲೆಗಳನ್ನು ಪಟ್ಟಿ ಮಾಡಲಾಗಿದೆ ಮತ್ತು ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಕೊನೆಟಿಪ್ಪಣಿಗಳು**

೧. ಚಂದ್ರಶೇಖರ ಟಿ.ಆರ್., ೧೯೯೯, ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜು, ಬೆಂಗಳೂರು.

೨. ಹಕ್, ಉಲ್-ಮೆಹಬೂಬ್, ೧೯೯೭, ಹ್ಯುಮನ್ ಡೆವಲಪ್‌ಮೆಂಟ್ ಇನ್ ಸೌತ್ ಏಷಿಯಾನ್, ಒಯುಪಿ, ದೆಹಲಿ.

೩. ಯುಎನ್‌ಡಿಪಿ, ೧೯೯೦, ಹ್ಯುಮನ್ ಡೆವಲಪ್‌ಮೆಂಟ್ ರಿಪೋರ್ಟ್, ಒಯುಪಿ, ನ್ಯೂಯಾರ್ಕ್.

೪. ಚಂದ್ರಶೇಖರ ಟಿ.ಆರ್., (ಲೇ) ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಭಿವೃದ್ಧಿ, ತಲಪರಿಗೆ-ಸಂಪಾದಕತ್ವ- ಕೆ. ರಾಮಯ್ಯ.

೫. ಯಲ್ಲಪ್ಪ ತಾಯಪ್ಪ, ೨೦೧೬, ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಚಂದ್ರಶೇಖರ ಟಿ.ಆರ್., ೧೯೯೩, ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

7. Vani B.P, Vinod and Vyasulu,1997, Development and Deprivation in Karnataka: A District level study, EPW, Vol.32, No.46.

8. Karnataka Human Development Report,1999, Planning Department, Govt of Karnataka, Bangalore.

೯. ಚಂದ್ರ ಪೂಜಾರಿ, ೨೦೧೪, ಅಭಿವೃದ್ಧಿ ಮತ್ತು ರಾಜಕೀಯ, ಯೋಜನಾ ಸಂಚಿಕೆ-೯, ಸಂಪುಟ-೨೯, ಏಪ್ರಿಲ್, ಕೇಂದ್ರೀಯ ಸಧನ, ಬೆಂಗಳೂರು.

೧೦. ಮಲ್ಲಿಕಾ ಘಂಟಿ, ೨೦೧೦, "ಅಂಬೇಡ್ಕರ್ ಮತ್ತು ಮಹಿಳೆ" ಚಿನ್ನಸ್ವಾಮಿ ಸೊಸಲೆ ಅವರ ಸಂಪಾದಕತ್ವದಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಸಮಕಾಲಿನ ದಲಿತರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ನೀಲಾ ಕೆ, ೨೦೦೧, ಮಹಿಳೆ-ಶೋಷಣೆಯ ನೆಲೆಗಳು. ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ,

೧೨. ಮೀನಾಕ್ಷಿ, ೨೦೧೦, ನಿರ್ಣಯ ಪ್ರಕ್ರಿಯೆಯಲ್ಲಿ ಚುನಾಯಿತ ಮಹಿಳೆಯರ ಪಾತ್ರ, ಮಂಟಪಮಾಲೆ-೧೭೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೩. ಛಾಯಾ ದೇಗಾಂವಕರ್, ೨೦೦೮, ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ಮಹಿಳೆ.

೧೪. ಶಾಂತಾ ಭಂಗಾರಿ,೨೦೦೮, "ಸ್ಟೇಟಸ್ ಅಫ್ ವಿಡ್ಸೊ ಇನ್ ರೂರಲ್ ಇಂಡಿಯಾ" ಒಂದು ಸಮಾಜಶಾಸ್ತ್ರೀಯ ಅಧ್ಯಯನ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,

೧೫. ಗುರುಮೂರ್ತಿ ಕೆ.ಜಿ., ೧೯೯೬, ಧರ್ಮ ಮತ್ತು ರಾಜಕೀಯ ಎಂಬ ಸಂಶೋಧನ ಪ್ರಬಂಧದ, ವಿಮೋಚನಾ ಪ್ರಕಾಶನ, ಅಥಣಿ.

16. Shankar Jogan,1988, Determinants of persistence and continuity of Devadasi cult: A sociological study Ph.D. theses, Karnataka university, Darawad.

17. Maggie Black, 2007, Ritual Slavery, Anti Slavery International.

18. Tarachand K.C., 1987, women in sacred prostitution: A study of Devadasi custom, Ph.D. these of Anthropology, Karnataka university, Darawad.

೧೯. ಉತ್ತಮ ಕಾಂಬಳೆ, (ಕನ್ನಡಕ್ಕೆ) ಸಿದ್ರಾಮ ಕಾರಣಿಕ, ೨೦೧೩, ದೇವದಾಸಿ ಮತ್ತು ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ,

೨೦. ಶಾರದ ಲಹಂಗಿರ್, ೨೦೧೨, ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ಡೆಕ್ಕನ್ ಹೆರಾಲ್ಡ್, ಆಗಸ್ಟ್ ೪ನೇ ತಾರೀಖು, ಶನಿವಾರ.

೨೧. ಆನಂದಿ ಎಸ್., ಮೇ ೪, ೨೦೧೩, ಮಾತಮ್ಮ, ಜೆಂಡರ್, ಕ್ಯಾಸ್ಟ್, ಅಂಡ್ ಪಾಲಿಟಿಕ್ಸ್ ಆಫ್ ಇಂಟರ್ ಸೆಕ್ಷನಾಲಿಟಿ ಇನ್ ರೂರಲ್ ತಮಿಳುನಾಡು, ಇ.ಪಿ.ಡಬ್ಲ್ಯು, ವ್ಯಾಲ್ಯುಂ XLVIII No 18.

೨೨. ಪ್ರತಿಭಾ ಬಿ ದೇಸಾಯಿ, ೨೦೧೨, ಕ್ಯಾಸ್ಟ್ ಅಂಡ್ ಪೇಟ್ರಿಯಾರ್ಕಿ ಅಂಡ್ ಎಕ್ಸ್ ಪ್ಲೋಯ್ಟೇಷನ್ ಆಫ್ ಷೆಡ್ಯುಲ್ ವುಮೆನ್ಸ್, ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸೊಸಿಯಲ್ ಸೈನ್ಸ್ ಅಂಡ್ ಇಂಟರ್ ಡಿಸಿಪ್ಲಿನರಿ ರೀಸರ್ಚ್, ವ್ಯಾಲುಮ್-೧, ನ-೬,

೨೩. ಶೈಲಜಾ ಹಿರೇಮಠ, ೨೦೧೧, ಹರದೇಶಿ-ನಾಗೇಶಿ: ಕಲೆ ಮತ್ತು ಕಲಾವಿದರು ಲಿಂಗಸಂಬಂಧಿ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

24. Jayakumar K. and Debharati Haldar, 2005, “Prostitution in India; Issues and Trends” website,

25. Zoya Zaidi,2005, Devadasis system in Indian temples, Aligarh UP,

೨೬. ಲೀಲಾ ಸಂಪಿಗೆ, ೨೦೦೦, ಜನಪದ ಮತ್ತು ಅಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಹನುಂಮತ ಹಾಲಿಗೇರಿ, ವೇಶ್ಯಾ ಜಗತ್ತಿನ ಅನಾವರಣ ಕೆಂಗುಲಾಬಿ (ಕಾದಂಬರಿ).

ಅಧ್ಯಾಯ ೨

# ಅಧ್ಯಯನದ ಸಾಹಿತ್ಯ ಸಮೀಕ್ಷೆ ಮತ್ತು ಅದರ ತಾತ್ವಿಕ ವಿಚಾರಗಳ ವಿಮರ್ಶಾತ್ಮಕ ಚರ್ಚೆ

**೨.೧. ಅಭಿವೃದ್ಧಿಗೆ ಸಂಬಂಧಿಸಿದ ಅಧ್ಯಯನಗಳು**

೨.೧.೧. ಪೀಠಿಕೆ

೨.೧.೨. ಅಭಿವೃದ್ಧಿ ಪರಿಕಲ್ಪನೆಯ ವಿವಿಧ ವ್ಯಾಖ್ಯಾನಗಳ ನಿರ್ವಚನೆ

೨.೧.೩. ಜಗತ್ತಿನ ಮತ್ತು ಭಾರತದಲ್ಲಿನ ಅಭಿವೃದ್ಧಿಯ ಸಿದ್ಧಾಂತದ ಚರ್ಚೆಗಳು

೨.೧.೪. ಕರ್ನಾಟಕದಲ್ಲಿ ಅಭಿವೃದ್ಧಿ ಕುರಿತ ಚರ್ಚೆಗಳು

೨.೧.೫. ಇತರೆ ಸಮಾಜ ವಿಜ್ಞಾನಗಳಲ್ಲಿ ಅಭಿವೃದ್ಧಿ ಕುರಿತ ವ್ಯಾಖ್ಯಾನಗಳು ಮತ್ತು ಚರ್ಚೆಗಳು

**೨.೨. ಮಹಿಳೆ, ದಲಿತ ಮಹಿಳೆಯರ ಕುರಿತ ಅಧ್ಯಯನಗಳು**

೨.೨.೧. ಮಹಿಳೆಯರ ಮತ್ತು ದಲಿತ ಮಹಿಳೆಯರ ಕುರಿತ ಚರ್ಚೆಗಳು

೨.೨.೨. ದಲಿತ ಮತ್ತು ಆದಿವಾಸಿ ಮಹಿಳೆಯರ ಕುರಿತ ಚರ್ಚೆಗಳು

**೨.೩. ದೇವದಾಸಿಯರು ಮತ್ತು ದೇವದಾಸಿ ಪದ್ಧತಿಯ ಕುರಿತ ಸಮಗ್ರ ಚರ್ಚೆಗಳು**

೨.೩.೧. ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿರುವ ದೇವದಾಸಿ ಪದ್ಧತಿ

೨.೩.೨. ಭಾರತದಲ್ಲಿ ದೇವದಾಸಿ ಪದ್ಧತಿಯ ಮೂಲ ಮತ್ತು ಅದರ ಬೆಳವಣಿಗೆಯ ಕುರಿತ ಚರ್ಚೆ

೨.೩.೩. ಕರ್ನಾಟಕದಲ್ಲಿ ದೇವದಾಸಿ ಪದ್ಧತಿ

೨.೩.೪. ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯ ಪದ್ಧತಿ

ಅಧ್ಯಾಯ ಎರಡು

# ಅಧ್ಯಯನದ ಸಾಹಿತ್ಯ ಸಮೀಕ್ಷೆ ಮತ್ತು ಅದರ ತಾತ್ವಿಕ ವಿಚಾರಗಳ ವಿಮರ್ಶಾತ್ಮಕ ಚರ್ಚೆ

## ೨.೧. ಅಭಿವೃದ್ಧಿಗೆ ಸಂಬಂಧಿಸಿದ ಅಧ್ಯಯನಗಳು

### ೨.೧.೧. ಪೀಠಿಕೆ

ಈ ಅಧ್ಯಯನದ ಸ್ಪಷ್ಟವಾದ ಮತ್ತು ವಿಶಾಲವಾದ ಉದ್ದೇಶವೇನೆಂದರೆ ಅಧುನಿಕತೆಯ ಹಿನ್ನೆಲೆಯಲ್ಲಿ ಮತ್ತು ಅಭಿವೃದ್ಧಿಯ ರಾಜಕಾರಣದ ಪ್ರಕ್ರಿಯೆಯಲ್ಲಿ ದೇವದಾಸಿಯರ ಸಮಗ್ರ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಈ ಅಧ್ಯಾಯದಲ್ಲಿ ಅಭಿವೃದ್ಧಿ ಪರಿಕಲ್ಪನೆ, ದೇವದಾಸಿಯರ ಮೇಲಿನ ಅಧ್ಯಯನಗಳ ಸಾಹಿತ್ಯಾವಲೋಕನದ ವರದಿ ಮತ್ತು ಪ್ರತಿ ಅಧ್ಯಯನಕ್ಕು ನನ್ನ ಅಭಿಪ್ರಾಯ ಮತ್ತು ವಿಮರ್ಶೆಯನ್ನು ದಾಖಲಿಸಿದ್ದೇನೆ. ಇಲ್ಲಿ ಅಧ್ಯಯನಗಳ ಸಮೀಕ್ಷೆ ಎನ್ನುವ ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಪರಾಮರ್ಶಿಸಲಾಗಿದೆ. ಈ ಅಧ್ಯಯನವು ಮುಖ್ಯವಾಗಿ ಇಲ್ಲಿಯವರೆಗೆ ನಡೆದ ಅಧ್ಯಯನಗಳನ್ನು ಎರಡು ಗುಂಪುಗಳಾಗಿ ಸಮೀಕ್ಷೆ ಮಾಡಿಕೊಳ್ಳಲಾಗಿದೆ. ಮೊದಲನೆಯದು ಅಭಿವೃದ್ಧಿ ಸಿದ್ಧಾಂತಗಳಿಗೆ ಸಂಬಂಧಿಸಿದ ಅಧ್ಯಯನಗಳು, ಎರಡನೆಯದು ಮಹಿಳೆ, ದಲಿತ ಮಹಿಳೆ ಮತ್ತು ದೇವದಾಸಿ ಪದ್ಧತಿ ಮತ್ತು ದೇವದಾಸಿಯರ ಕುರಿತು ಇಲ್ಲಿಯವರೆಗಿನ ಅಧ್ಯಯನಗಳ ಚರ್ಚೆ ಮುಂತಾದವನ್ನು ವಿಮರ್ಶಾತ್ಮಕವಾಗಿ ನೋಡಲಾಗಿದೆ.

ಸಾಮಾನ್ಯವಾಗಿ ಅಭಿವೃದ್ಧಿಯೆಂಬ ಕರಿನೆರಳಿನಲ್ಲಿ ಕೆಳಸ್ತರದ ಜನರು, ಹಾಗೂ ಸಮುದಾಯಗಳು ತಮ್ಮ ಅಸ್ಥಿತ್ವವನ್ನು ಕಳೆದುಕೊಂಡು ನೀರಸವಾದ ಬದುಕನ್ನು ಸಾಗಿಸುತ್ತಾರೆ. ಉದಾಹರಣೆಗೆ ಭಾರತದಲ್ಲಿ ವಿದೇಶಿ ಬಂಡವಾಳ ಹೂಡುವಿಕೆಯಿಂದ ದೊಡ್ಡ ಬಹುರಾಷ್ಟ್ರೀಯ ಕಂಪನಿಗಳು, ಪ್ರಾಜೆಕ್ಟ್‌ಗಳು, ?ಅಣೆಕಟ್ಟುಗಳು ಹೊಸ ರೀತಿಯ, ಕಟ್ಟಡಗಳನ್ನು ಹಾಗೂ ಮುಂತಾದ ಅಭಿವೃದ್ಧಿಯ ಹೆಸರಿನಲ್ಲಿ ಮಾಡುವಂತಹ ಪ್ರಕ್ರಿಯೆಯಲ್ಲಿ ಅಭಿವೃದ್ಧಿಯೆಂಬ ಹುನ್ನಾರವನ್ನು ಜಾಗತೀಕರಣವು

ಭಾರತದಂತಹ ದೇಶಗಳಿಗೆ ಕೊಡುಗೆಯಾಗಿ ನೀಡಿದೆ. ಜಾಗತೀಕರಣದ ಪ್ರಕ್ರಿಯೆಯು ತನ್ನ ಇನ್ನೆರಡು ಬಾಹುಗಳಾದ ಉದಾರೀಕರಣ. ಹಾಗೂ ಖಾಸಗೀಕರಣವನ್ನು ಪರಿಚಯಿಸಿದೆ. ಇದರ ಅರ್ಥ ವಿವರಣೆಯನ್ನು ಈ ಅಧ್ಯಯನದಲ್ಲಿ ಸಂಕ್ಷಿಪ್ತ ರೀತಿಯಲ್ಲಿ ವಿವರಿಸಲಾಗಿದೆ. ಹಾಗೇ ಅಭಿವೃದ್ಧಿಯ ಹೆಸರಿನಲ್ಲಿ ಬಂದಂತಹ ಈ ಜಾಗತೀಕರಣವು ಭಾರತದಂತಹ ಜಾತಿ ವ್ಯವಸ್ಥೆಯ ಮೇಲೆ ತನ್ನ ಕರೀನೆರಳನ್ನು ಚೆಲ್ಲಿದೆ ಅಂದರೆ ಇಲ್ಲಿ ಭಾರತ ಸಂವಿಧಾನದ ಮೀಸಲಾತಿಯು ತನ್ನದೇ ಆದ ವೈಶಿಷ್ಠತೆಯನ್ನು ಹೊಂದಿದೆ. ಅದರೆ ಜಾಗತೀಕರಣದ ಅನುಷ್ಠಾನದಲ್ಲಿ ಈ ಮೀಸಲಾತಿಯ ಕಲ್ಪನೆಯೇ ಬರುವುದಿಲ್ಲ. ಅದರೂ ಸಹ ಮೀಸಲಾತಿಯ ಬಗ್ಗೆ ಪರ ವಿರೋಧಗಳು ಕೇಳೀ ಬರುತ್ತವೆ. ಅದರೆ ಖಾಸಗೀಕರಣದಡಿಯಲ್ಲಿ ದಲಿತರ ಹಾಗೂ ಹಿಂದುಳಿದವರ ಮೀಸಲಾತಿಯ ಮೇಲಿನ ಕೂಗುಗಳು ಕೇಳಿ ಬರುತ್ತಿವೆ. ಅಲ್ಲಿಲ್ಲಿ ಸಣ್ಣಪುಟ್ಟ ಸಂಘಟನೆಗಳು ಇದರ ಬಗ್ಗೆ ಹೋರಾಟ ಮಾಡುತ್ತಿವೆ. ಅದರೆ ಇಲ್ಲಿ ಯಾರು ಯಾರ? ಮೀಸಲಾತಿಯನ್ನು ಪಡೆಯುತ್ತಾರೋ ಎಂಬುದು ಪ್ರಶ್ನಾರ್ಥಕವಾಗಿದೆ?

ಹಾಗೇ ಇತ್ತೀಚೆಗೆ ಜಾಗತೀಕರಣದ ಹಿನ್ನೆಲೆಯಲ್ಲಿ ವಿಶ್ವದದ್ಯಾಂತ, ಪ್ರಮುಖವಾದ ಮಾನವತಾ ಹೋರಾಟಗಳು ನಡೆಯುತ್ತಿವೆ. ಚೀನೀಯದಲ್ಲಿ ಇತ್ತೀಚೆಗೆ ನೆಡೆದಂತಹ ಜಾಗತೀಕರಣದ ವಿರೋದಿ ಹೋರಾಟಗಳು ಭಾರತದಂತಹ ಅಭಿವೃದ್ಧಿಶೀಲ ಸಮಾಜಕ್ಕೆ ಬಹಳಷ್ಟು ಮಟ್ಟಿಗೆ ಸಾಂತ್ವನ ನೀಡುತ್ತಿವೆ ಇಂತಹ ವಿರೋಧಿ ಚಟುವಟಿಕೆಗಳ ಅಂತರಾಳದಲ್ಲಿ ಜಾಗತೀಕರಣ ನಿರ್ದೇಶಿಸುವ ಅರ್ಥಿಕ ಅಂಶಗಳೊಂದಿಗೆ ಜಾಗತೀಕರಣದ ನೆರಳಿನಲ್ಲಿ ಅರಳುತ್ತಿರುವ ಖಾಸಗೀಕರಣ ಹಾಗೂ ಉದಾರೀಕರಣದ ಪ್ರಭಾವ, ದೇಶಿಯ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳ ಮೇಲೆ ಇದರಿಂದಾದ ದುಷ್ಪರಿಣಾಮಗಳು ಹೇಗೆ ಕೆಲಸ ಮಾಡುತ್ತಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಹೀಗೆ ಜಗತ್ತಿನ ಅಭಿವೃದ್ಧಿ ಪರ ದೇಶಗಳಲ್ಲಿ ಅಭಿವೃದ್ಧಿ ಹೊಂದಿದ ದೇಶಗಳು ತಮ್ಮ ಆರ್ಥಿಕ ಅಂಶಗಳನ್ನು ಮುಂದಿಟ್ಟು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮೇಲೆ ಹಾಗೂ ಅಲ್ಲಿನ ಕೆಳಸ್ತರದ ಜನರ ಮೇಲೆ ಸಮಾದಿಯನ್ನು ಕಟ್ಟಲು ಹೊರಟಿರುವ ಜಾಗತೀಕರಣದ ಹಿನ್ನೆಲೆ ಹಾಗೂ ಇದರ ತೊಡಕುಗಳು ದಲಿತರಿಗೆ ಯಾವ ರೀತಿ ಪರಿಣಾಮಾಕಾರಿಯಾಗಿವೆ ಎಂಬುದುನ್ನು ತಿಳಿಯುವುದು ಅಧ್ಯಯನ ಉದ್ದೇಶವಾದ್ದರಿಂದ ಜಾಗತೀಕರಣದ ಹಿನ್ನೆಲೆಯಲ್ಲಿ ದಲಿತರ ಶಿಕ್ಷಣ, ಉದ್ಯೋಗ, ಮಹಿಳೆ ಹಾಗೂ ಆರೋಗ್ಯದ ಸ್ಥಿತಿಗತಿಗಳು, ಭೂಮಿ, ನೀರು, ಹಾಗೂ ಮಾನವ ಹಕ್ಕುಗಳ ಮೇಲೆ ಯಾವ ರೀತಿ ಪರಿಣಾಮಕಾರಿಯಾದ ಪ್ರಭಾವಗಳನ್ನು ಬೀರಿದೆ.

### ೨.೧.೨. ಅಭಿವೃದ್ಧಿ ಪರಿಕಲ್ಪನೆಯ ವಿವಿಧ ವ್ಯಾಖ್ಯಾನಗಳ ನಿರ್ವಚನೆ

'ಅಭಿವೃದ್ಧಿ' ಅರ್ಥವನ್ನು ವಿಶ್ಲೇಷಿಸುವುದು ಒಂದು ಸಂಕೀರ್ಣವಾದ ಸಂಗತಿ. "ಅಭಿವೃದ್ಧಿ ಎಂಬ ಪದ ಏನನ್ನು ತಿಳಿಸುತ್ತಿದೆ ಎಂಬುದರ ಬಗ್ಗೆ ಗಂಭೀರ ಚರ್ಚೆ ನಡೆಯುತ್ತಿದೆ. 'ಅಭಿವೃದ್ಧಿ', 'ಆರ್ಥಿಕ ಬೆಳವಣಿಗೆ'ಗಳ ಬಗೆಗಿನ ಕಲ್ಪನೆಗಳು ಹಲವಾರು ಶತಮಾನಗಳಿಂದ ವಿಕಸಿತಗೊಳ್ಳುತ್ತಾ,

ನಡೆದಿವೆ. ಅಭಿವೃದ್ಧಿ ಕುರಿತಾದ ಮೀಮಾಂಸೆಗಳು 'ಅಭಿವೃದ್ಧಿ ಅರ್ಥಶಾಸ್ತ್ರ'ವೆಂಬ ಜ್ಞಾನಶಿಸ್ತುವಿನಲ್ಲಿ ಹೆಚ್ಚು ಮಂಡಿತವಾಗುತ್ತಿವೆ. ಅಭಿವೃದ್ಧಿ ಅರ್ಥಶಾಸ್ತ್ರ ಎಂಬುದು ಹೊಸ ಜ್ಞಾನ ಶಿಸ್ತೇನಲ್ಲ. ಈಗಾಗಲೇ ಅಸ್ತಿತ್ವದಲ್ಲಿದ್ದ ಜ್ಞಾನ ಶಿಸ್ತುವಿನ ಒಂದು ಅಂಗ ಮಾತ್ರ, ೧೯೪೦ ಮತ್ತು ೧೯೫೦ರ ದಶಕದಲ್ಲಿ, ಅದರಲ್ಲಿಯೂ ಎರಡನೆಯ ಪ್ರಪಂಚ ಯುದ್ಧದ ನಂತರ ಅಭಿವೃದ್ಧಿ ಅರ್ಥಶಾಸ್ತ್ರ ಕುರಿತಂತೆ ಚಿಂತನೆಗಳು ಪ್ರಾರಂಭಗೊಂಡವು. ಅಭಿವೃದ್ಧಿ ಎಂದರೆ 'ಆರ್ಥಿಕ ಬೆಳವಣಿಗೆ' ಎಂಬ ಸೀಮಿತನೆಲೆಯಲ್ಲಿ ಅಭಿವೃದ್ಧಿಯನ್ನು ಅನೇಕ ಅರ್ಥಶಾಸ್ತ್ರಜ್ಞರು ಅರ್ಥೈಸಿದ್ದಾರೆ. "ಪ್ರಜ್ಞಾಪೂರ್ವಕವಾಗಿ ಉದ್ದೇಶ ಪೂರ್ವಕವಾಗಿ ಬೆಳವಣಿಗೆಯನ್ನು ಉದ್ದೀಪನಗೊಳಿಸುವುದೇ ಅಭಿವೃದ್ಧಿ"(**ಬ್ರೆನ್ನರ್; ೧೯೬೬**). ಆರ್ಥಿಕ ಬೆಳವಣಿಗೆಯೇ ಆರ್ಥಿಕ ಅಭಿವೃದ್ಧಿ ಎನ್ನುವುದರ ಮೂಲಕ ಅಭಿವೃದ್ಧಿಯನ್ನು ಆರ್ಥಿಕ ಕ್ಷೇತ್ರವೇ ತನ್ನ ಹಿಡಿತದಲ್ಲಿ ಹಿಡಿದಿತ್ತು. ವ್ಯಕ್ತಿಯ ಜೀವನದಲ್ಲಿ ಕೇವಲ ಭೌತಿಕ ಅಂಶಗಳು ಮಾತ್ರ ಮುಖ್ಯವಲ್ಲ. ಅಂತಸ್ಥ ಗುಣಗಳಿಗೆ ನಾವು ಮನ್ನಣೆಯನ್ನು ನೀಡಬೇಕಾಗುತ್ತದೆ. ಅಭಿವೃದ್ಧಿ ಎಂಬುದು ಕೇವಲ ಆರ್ಥಿಕ ಸಾಮಾಜಿಕ ನೆಲೆಗಳಿಗೆ ಮಾತ್ರ ಸೀಮಿತವಾಗಿರದೇ ಮಾನವನ ಜೀವನದ ಪ್ರತಿಯೊಂದು ಅಂಶವನ್ನು ಒಳಗೊಂಡಿರುತ್ತದೆ. "ಅಭಿವೃದ್ಧಿ ಎಂಬುದು ಸಮಾಜ ಮತ್ತು ಸಮಾಜದಲ್ಲಿನ ಆರ್ಥಿಕತೆ, ಸಾಮಾಜಿಕ, ರಾಜಕೀಯ, ಭೌತಿಕ ರಚನೆಯಲ್ಲಿ ಮತ್ತು ಜನತೆಯ ಮೂಲಭೂತವಾದ ಬದಲಾವಣೆಯನ್ನು ತರುವ ಪ್ರಕ್ರಿಯೆಯಾಗಿದೆ.(**ಅಲೆಗ್ಸಾಂಡರ್, ೧೯೭೧**). ಆದುದರಿಂದ ಅಭಿವೃದ್ಧಿಯನ್ನು ಕೇವಲ ಸೀಮಿತ ನೆಲೆಯಲ್ಲಿ ಗುರುತಿಸದೇ ವಿಶಾಲ ದೃಷ್ಟಿಕೋನದಿಂದ ನೋಡುವುದು ಅವಶ್ಯವಾಗಿದೆ. ಅಭಿವೃದ್ಧಿ, ಆರ್ಥಿಕ ಬೆಳವಣಿಗೆಯ ಬಗೆಗಿನ ಕುರಿತಾದ ಚಿಂತನ-ಮಂಥನಗಳು ಸಾಂಪ್ರದಾಯಿಕ ಪಂಥದವರಿಂದ ಪ್ರಚುರಗೊಂಡಿದ್ದರೂ ಇವರಿಗಿಂತ ಹಿಂದಿನ ೧೮ನೇ ಶತಮಾನದಲ್ಲಿದ್ದ ವ್ಯವಸಾಯ ಪಂಥದವರು ಆರ್ಥಿಕ ಬೆಳವಣಿಗೆ ಬಗ್ಗೆ ಅಧ್ಯಯನ ನಡೆಸಿದ್ದರು. ಇವರು ಭೂಮಿ ಮತ್ತು ಅದರ ಸಾಗುವಳಿಗೆ ಹೆಚ್ಚಿನ ಮಹತ್ವ ನೀಡಿದ್ದರು. ವ್ಯವಸಾಯ ವಲಯ ಮಾತ್ರ ಉತ್ಪಾದನೆಯ ಹೆಚ್ಚಳಕ್ಕೆ, ಆರ್ಥಿಕ ಬೆಳವಣಿಗೆಗೆ ಪ್ರಮುಖ ಮೂಲವೆಂಬುದು ಇವರ ವಾದ ಸರಣಿಯಾಗಿತ್ತು. ಈ ಚಿಂತಕರಲ್ಲಿ ಪ್ರಮುಖರೆಂದರೆ ಕ್ವೆಸ್ನೆ ಮತ್ತು ಟಾರ್ಗಾಟ್. ಶ್ರಮಿಕರನ್ನು ಭೂಮಿಯ ಸಾಗುವಳಿಯಲ್ಲಿ ತೊಡಗಿಸಿಕೊಂಡಾಗ ಮಾತ್ರ ಹೆಚ್ಚುವರಿ ಉತ್ಪಾದನೆ ಪಡೆಯಬಹುದೆಂಬುದು ಇವರ ಚಿಂತನೆಯ ತಿರುಳಾಗಿತ್ತು. ಕೃಷಿ ಉತ್ಪನ್ನವು ಇತರ ವಲಯಗಳ ಕಚ್ಚಾವಸ್ತುಗಳ, ಆಹಾರದ ಹೆಚ್ಚಳಕ್ಕೆ ತಿರುಳಾಗಿತ್ತು. ಕಾರಣವಾಗಿ ಕೈಗಾರಿಕಾ ವಲಯದಲ್ಲಿಯ ಉತ್ಪನ್ನದ ಹೆಚ್ಚಳಕ್ಕೂ ಕಾರಣವಾಗುತ್ತದೆ ಎಂಬುದು ಇವರ ಅಭಿಪ್ರಾಯವಾಗಿದ್ದಿತು. ಆದರೆ ಕೈಗಾರಿಕಾ ವಲಯವೇ ಏಕಾಂಗಿಯಾಗಿ ಆರ್ಥಿಕ ಬೆಳವಣಿಗೆ ಯನ್ನು ಉತ್ಪತ್ತಿ ಮಾಡಲಾರದು ಎಂಬುದು ಇವರ ನಂಬಿಕೆಯಾಗಿತ್ತು. ಇವರ ವಾದಗಳನ್ನು ಗಮನಿಸಿದಾಗ, ಇವರು ವರಮಾನ, ಉತ್ಪಾದನೆಗಳಿಗೆ ಮಾತ್ರ ಆದ್ಯತೆಯನ್ನು ನೀಡಿ ಬೆಳವಣಿಗೆ ಹಾಗೂ ಅಭಿವೃದ್ಧಿಯ ಮೂಲ ಮತ್ತು ಅಂತ್ಯ ಎಂದು ಪರಿಗಣಿಸಿರುವ ಮಾನವನನ್ನೇ ನಿರ್ಲಕ್ಷಿಸಿರುವುದು ತಿಳಿಯುತ್ತದೆ. ವ್ಯವಸಾಯ ಪಂಥದವರ ನಂತರ, ವಾಣಿಜ್ಯ ಪಂಥದವರು ಅಭಿವೃದ್ಧಿಯನ್ನು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಿದರು. "ಅಭಿವೃದ್ಧಿ ಬಗೆಗಿನ ಇಂದಿನ ಅರ್ಥದ ಮೊದಲ

ಹಂತ ಆರಂಭವಾದದ್ದು ಅರ್ಥಶಾಸ್ತ್ರದ ವ್ಯಾಪಾರಿ ದೃಷ್ಟಿಕೋನದಿಂದ, ಚಿನ್ನ, ಬೆಳ್ಳಿ ಮತ್ತು ಮುತ್ತು ರತ್ನಗಳನ್ನು ಕಲೆಹಾಕುವುದು ದೇಶದ ಅಭಿವೃದ್ಧಿ ಮತ್ತು ಶಕ್ತಿಗೆ ಬಹುಮುಖ್ಯ ಎಂಬ ಕಲ್ಪನೆಯೂ ಈ ಹೊತ್ತಿನಲ್ಲಿ ಗಟ್ಟಿಯಾಗ ಲಾರಂಭಿಸಿತು. ರಾಷ್ಟ್ರೀಯ ವರಮಾನ ಮತ್ತು ರಾಷ್ಟ್ರೀಯ ಆಸ್ತಿಯ ಪರಿಕಲ್ಪನೆಗಳು ಇದರಿಂದಲೇ ಹುಟ್ಟಿಕೊಂಡಿದ್ದು”(**ಡೋಂಕ್ರೆ೧೯೯೨**). (**ಉಲ್ಲೇಖ; ಯಲ್ಲಪ್ಪ ತಾಯಪ್ಪ, ೨೦೧೬, ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು**)

ಅರ್ಥಶಾಸ್ತ್ರದ ಪಿತಾಮಹರಾದ ಆಡಂಸ್ಮಿತ್ ಮತ್ತು ಆತನ ಅನುಚರರೆಲ್ಲರೂ ವ್ಯಕ್ತಿಯ ಮತ್ತು ಆ ಮೂಲಕ ದೇಶದ ಸೊತ್ತನ್ನು ಅಭಿವೃದ್ಧಿಗೊಳಿಸುವ ಬಗೆಗೆ ಯೋಚಿಸಿದವರು. ರಾಷ್ಟ್ರದ ವರಮಾನ ಹೆಚ್ಚಿದಂತೆಲ್ಲಾ ಜನರ ಸುಖ ಸಂತೋಷಗಳು ವೃದ್ಧಿಸುತ್ತವೆ ಎಂದು ಈ ಅರ್ಥಶಾಸ್ತ್ರಜ್ಞರು ನಂಬಿದ್ದರು. ಹೀಗಾಗಿ ಅಭಿವೃದ್ಧಿ ಎಂದರೆ ಒಂದು ದೇಶ ಸಾಧಿಸುವ ಬೆಳವಣಿಗೆ ಎಂಬ ಅರ್ಥ ಬಲವಾಗಿ ಬೇರೂರಿತು. ೧೮ನೇ ಮತ್ತು ೧೯ನೇ ಶತಮಾನದ ಮಧ್ಯಭಾಗದವರೆಗಿದ್ದ ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರಿಂದ ವಿಸ್ತೃತವಾದ, ಬೆಳವಣಿಗೆ ಅಭಿವೃದ್ಧಿಯ ವಿಚಾರ ಪ್ರಣಾಳಿಕೆಗಳು ರೂಪುಗೊಳ್ಳಲಿಲ್ಲ. ಇವರ ವಿವರಣೆಗಳು ಹೆಚ್ಚಾಗಿ ದೀರ್ಘಾವಧಿಯ ಆರ್ಥಿಕ ಬೆಳವಣಿಗೆಗೆ ಸಂಬಂಧಿಸಿದ್ದಾಗಿದ್ದವು. ಇವರ ರಾಜಕೀಯ ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ತಮ್ಮ ವಿಚಾರ, ಪ್ರಣಾಳಿಕೆಗಳನ್ನು ಮಂಡಿಸಿದರು. ಸಾಂಪ್ರದಾಯಿಕ ಚಿಂತನೆಯನ್ನು ಅಭಿವೃದ್ಧಿಪಡಿಸಿದವರಲ್ಲಿ ಆಡಂಸ್ಮಿತ್, ರಿಕಾರ್ಡೋ, ಮಾಲ್ಥಸ್, ಮತ್ತು ಮಾರ್ಕ್ಸ್ ಪ್ರಮುಖರು. ಮಾರ್ಕ್ಸ್‌ಅವರ ಸೈದ್ಧಾಂತಿಕ ನಿಲುವು ಇನ್ನುಳಿದ ಸಾಂಪ್ರದಾಯಿಕ ಅರ್ಥಶಾಸ್ತ್ರದ ಚಿಂತನೆಗಿಂತ ವಿಭಿನ್ನವಾಗಿತ್ತು. ಅವರು ಬಂಡವಾಳಶಾಹಿತ್ವ ಸಿದ್ಧಾಂತವನ್ನು ಪ್ರಚುರ ಪಡಿಸಿದರು.

ಸಾಂಪ್ರದಾಯಿಕ ಚಿಂತನೆಗಳನ್ನು ಈ ರೀತಿಯಲ್ಲೂ ಕ್ರೋಡೀಕರಿಸಬಹುದಾಗಿದೆ. ಮುಕ್ತವಾದ ಅಂತರರಾಷ್ಟ್ರೀಯ ವ್ಯಾಪಾರವು ಮಾರುಕಟ್ಟೆ ವಿಸ್ತರಣೆಗೆ ಒಂದು ಸಾಧನ ಆಗಿದೆ(ಸ್ಮಿತ್). ಅಂತರ ರಾಷ್ಟ್ರೀಯ ವ್ಯಾಪಾರದಿಂದ ತುಲನಾತ್ಮಕ ಲಾಭ ಸಾಧ್ಯ. ಇದು ಆರ್ಥಿಕ ಬೆಳವಣಿಗೆಗೆ ಪೂರಕ ವಾಗುತ್ತದೆ(ರಿಕಾರ್ಡೋ). ಈ ವಿಧದಲ್ಲಿ ನಿರೂಪಿಸಲ್ಪಟ್ಟ ಸಾಂಪ್ರದಾಯಿಕ ಮೀಮಾಂಸೆಯು ಟೀಕೆಗಳಿಗೆ ಒಳಪಟ್ಟಿತು. ಆರ್ಥಿಕ ಬೆಳವಣಿಗೆಯು ಕೇವಲ ಉತ್ಪಾದಕತೆ, ವರಮಾನಾಭಿವೃದ್ಧಿ, ಬಂಡವಾಳ ಹೂಡಿಕೆ, ತಾಂತ್ರಿಕ ಪ್ರಗತಿ, ಅಂತರರಾಷ್ಟ್ರೀಯ ವ್ಯಾಪಾರಗಳನ್ನು ಮಾತ್ರವೇ ಅವಲಂಬಿಸದೆ, ಜನರ ನಡೆನುಡಿ, ಸಂಪ್ರದಾಯ, ಆಚರಣೆಗಳು, ಧಾರ್ಮಿಕ ಮೌಲ್ಯಗಳನ್ನು ಸಹ ಅವಲಂಬಿಸಿರುತ್ತದೆ. ಈ ಎಲ್ಲ ಅಂಶಗಳು ಈ ಮೀಮಾಂಸೆಯಲ್ಲಿ ಗೌಣವಾಗಿವೆ. ಜಾಗತಿಕ ಮಟ್ಟದಲ್ಲಿ ಬಹುತೇಕ ಅರ್ಥಶಾಸ್ತ್ರಜ್ಞರ ಗಮನವನ್ನು ಸೆಳೆದ ಕಾರ್ಲ್ ಮಾರ್ಕ್ಸ್‌ರ ಚಿಂತನೆಗಳು ಮಾರ್ಕ್ಸ್‌ವಾದವೆಂದೇ ಪ್ರಸಿದ್ಧಿ ಹೊಂದಿವೆ. ಮಾರ್ಕ್ಸ್ ಸಮಾಜೋ ಐತಿಹಾಸಿಕ ಅಂಶಗಳ ಹಿನ್ನೆಲೆಯಲ್ಲಿ ರಾಜಕೀಯ ಅರ್ಥಶಾಸ್ತ್ರದ ತಳಹದಿಯ ಮೇಲೆ ಆರ್ಥಿಕ ಬೆಳವಣಿಗೆಯನ್ನು ವಿಶ್ಲೇಷಿಸಿದ್ದಾರೆ. ಇವರ ವಿಶ್ಲೇಷಣೆಯು ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ, ರಾಜಕೀಯಶಾಸ್ತ್ರ ಮತ್ತು ತತ್ವಶಾಸ್ತ್ರಗಳ ಮಿಶ್ರಣವಾಗಿದೆ. ಸಂತರ ಬಂದ ನವಸಾಂಪ್ರದಾಯಿಕ

ಆರ್ಥಶಾಸ್ತ್ರಜ್ಞರು ಉತ್ಪಾದಕತೆ, ಮಾರುಕಟ್ಟೆ ವ್ಯವಸ್ಥೆ, ಬಂಡವಾಳ ಕ್ರೋಡೀಕರಣಗಳೇ, ಅಭಿವೃದ್ಧಿಯನ್ನು ಪ್ರೇರೇಪಿಸುವ ಅಂಶಗಳೆಂದು ತಿಳಿಸುವುದರ ಮೂಲಕ ಅಭಿವೃದ್ಧಿಯ ಮೂಲ ಮತ್ತು ಕೊನೆಯಾಗಿರುವ ಮಾನವನನ್ನೇ ತಮ್ಮ ಚಿಂತನೆಯಿಂದ ದೂರವಿರಿಸಿದವು. ಅಭಿವೃದ್ಧಿ, ಆರ್ಥಿಕ ಬೆಳವಣಿಗೆಗಳನ್ನು ಕುರಿತಾದ ಸರಿಸುಮಾರು ಎಲ್ಲಾ ಸಿದ್ಧಾಂತಗಳು ಪಾಶ್ಚಿಮಾತ್ಯ ನೆಲೆಗಟ್ಟಿನಲ್ಲಿ ರೂಪುಗೊಂಡಿರುವಂತಾಗಿವೆ. ಸಾಂಪ್ರದಾಯಿಕ ಸಿದ್ಧಾಂತವಾಗಿರಬಹುದು ಇಲ್ಲವೇ ನವಸಾಂಪ್ರದಾಯಿಕ ಸಿದ್ಧಾಂತಗಳು ಆಗಿರಬಹುದು. ಅವು ಭಾರತದಂತಹ ಅಭಿವೃದ್ಧಿಶೀಲ ಆರ್ಥಿಕತೆಗಳ ಅಭಿವೃದ್ಧಿ ಗತಿಶೀಲತೆಯನ್ನು ಗುರುತಿಸುವಲ್ಲಿ ವಿಫಲಗೊಂಡಿವೆ. ಸೆನ್ ಅವರು ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತಗಳನ್ನು ಈ ರೀತಿ ಟೀಕಿಸಿದ್ದಾರೆ.[೨]**(ಚಂದ್ರಶೇಖರ ಟಿ.ಆರ್., ೧೯೯೯)**

ಜಾಗತೀಕರಣದ ವಿಶ್ಲೇಷಣೆಯನ್ನು ಅದರ ಹಿನ್ನೆಲೆಯನ್ನು ಅರ್ಥೈಸಿ ಅದರ ಮುಂದೆ ಬಂದಂತಹ ಅಡ್ಡ ಕೊಂಬೆಗಳಿಂದ ಖಾಸಗೀಕರಣ ಹಾಗೂ ಉದಾರೀಕರಣಗಳ ಬಗ್ಗೆ ತಿಳಿಯುವುದು ಹಾಗೂ ಚರ್ಚೆಗೆ ಒಳಪಡಿಸುವುದು ಅನಿವಾರ್ಯ ಸ್ಥಿತಿ ಅದ್ದರಿಂದ ಈ ಚರ್ಚೆಯ ವಸ್ತುವಾದ ಜಾಗತೀಕರಣವನ್ನು ಸಾಮಾನ್ಯ ತೀರ ಸರಳ ಪದಗಳಲ್ಲಿ ನೋಡಿದಾಗ ಜಗತ್ತಿನಾದ್ಯಂತಹ ಆರ್ಥಿಕ ವ್ಯವಸ್ಥೆಯನ್ನು ಎಲ್ಲರಿಗೂ ಮುಕ್ತವಾಗಿ ಪೂರಕವಾಗುವಂತೆ ಅವಕಾಶಗಳನ್ನು ಒದಗಿಸಿ, ಇದರ ಮುಖಾಂತರ ಮಾಹಿತಿ ತಂತ್ರಜ್ಞಾನ, ಸಂಪರ್ಕ,ಹಾಗೂ ಅಭಿವೃದ್ಧಿಯ ಪ್ರಕ್ರಿಯೆಗೆ ನೆರವಾಗುವಂತಹ ಶಕ್ತಿ–ಸಾಮರ್ಥ್ಯದ ಕಾರ್ಯ ಚಟುವತಿಕೆಗಳನ್ನು ಅನುಷ್ಠಾನಗೊಳಿಸಲು ಇರುವ ಮಾರ್ಗ ಸೂಚಿಯಾಗಿದೆ ಎಂದು ವ್ಯಾಖ್ಯಾನಿಸಬಹುದು.[೩]

ಹಾಗೆಯೇ ಇನ್ನೊಂದು ರೀತಿಯಲ್ಲಿ ಗ್ರಹಿಸಿದಾಗ ಮೂರನೇ ಜಗತ್ತಿನ ದೇಶಗಳು ಹಾಗೂ ಮುಖ್ಯಾವಾಗಿ ಭಾರತದಂತಹ ದೇಶವು ಸೇರಿದಂತೆ ಬಹುರಾಷ್ಟ್ರೀಯ ಕಂಪನಿಗಳಿಂದ ಇಲ್ಲಿಯ ಜನರು ಅಂದರೆ ತಳವರ್ಗದವರಾದ ಕೃಷಿಕರು, ಕಾರ್ಮಿಕರು, ಮಹಿಳೆ ಹಾಗೂ ಮಕ್ಕಳು ನಿರ್ಗತಿಕರು, ದೀನದಲಿತರು ಇತರೆ ಹಿಂದುಳಿದವರು ತೀರ ನಿಷ್ಟುರವಾದಂತಹ ಜೀವನವನ್ನೇ ನಡೆಸುತ್ತಿದ್ದಾರೆ. ವಿಶ್ವವನ್ನು ವಿಶ್ವಗ್ರಾಮವನ್ನಾಗಿಸುವ ಪಶ್ಚಿಮದ ಮಹಾನ್ ಹುನ್ನಾರಗಳಿಗೆ ಭಾರತದಂತಹ ಅಭಿವೃದ್ಧಿಶೀಲ ದೇಶಗಳು ಮಾರಾಟದ ವಸ್ತುವಾಗಿದೆ. ಸಾಮಾನ್ಯವಾಗಿ ಇದೊಂದು ಆರ್ಥಿಕ ವ್ಯವಸ್ಥೆಯ ನಿರಂಕುಸಧಿಕಾರತ್ವವೇ ಹೊರತು ನೈತಿಕ ಹಾಗೂ ಮಾನವಿಯತೆಯ ಅಂಶಗಳು ಇಲ್ಲಿ ಬರಲಿಕ್ಕಿಲ್ಲ ಎಂಬುದು ವಾಸ್ತವ. ಹೀಗೆ ಜಾಗತೀಕರಣವು ಶ್ರೀಮಂತರಿಗೆ ಅಭಿಮುಖವಾಗಿದರೆ ಬಡದೇಶಗಳೀಗೆ ಪ್ರತಿಕುಲ(ವಿಮುಖ)ವಾಗಿದೆ ಎಂದು ಇನ್ನೊಂದು ರೀತಿಯಲ್ಲಿ ಗ್ರಹಿಸಬಹುದು. ರಿಚರ್ಡ್ ಚಾರ್ನೆಟ್ ಅಫ್ ದಿ ಇನ್‌ಸ್ಟೂಟ್ ಅಫ ಪಾಲಿಸಿ ಸ್ವಿಡಿಸ್ ಸಂಸ್ಥೆಯ ಜಾಗತೀಕರಣವನ್ನು ೪ ವಿದದಲ್ಲಿ ಹೇಳಿದೆ ಜಾಗತಿಕ ವಾಣಿಜ್ಯ ಚಟುವಟಿಕೆಗಳಾದ–

೧) ಜಾಗತಿಕ ಸಾಂಸ್ಕೃತಿಕ ಮೇಳ

೨) ಜಾಗತಿಕ ಸಂತೆ

೩) ಜಾಗತಿಕ  ಹಣಕಾಸು ಅಂತರ್ ಜಾಲ ಹಾಗೂ

೪) ಜಾಗತಿಕ ಕಾರ್ಯಕ್ಷೇತ್ರ- ಹೀಗೆ ವಿಸ್ತೃತಗೊಳಿಸಿದ್ದಾರೆ.[೪]

ಇದರ ಪ್ರಭಾವದಿಂದ ಜಾತಿ, ಬಣ್ಣ, ವರ್ಗ, ಲಿಂಗ ಇತ್ಯಾದಿ ಕಳಂಕದ ಆಧಾರದಡಿಯಲ್ಲಿ ತಾರತಮ್ಯದಿಂದ ಬಾಳ್ವೆಯನ್ನು ಸಹಿಸಿಕೊಂಡು, ಜಾಗತೀಕರಣವನ್ನು ವಿರೋಧಿಸುತ್ತಿದ್ದಾರೆ. ಇವರ ಪರಮ ಗುರಿಯೆಂದರೆ ಎಲ್ಲರಿಗೂ ಸಹ ಸಮಾನವಾದ ಅವಕಾಶಗಳಾದ ಸಂಪತ್ತು ಹಾಗೂ ಸೇವೆಯ ಪರಿಕರಗಳು ಸಿಗಬೇಕು ಎನ್ನುವುದು ಇಂತಹ (ಹೋರಾಟಗಾರರ) ಸಂಘಟನಾಕಾರರ ವಾದ,ಹಾಗೆ ಇಂತಹ ಚರ್ಚೆಗಳು ವಿಶ್ವ ಸಾಮಾಜಿಕ ವೇದಿಕೆಗಳಲ್ಲಿ ಚರ್ಚಿತವಾಗುತ್ತಿವೆ. ಅದರೂ ಸಹ ಯಾವುದೇ ಒಮ್ಮತ ಅಭಿಪ್ರಾಯವಿಲ್ಲ ಇಂತಹ ಚರ್ಚೆಗಳಲ್ಲವೂ ಸಹ ೧೯೯೧ರ ನಂತರ ಬಂದಂತಹ ಹೊಸ ಆರ್ಥಿಕ ಧೋರಣೆಗಳಿಂದ ಪ್ರಬಾವಿತಗೊಂಡಿದೆ. ಅದ್ದರಿಂದ ಜಾಗತೀಕರಣದಿಂದ ಹೆಚ್ಚಿನದಾಗಿ ಸಾಂಸ್ಕೃತಿಕವಾಗಿ ಬದುಕುತ್ತಿರುವ ಸ್ವದೇಶಿ ಜನರಿಗೆ ತೊಡಕುಗಳಾಗುತ್ತಿದೆ. ಇನ್ನು ಮುಂದುವರಿದಂತೆ ಇದರ ಇತರೆ ರೂಪಗಳಾದ ಸಾಮ್ರಾಜ್ಯಶಾಹಿ, ಬಂಡವಾಳಶಾಹಿ ಹಾಗೂ ಬ್ರಾಹ್ಮಣತ್ವದಂತಹವುಗಳ ಏಕೈಕ ಗುರಿಯೆಂದರೆ ದುರ್ಬಲರನ್ನು ಶೋಷಣೆಗೆ ಎಡೆ ಮಾಡಿಕೊಡುವು ದಾಗಿದೆ. ಹಾಗೇ ಅಯಾ ದೇಶಗಳ ಜನಾಂಗಿಯ ಸಂಸ್ಕೃತಿಯನ್ನು ನಾಶಮಾಡುವಲ್ಲಿ ಹೊಸ ಹೊಸ ತಂತ್ರೋಪಾಯಗಳನ್ನು ಅನುಷ್ಠಾನಗೊಳೀಸುತ್ತಿವೆ. ಹಾಗೇ ಮಾನವ ಶ್ರಮ ತೀರ ಕಡಿಮೆ, ಯಂತ್ರದಿಂದಲೇ ಎಲ್ಲವು ನಡೆದು ಹೋಗುತ್ತದೆ ಮತ್ತು ಹಳ್ಳಿಗಳ ಕೃಷಿ ಹಾಗೂ ಗ್ರಾಮೀಣಭಿವೃದ್ಧಿಯಲ್ಲಿ ವೆಚ್ಚವನ್ನು ಕಡಿತ ಮಾಡಬೇಕೆಂದು ವಿಸ್ವ ವ್ಯಾಪಾರ ಸಂಸ್ಥೆ, ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಪರೋಕ್ಷ ಆದೇಶಗಳಿಂದಾಗಿ ಗ್ರಾಮಗಳ ಜೀವನೋಪಾಯ ಒದಗಿಸುವ ಇನ್ನಿತರ ಮಾರ್ಗಗಳು ದಿನೇದಿನೇ ಕಣ್ಮರೆಯಾಗುತ್ತಿವೆ. ನಮ್ಮ ಹಳ್ಳಿಗಳ ಆರ್ಥಿಕತೆ ಹಾಗೂ ಸಾಮಾಜಿಕ ಸಂರಚನೆಯನ್ನು ಸಂಪುರ್ಣವಾಗಿ ಬದಾಲಾಯಿಸುತ್ತಿದೆ.

ಇದರ ಅಡ್ಡ ಕೊಂಬೆಗಳಾದ ಖಾಸಗೀಕರಣ ಮತ್ತು ಉದಾರೀಕರಣದ ಗ್ರಹಿಕೆ ಬಹಳಷ್ಟು ಮುಖ್ಯ ಎನಿಸುತ್ತದೆ. ಇವುಗಳು ಮಳೆಗಾಲದಲ್ಲಿ ಹುಟ್ಟುವ ನಾಯಿಕೊಡೆಗಳಂತೆ ತಲೆ ಎತ್ತುತ್ತವೆ. ಮೊದಲು ಖಾಸಗೀಕರಣವನ್ನು ಗಮನಿಸಿದಾಗ ತಳಮಟ್ಟದ ಪ್ರಭುತ್ವದ ಎಲ್ಲ ಹಂತಗಳಲ್ಲು ಸಹ ತನ್ನ ಬಾಹುಗಳನ್ನು ಚಾಚಿದೆ ಹೀಗಿದ್ದಾಗ ಇಪ್ಪತ್ತನೆಯ ಶತಮಾನ ಆರಂಭದ ಅವಧಿಯಲ್ಲಿ ಪ್ರಭುತ್ವವು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸೋಲನ್ನು ಕಂಡಾಗ ೧೯೬೯ರಲ್ಲಿ ಡಾ. ಪೀಟರ್ ಡಕ್ಕರ್ ಅವರು ತಮ್ಮ ಪುಸ್ತಕ **“ಏಜ್ ಅಫ್ ಡಿಸ್‌ಕಂಟಿನ್ಯೂಯಿಟಿ”**ದಲ್ಲಿ **“ಪ್ರೈವೇಟೈಸೀಶನ್”** ಎಂಬ ಪದವನ್ನು ಬಳಕೆಮಾಡಿ ಪ್ರಭುತ್ವ(ಸಾರ್ವಜನಿಕ) ವಲಯದ ಕೆಲಸಗಳನ್ನು ಖಾಸಗಿಗೋಳಿಸುವ ವಿಚಾರವನ್ನು ಸಮಜದ ಗಮನಕ್ಕೆ ತಂದರು(ಸಮಾಜ ವಿಜ್ಞಾನ ಪತ್ರಿಕೆ ಅಭಿವೃದ್ಧಿ ಅಧ್ಯಯನ ೨೦೦೩) ಈ ವಿಚಾರವನ್ನು ಲಂಡನ್ನಲ್ಲಿ ಎಕಾನಾಮಿಸ್ಟ್ ಪತ್ರಿಕೆಯವರು ಅಸಂಬದ್ಧ ವಿಚಾರ ಎಂದು ತಿರಸ್ಕೃತಗೊಂಡಿದ್ದನ್ನು ಕಾಣಬಹುದು. ಇದಾದಾ ನಂತರ ಬ್ರಿಟನ್‌ನಲ್ಲಿ ಮಾರ್ಗರೇಟ್

ಥ್ಯಾಚರ್ ಸರ್ಕಾರವು ಮೊದಲಿಗೆ ಸರ್ಕಾರಿ ಕೆಲಸಗಳನ್ನು ಖಾಸಗಿಗೊಳಿಸಿದ್ದನ್ನು ನಾವು ಮರೆಯುವಂತಿಲ್ಲ. ಮುಂದುವರಿದಂತೆ ಫ್ರಾನ್ಸ್, ನ್ಯೂಜಿಲ್ಯಾಂಡ್, ಚೀನಾ ಇನ್ನು ಮುಂತಾದ ದೇಶಗಳು ಖಾಸಗೀಕರಣಕ್ಕೆ ಮಾರುಹೊದದ್ದು ವಾಸ್ತವ ಮೊದಲು ಈ ಖಾಸಗಿಯು ಸೈಕಲ್ ಸ್ಟಾಂಡ್‌ನಿಂದ ಹಿಡಿದು ಇಡಿ ಪ್ರಭುತ್ವದ ಮುಖ್ಯವಾಹಿನಿಯಲ್ಲಿ ಬರುವ ರೈಲ್ವೆ, ವಿಮಾನ, ಪೋಲಿಸ್, ಬ್ಯಾಂಕ್, ಹಾಗೂ ಕೆಲವು ಆಡಳಿತ ಸೇವೆಗಳನ್ನು ಇಂದು ಖಾಸಗಿಗೊಳಿಸಿರುವುದನ್ನು ಗ್ರಹಿಸಬಹುದು.[೨]

**೨.೧.೩. ಜಗತ್ತಿನ ಮತ್ತು ಭಾರತದಲ್ಲಿನ ಅಭಿವೃದ್ಧಿಯ ಸಿದ್ಧಾಂತದ ಚರ್ಚೆಗಳು**

ಭಾರತದಂತಹ ದೇಶದಲ್ಲಿ ಜನತೆಯ ನಡವಳಿಕೆ, ಮನೋವೃತ್ತಿ, ಮೌಲ್ಯಗಳು ಅಭಿವೃದ್ಧಿಯ ಮೇಲೆ ತೀವ್ರ ಪರಿಣಾಮ ಬೀರುತ್ತವೆ. ಈ ಅಂಶಗಳನ್ನು ಈ ಹಿಂದಿನ ಸಿದ್ಧಾಂತಗಳಲ್ಲಿ ಮರೆಯಲಾಗಿದೆ. "ಯಾವ ಜನತೆಗಾಗಿ ಅಭಿವೃದ್ಧಿ ಯೋಜನೆ ಮತ್ತು ಕೌಶಲ್ಯಗಳನ್ನು ನಿರೂಪಿಸುತ್ತವೆಯೋ ಅವು ಆ ಜನತೆಯ ಸಾಮಾಜಿಕ ಮನೋವೃತ್ತಿ ಮತ್ತು ಮೌಲ್ಯಗಳಿಗೆ ಬದ್ಧವಾಗಿರಬೇಕು. ಒಂದು ಸಮಾಜದಲ್ಲಿ ಅನುಕೂಲಕರವಾದ ಬದಲಾವಣೆಯನ್ನು ತರಬೇಕಾದರೆ ಜನತೆಯ ಮೌಲ್ಯ ಮತ್ತು ಮನೋವೃತ್ತಿಗಳನ್ನು ಸಮಂಜಸವಾಗಿ ಗುರುತಿಸಬೇಕಾಗುತ್ತದೆ. ಯೋಜನೆಗಳು ನಿಗದಿತ ಫಲ ನೀಡದೇ ಇರುವುದಕ್ಕೆ ಜನತೆಯ ಮನೋವೃತ್ತಿ ಮತ್ತು ಮೌಲ್ಯಗಳ ಬಗೆಗಿನ ತಮ್ಮ ಗ್ರಹಿಕೆಗಳೇ ಕಾರಣವಾಗಿವೆ(ಬೇಗಮ್, ೧೯೮೮: ೭೧).

ಅಭಿವೃದ್ಧಿಯ ಉದ್ದೇಶವೇ 'ಜನತೆಯ ಕಲ್ಯಾಣ' ಎಂದಾದರೆ ನಾವು ಜನತೆಯ ಮೌಲ್ಯಗಳನ್ನು ಕುರಿತು ನಿರ್ಲಕ್ಷ್ಯ ತಾಳುವಂತಿಲ್ಲ. ಮೌಲ್ಯ ಮತ್ತು ನಡವಳಿಕೆಗಳು ಜನತೆಯನ್ನು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡುತ್ತವೆ. ಜನತೆಯ ಭಾಗವಹಿಸುವಿಕೆಯಿಂದ ಮಾತ್ರ ಅಭಿವೃದ್ಧಿ ಸಾಧ್ಯ. "ವರಮಾನಗಳ ಬೆಳವಣಿಗೆಯ ಉನ್ನತ ಪ್ರಮಾಣದಿಂದ ಸಾಮಾಜಿಕ ಅವನತಿ ಉಂಟಾಗಿದೆ ಹಾಗೂ ಅದರಿಂದ ಜೀವನದ ಗುಣಮಟ್ಟದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಿದೆ. ಕೇವಲ ವರಮಾನವನ್ನು ಹೆಚ್ಚಿಸುವುದರ ಮೂಲಕ ಜನರ ಜೀವನಮಟ್ಟ ಸುಧಾರಿಸುವುದಕ್ಕೆ ಮಿತಿಗಳಿವೆ. ಜೀವನದ ಮೌಲ್ಯಗಳು ಜೀವನ ಗುಣಮಟ್ಟವನ್ನು ಮಿತಿಯಿಲ್ಲದೇ ಸುಧಾರಿಸಬಲ್ಲವು. ಜೀವನದ ಮೌಲ್ಯಗಳು ಸಂಪೂರ್ಣ ಬೆಳವಣಿಗೆಗೆ ಅವಕಾಶ ಕಲ್ಪಿಸುತ್ತವೆ. ಇದರಿಂದಾಗಿ ವರಮಾನಗಳು ಹೆಚ್ಚಾಗುತ್ತವೆ. ಜೀವನದ ಗುಣಮಟ್ಟ ಉತ್ತಮಗೊಳ್ಳುತ್ತದೆ"(ನಂಜುಂಡಪ್ಪ, ೧೯೯೯). ಆದ್ದರಿಂದ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮೌಲ್ಯ ಮತ್ತು ನಡವಳಿಕೆಗಳನ್ನು ಕುರಿತಂತೆ ಹೆಚ್ಚಿನ ಚಿಂತನೆಯ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಅವಶ್ಯಕವಾಗಿದೆ. ಸಾಂಪ್ರದಾಯಿಕ ಚಿಂತಕರಿಂದ ಮೊದಲುಗೊಂಡು ಕಳೆದೆರಡು ದಶಕಗಳವರೆಗಿನ ಅಭಿವೃದ್ಧಿ ಚಿಂತಕರೆಲ್ಲರೂ ಮಾನವನನ್ನು ಅಭಿವೃದ್ಧಿಯ ಸಾಧನ ಎಂದು ಪರಿಗಣಿಸಿದರೆ ಹೊರತು, ಜನತೆಯೇ ಅಭಿವೃದ್ಧಿಯ ಸಾಧನದೊಂದಿಗೆ ಕೊನೆಯು ಸಹ ಎಂಬುದನ್ನು ದೂರವಿರಿಸಿದ್ದರು. ಈ ಚಿಂತನೆಗಳಲ್ಲಿ ವರಮಾನ, ಕೈಗಾರಿಕಾ, ಉತ್ಪಾದನೆಗಳೇ ಮುಖ್ಯವಾಗಿ ಜನರ ಬದುಕು ಎರಡನೆಯ ಆಯ್ಕೆಯಾಗಿತ್ತು.

ಅಭಿವೃದ್ಧಿಯಲ್ಲಿ ಆರ್ಥಿಕೇತರ ಅಂಶಗಳ ಪ್ರಭಾವವನ್ನು ಗುರುತಿಸಿದವರು ಕೆಲವೇ ಚಿಂತಕರು. ಜೆ.ಎಸ್.ಮಿಲ್, ಬೋಕೆ ಮುಂತಾದವರು "ಮಾನಸಿಕ ಮತ್ತು ಸಾಮಾಜಿಕ ಅಗತ್ಯಗಳು ಅಭಿವೃದ್ಧಿಗೆ ಆರ್ಥಿಕ ಅಗತ್ಯಗಳಷ್ಟೇ ಪ್ರಮುಖವಾಗಿವೆ" ಜಿ.ಎಮ್. ಮೀಯರ್ ಮತ್ತು ಬಾಲ್ಡ್‌ವಿನ್(೧೯೫೭). "ಅಭಿವೃದ್ಧಿಯ ಅರ್ಥ ಜನತೆಯ ಅಭಿವೃದ್ಧಿ, ರಸ್ತೆ, ಕಟ್ಟಡ, ಉತ್ಪನ್ನದಲ್ಲಿ ಹೆಚ್ಚಳ ಇತರೆ ಕ್ರಿಯೆಗಳು ಅಭಿವೃದ್ಧಿಯಲ್ಲ. ಇವು ಅಭಿವೃದ್ಧಿಯ ಕೇವಲ ಉಪಕರಣಗಳು ಮಾತ್ರ, ಪ್ರತಿಯೊಂದು ಯೋಜನೆ ಅಥವಾ ಪ್ರಸ್ತಾವಗಳು ಅವು ಅಭಿವೃದ್ಧಿಯ ಉದ್ದೇಶವನ್ನು ಈಡೇರಿಸಿವೆಯೇ ಎಂಬುವುದ ರಿಂದ ನಿರ್ಧಾರಿತವಾಗುತ್ತವೆ, ಅಭಿವೃದ್ಧಿಯ ಉದ್ದೇಶ ಜನತೆಯ ಯೋಗಕ್ಷೇಮ." ಅಭಿವೃದ್ಧಿಯಲ್ಲಿ ಆರ್ಥಿಕ ಚಲಕಗಳ ಪಾತ್ರ ಮಹತ್ವವಾದುದು ನಿಜ, ಆದರೆ ಅಭಿವೃದ್ಧಿಗೆ ಅದಷ್ಟೇ ಸಾಕಾಗುವುದಿಲ್ಲ. ಆರ್ಥಿಕೇತರ ಅಂಶಗಳು ಸಹ ಅಭಿವೃದ್ಧಿಯ ಮೇಲೆ ನೌಕರಶಾಹಿ ಆಡಳಿತ ವ್ಯವಸ್ಥೆ, ಕುಲಸಂಬಂಧಿ ಅಂಶಗಳು, ಸಾಮಾಜಿಕ ವ್ಯವಸ್ಥೆ, ನ್ಯಾಯವ್ಯವಸ್ಥೆ, ಭೂಮಾಲೀಕತ್ವ, ಮೌಲ್ಯವ್ಯವಸ್ಥೆ, ಯಥಾಸ್ಥಿತಿವಾದ ಹಾಗೂ ಕ್ರಿಯಾಶೀಲ ಪ್ರಜ್ಞೆ ಮುಂತಾದ ನೂರಾರು ಸಾಮಾಜಿಕ ಸಾಂಸ್ಕೃತಿಕ ಅಂಶಗಳು ಅಭಿವೃದ್ಧಿಯನ್ನು ನಿರ್ಧರಿಸುವ ಅಂಶಗಳಾಗಿವೆ. ಆರ್ಥಿಕ ವ್ಯವಸ್ಥೆಯನ್ನು ಸಾಮಾಜಿಕ ವ್ಯವಸ್ಥೆಯಿಂದ ಬೇರ್ಪಡಿಸಿ ಅಭ್ಯಸಿಸುವುದು ಸಾಧ್ಯವೇ ಇಲ್ಲ. ಕೆಲವು ಚಿಂತಕರು ಮಾತ್ರ ಸಾಮಾಜಿಕ, ಸಾಂಸ್ಕೃತಿಕ, ಮಾನಸಿಕ ಅಂಶಗಳ ತಳಹದಿಯ ಮೇಲೆ ಅಭಿವೃದ್ಧಿ ಸಿದ್ಧಾಂತಗಳನ್ನು ರೂಪಿಸುವ ಸಾಹಸ ತೋರಿದರು. ಅಭಿವೃದ್ಧಿಯನ್ನು ನಿರ್ಧರಿಸುವ ಅಂಶಗಳಲ್ಲಿ ಆರ್ಥಿಕ ಸಾಮಾಜಿಕ ಅಂಶಗಳಷ್ಟೇ ಸಾಂಸ್ಕೃತಿಕ ಅಂಶಗಳು ಸಹ ಅಷ್ಟೇ ಮಹತ್ವ ಪಡೆದಿವೆ. ಅಭಿವೃದ್ಧಿಯನ್ನು ಉದ್ದೀಪನಗೊಳಿಸುವಲ್ಲಿ, ಪೋಷಿಸುವಲ್ಲಿ ಸಂಸ್ಕೃತಿ ಪ್ರಭಾವ ಬೀರುತ್ತದೆ. ಸಮಾಜೋ ಆರ್ಥಿಕಾಭಿವೃದ್ಧಿಯನ್ನು ನಿರ್ಧರಿಸುವಲ್ಲಿ ಸಾಂಸ್ಕೃತಿಕ ಪ್ರವೃತ್ತಿಯು ನಿರ್ಣಾಯಕ ಪಾತ್ರ ವಹಿಸುತ್ತದೆ(ಅಲೆಗ್ಸಾಂಡರ್, ೧೯೯೧). ಹೀಗೆ ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಆರ್ಥಿಕ ಅಂಶಗಳಷ್ಟೇ ಮುಖ್ಯವಾಗಿದ್ದರೂ ಅಭಿವೃದ್ಧಿಯ ಮೂಲ ಚಿಂತನಧಾರೆಯು ಇವುಗಳನ್ನು ನಿರ್ಲಕ್ಷಿಸಿ ತೀವ್ರತರವಾದ ಟೀಕೆಗಳಿಗೆ ಒಳಪಟ್ಟಿತು. "ನೋಬಲ್ ಪ್ರಶಸ್ತಿ ವಿಜೇತರಾದ ಲೇವಿಸ್ ಅವರು ಅಭಿವೃದ್ಧಿಯ ಮುಖ್ಯ ಉದ್ದೇಶ ಮಾನವನ ಆಯ್ಕೆಗಳನ್ನು ವರ್ಧಿಸುವುದೇ ಆಗಿದೆ ಎಂದು ತಿಳಿಸಿದರು. ಇದನ್ನೇ ೯೦ರ ದಶಕದಲ್ಲಿ ಮಾನವ ಅಭಿವೃದ್ಧಿ ವರದಿಗಳು ಪ್ರಚುರಪಡಿಸಿವೆ. ಆದರೆ ವ್ಯತ್ಯಾಸವೆಂದರೆ ಆರ್ಥಿಕ ಬೆಳವಣಿಗೆ ಈ ಉದ್ದೇಶವನ್ನು ಪೂರೈಸುತ್ತದೆ ಎಂದು ಅವರು ನಂಬಿದ್ದರು."(ಚಂದ್ರಶೇಖರ್, ೧೯೯೩)

ಮೂಲ ಅಗತ್ಯ ವಿಶ್ಲೇಷಣೆಯು ಈ ಹಿಂದಿನ ಅಭಿವೃದ್ಧಿ ಪರಿಕಲ್ಪನೆಗಳಿಗಿಂತ ಭಿನ್ನವಾಗಿ ಅಭಿವೃದ್ಧಿಯನ್ನು ಅರ್ಥೈಸಿತು. ಇದು ಜನತೆಗೆ ಬೇಕಾಗುವ ಮೂಲ ಅವಶ್ಯಕತೆಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿತು. ಇದುವರೆಗೂ ವಸ್ತುಗಳ ಉತ್ಪಾದನೆ, ವರಮಾನಗಳಷ್ಟಕ್ಕೆ ಮಾತ್ರ ಸೀಮಿತವಾಗಿದ್ದ ಅಭಿವೃದ್ಧಿ ವ್ಯಾಖ್ಯಾನವು ವಿಸ್ತೃತಗೊಂಡು ಜನತೆಗಾಗಿ ಅಭಿವೃದ್ಧಿ ಎಂಬ ತಥ್ಯವನ್ನು ಈ ವಿಶ್ಲೇಷಣೆ ನೀಡಿತು. ಆರ್ಥಿಕೇತರ ಅಂಶಗಳು ಸಹ ಈ ವಿಶ್ಲೇಷಣೆಯಲ್ಲಿ ಜೀವಂತಿಕೆಯನ್ನು ಪಡೆದವು. ಇಷ್ಟೆಲ್ಲಾ ಒಳಿತುಗಳನ್ನು ಒಳಗೊಂಡಿದ್ದರೂ, ಈ ವಿಶ್ಲೇಷಣೆ ಕೆಲವು ಮೂಲಭೂತ ಟೀಕೆಗಳಿಗೆ

ಒಳಗಾಯಿತು. ಇದು ಸಮಾಜದ ಎಲ್ಲಾ ವರ್ಗದ ಜನತೆಯನ್ನು ತನ್ನ ದೃಷ್ಟಿಯಲ್ಲಿ ಇಟ್ಟುಕೊಳ್ಳಲಿಲ್ಲ ಎನ್ನಬಹುದು. ಇದು ಜನತೆಗೆ ಮೂಲಭೂತ ಸೌಕರ್ಯ ನೀಡಬೇಕೆಂದು ತಿಳಿಸುತ್ತದೆ. ಹೊರತಾಗಿ, ಒದಗಿಸಿದ ಸೌಕರ್ಯಗಳನ್ನು ತನ್ನದಾಗಿಸಿಕೊಳ್ಳಲು ಬೇಕಾದ ಧಾರಣಶಕ್ತಿ ಕುರಿತಂತೆ ಇದು ಏನನ್ನೂ ಹೇಳಲಿಲ್ಲ. ಸೌಕರ್ಯಗಳನ್ನು ಒದಗಿಸುವುದಕ್ಕಿಂತ ಜನತೆ ಅದನ್ನು ಪಡೆದುಕೊಳ್ಳುವುದು ಮುಖ್ಯವಾಗಿರುತ್ತದೆ. ಈ ವಿಶ್ಲೇಷಣೆಯು ಈಗಿನ ಜನತೆಯನ್ನು ಮಾತ್ರ ದೃಷ್ಟಿಯಲಿಟ್ಟುಕೊಂಡು, ಭಾವಿ ಜನಾಂಗದ ಕುರಿತು ಇದು ಚಕಾರವೆತ್ತದೆ ಇರುವುದನ್ನು ಕಾಣಬಹುದು.

೧೯೯೦ರ ದಶಕದಲ್ಲಿ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಹೊಸ ವಿಚಾರ ಪ್ರಣಾಳಿಕೆಯೂ ಹೊರಬಂದಿತು. ಮಾನವ ಅಭಿವೃದ್ಧಿ ಎಂಬ ವಿಚಾರ ಪ್ರಣಾಳಿಕೆಯನ್ನು ರೂಪಿಸಿದವರು ಅಮರ್ತ್ಯ ಸೇನ್ ಮತ್ತು ಮೆಹಬೂಬ್-ಉಲ್-ಹಕ್ ಅವರು. ಯುಎನ್‌ಡಿಪಿಯು ೧೯೯೦ರಿಂದ ವಿಶ್ವದ ೧೭೪ ದೇಶಗಳಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ವರದಿಗಳನ್ನು ಪ್ರಕಟಿಸುತ್ತಾ ಬಂದಿದೆ. ವರಮಾನದ ಹೆಚ್ಚಳವೇ ಅಭಿವೃದ್ಧಿಯಲ್ಲ. ಮಾನವ ಅಭಿವೃದ್ಧಿ ಎಂದರೆ ಆರೋಗ್ಯವಂತ ಜೀವನ. ದೃಢಕಾಯರಾಗಿರುವುದು ಮತ್ತು ತಮ್ಮ ಆಯ್ಕೆಗಳನ್ನು ನಿರ್ಧರಿಸುವಲ್ಲಿ ಸ್ವತಂತ್ರರಾಗಿರುವುದು. ಈ ಬಗೆಯ ಅಭಿವೃದ್ಧಿಯ ಹೃದಯ ಭಾಗಗಳೆಂದರೆ, ಪ್ರಾಥಮಿಕ ಶಿಕ್ಷಣ ಮತ್ತು ಪ್ರಾಥಮಿಕ ಆರೋಗ್ಯಗಳಾಗಿವೆ. ಈ ಹಿಂದಿನ ಅಭಿವೃದ್ಧಿ ಸಿದ್ಧಾಂತಗಳು ಲಿಂಗತಟಸ್ಥ, ಮೌಲ್ಯನಿರಪೇಕ್ಷ, ವರ್ಗತಟಸ್ಥತೆಯಿಂದ ಕೂಡಿದ್ದರೆ. ಈ ವಿಚಾರ ಪ್ರಣಾಳಿಕೆಯು ಲಿಂಗಸಾಪೇಕ್ಷ, ವರ್ಗ ಸಾಪೇಕ್ಷಗಳಿಂದ ಕೂಡಿದೆ. ಇಲ್ಲಿಯವರೆಗೂ ಮರೆಮಾಚಿದ್ದ ಮಹಿಳೆಯರು, ಮಕ್ಕಳು, ಆರೋಗ್ಯವಂತ ವಿಷಯಗಳು ಈ ವಿಚಾರ ಪ್ರಣಾಳಿಕೆಯಲ್ಲಿ ಕೇಂದ್ರ ಸ್ಥಾನದಲ್ಲಿವೆ. ವರಮಾನಕ್ಕೆ ಮಾತ್ರ ಸೀಮಿತವಾಗಿದ್ದ ವಿಚಾರ ಪ್ರಣಾಳಿಕೆಗಳನ್ನು ಮಾನವಕೇಂದ್ರಿತ ವಿಚಾರ ಪ್ರಣಾಳಿಕೆಗೆ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಸ್ಥಿತ್ಯಂತರಗೊಳಿಸಿದೆ. ಆರ್ಥಿಕ ಅಂಶಗಳೊಂದಿಗೆ ಆರ್ಥಿಕೇತರ ಅಂಶಗಳನ್ನು ಮೇಳೈಸಿಕೊಂಡಿರುವುದು ಇದರ ವೈಶಿಷ್ಟ್ಯವಾಗಿದೆ. "ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಅಭಿವೃದ್ಧಿಯನ್ನು ಮಾನವ ಧಾರಣಶಕ್ತಿಗಳ ಮೂಲಕ ಅರ್ಥೈಸುತ್ತದೆ. ಇದು ಜನತೆ ಯಾವ ರೀತಿ ಜೀವಿಸುತ್ತಿದ್ದಾರೆ? ಅವರು ದೀರ್ಘಕಾಲ ಬಾಳುತ್ತಿದ್ದಾರೆಯೇ? ಜನತೆ ಅನಾರೋಗ್ಯವನ್ನು ತಡೆಯುವ ನಿರೋಧಕ ಶಕ್ತಿಯನ್ನು ಪಡೆದಿದ್ದಾರೆಯೇ? ಶಿಶು ಮತ್ತು ಮಕ್ಕಳು ಮರಣ ಹೊಂದುವುದನ್ನು ತಪ್ಪಿಸುತ್ತಿದ್ದಾರೆಯೇ? ಜನರು ಸಾಕ್ಷರರಾಗಿದ್ದಾರೆಯೇ? ತಮ್ಮ ಸಮುದಾಯದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆಯೇ? ಸ್ವತಂತ್ರವಾಗಿ ಸಂತೋಷ ವಾಗಿದ್ದಾರೆಯೇ? ಎಂಬುದನ್ನು ತಿಳಿಸುತ್ತದೆ"[೬](ಆನಂದ. ೧೯೯೪) ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನತೆ ಜನತೆಯ ಆಯ್ಕೆಗಳು, ಜನತೆಯ ಆಶೋತ್ತರಗಳು ಮುಖ್ಯವಾಗಿರಬೇಕೆಂಬುದನ್ನು ಇದು ಪ್ರತಿಪಾದಿಸುತ್ತದೆ.

ಮೊದಲ ಮಾನವ ಅಭಿವೃದ್ಧಿ ವರದಿಯು "ಮಾನವನ ಆಯ್ಕೆಗಳನ್ನು ವರ್ಧಿಸುವುದೇ ಅಭಿವೃದ್ಧಿ" ಎಂದು ವ್ಯಾಖ್ಯಾನಿಸಿದೆ. ಮೊದಲ ಮಾನವ ಅಭಿವೃದ್ಧಿ ವರದಿಯ ಮೊದಲ ಸಾಲುಗಳು

ಈ ರೀತಿ ಇವೆ. "ಜನತೆಯೇ ದೇಶದ ನಿಜವಾದ ಸಂಪತ್ತು. ಜನತೆಯು ದೃಢಕಾಯರಾಗಿ, ಆರೋಗ್ಯದಿಂದ ಸಂತೋಷವಾಗಿ ಜೀವನ ನಡೆಸಲು ಬೇಕಾಗಿರುವ ವಾತಾವರಣವನ್ನು ನಿರ್ಮಿಸುವುದೇ ಅಭಿವೃದ್ಧಿಯ ಮುಖ್ಯ ಉದ್ದೇಶ. ಇಂತ ಸರಳ ಮತ್ತು ಬಲಯುತವಾದ ಸತ್ಯವನ್ನು ಭೌತಿಕ ಮತ್ತು ಹಣಕಾಸಿನ ಸಂಪತ್ತಿನ ಚಿಂತನೆಗಳಲ್ಲಿ ಮರೆಯಲಾಗಿತ್ತು. ಜನತೆಯ ಆಯ್ಕೆಗಳನ್ನು ವಿಸ್ತರಿಸುವುದೇ ಮಾನವ ಅಭಿವೃದ್ಧಿ. ಇದು ಕೇವಲ ಬಡಜನತೆ, ಬಡರಾಷ್ಟ್ರಗಳಿಗೆ ಅಷ್ಟೇ ಅಲ್ಲದೇ ಎಲ್ಲೆಡೆಯೂ ಅನ್ವಯಿಸುತ್ತದೆ. "ಮಾನವ ಅಭಿವೃದ್ಧಿಯ ಆರ್ಥಿಕ ಬೆಳವಣಿಗೆಯನ್ನು ಉದ್ದೀಪನಗೊಳಿಸುವುದರ ಜೊತೆಗೆ, ಅದರ ಫಲಿತಗಳನ್ನು ಸಮಾನವಾಗಿ ಹಂಚುತ್ತದೆ. ಇದು ಪರಿಸರವನ್ನು ವಿನಾಶಗೊಳಿಸದೇ ಅದನ್ನು ವಿಕಸಿತಗೊಳಿಸುತ್ತದೆ. ಜನತೆಯನ್ನು ಅಂಚಿಗೆ ನೂಕದೇ, ಅವರನ್ನು ಸಶಕ್ತಗೊಳಿಸುತ್ತದೆ. ಮಾನವ ಅಭಿವೃದ್ಧಿ ಬಡಜನತೆಗೆ, ಅವರ ಆಯ್ಕೆಗಳಿಗೆ ಅವರ ಅವಕಾಶಗಳಿಗೆ ಆದ್ಯತೆಯನ್ನು ನೀಡುತ್ತದೆ. ಇದು ಜನಪರ, ನಿಸರ್ಗಪರ, ಉದ್ಯೋಗಪರ, ಮಹಿಳಾಪರವಾಗಿದೆ"[೮] **(ಹೆಚ್.ಡಿ.ಆರ್. ೧೯೯೦, ೧೯೯೪)**

"ಏಷ್ಯಾ ಮತ್ತು ಫೆಸಿಫಿಕ್ ರಾಷ್ಟ್ರಗಳ ಸಂಯುಕ್ತ ಆರ್ಥಿಕ ಮತ್ತು ಸಾಮಾಜಿಕ ಕಮೀಷನ್‌ನ ಏಪ್ರಿಲ್ ೧೯೮೮ರಲ್ಲಿ ನಡೆದ ಅಧಿವೇಶನದಲ್ಲಿ ಜಕಾರ್ತ ಕ್ರಿಯಾ ಯೋಜನೆಯ ಪ್ರಕಾರ, ಈ ದೇಶಗಳು ಮಾನವ ಸಂಪನ್ಮೂಲ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ನೀಡಲು ಪ್ರಾರಂಭಿಸಿದವು" **(ಮಾಥೂರ್, ೧೯೯೨)**. ಆಗಿನಿಂದಲೇ ಮಾನವಕೇಂದ್ರಿತ ವಿಷಯಗಳಿಗೆ ಹೆಚ್ಚಿನ ಒಲವು ನೀಡಲು ಪ್ರಾರಂಭವಾಯಿತು. ಮಾನವ ಸಂಪನ್ಮೂಲ ಅಭಿವೃದ್ಧಿಯು, ಆರ್ಥಿಕ ಉನ್ನತಿಯನ್ನು ಮನುಷ್ಯನನ್ನು ಉಪಕರಣವಾದಿ ದೃಷ್ಟಿಯಿಂದ ನೋಡುತ್ತದೆ. ಆದರೆ ಮಾನವಕೇಂದ್ರಿತ ಮಾನವ ಅಭಿವೃದ್ಧಿಯು ಮನುಷ್ಯನನ್ನು ಅಂತಸ್ಥವಾದಿ ದೃಷ್ಟಿಯಿಂದ ನೋಡುತ್ತದೆ. ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ **"ಆರ್ಥಿಕತೆ"** ಮುಖ್ಯವೆನಿಸಿದರೆ, ಮಾನವ ಅಭಿವೃದ್ಧಿಯಲ್ಲಿ ಸಮಾಜವು ಮುಖ್ಯವೆನಿಸಿದೆ. ಅಭಿವೃದ್ಧಿಯ ಯೋಜನೆಗಳೆಲ್ಲವೂ ಮಾನವ ಅಭಿವೃದ್ಧಿ ಪರಿಪ್ರೇಕ್ಷೆಯಿಂದ ಕೈಗೊಂಡಾಗ ಮಾತ್ರ ಒಂದು ಪ್ರದೇಶದ ಅಭಿವೃದ್ಧಿ ಸಾಧ್ಯ. ಗ್ರಿಫಿನ್(೧೯೯೧;೧೧) ಅವರು ಎಚ್ಚರಿಸಿದಂತೆ, "ರಾಷ್ಟ್ರಗಳು ಮಾನವ ಅಭಿವೃದ್ಧಿಯನ್ನು ನಿರ್ಲಕ್ಷಿಸಿದರೆ ಜನತೆಯ ಧಾರಣಶಕ್ತಿಯನ್ನು ವಿಸ್ತರಿಸುವಲ್ಲಿ ವಿಳಂಬ ಮಾಡಿದಂತೆ. ವಿಸ್ತೃತ ಅರ್ಥದಲ್ಲಿ ದೀರ್ಘಾವಧಿಯ ಆರ್ಥಿಕ ಬೆಳವಣಿಗೆಯನ್ನು ಸಹ ವಿಳಂಬ ಮಾಡಿದಂತಾಗುತ್ತದೆ, ಆರ್ಥಿಕ ಅಭಿವೃದ್ಧಿ, ಜನತೆಗೆ ಅವಶ್ಯವಿರುವ ಹಲವಾರು ಆಯ್ಕೆಗಳಲ್ಲಿ ಒಂದು. ಆದರೇ ಅದೇ ಅಂತಿಮವಲ್ಲ. ಆರ್ಥಿಕ ಅಭಿವೃದ್ಧಿಯೊಂದಿಗೆ, ಜನತೆ ಆರೋಗ್ಯಯುತವಾಗಿ ಜೀವನ ನಡೆಸುತ್ತಿದ್ದಾರೆಯೇ? ಜನತೆ ಪೌಷ್ಟಿಕರಾಗಿದ್ದಾರೆಯೇ? ಅವರು ಅಕ್ಷರಸ್ಥರಾಗಿದ್ದಾರೆಯೇ? ಎಂಬ ಪ್ರಶ್ನೆಗಳು ಸಹ ಮುಖ್ಯವೆನಿಸುತ್ತವೆ. ಈ ಎಲ್ಲ ಪ್ರಶ್ನೆಗಳಿಗೆ ಆರ್ಥಿಕ ಅಭಿವೃದ್ಧಿ ಉತ್ತರ ಕೊಡಲಾರದು. ಜನತೆಯ ಹಲವಾರು ಬಯಕೆ, ಆಸೆ, ಆಯ್ಕೆಗಳು ಕೇವಲ ವರಮಾನದಿಂದ ಪೂರೈಸಲು ಸಾಧ್ಯವಿಲ್ಲ. ವರಮಾನದ ಅಭಿವೃದ್ಧಿಯು ಜನತೆಗೆ ಅವಶ್ಯವಿರುವ ಒಂದು ಆಯ್ಕೆಯ ವಿಸ್ತರಣೆಯನ್ನು ತಿಳಿಸಿದರೆ, ಮಾನವ ಅಭಿವೃದ್ಧಿಯು ವರಮಾನದೊಂದಿಗೆ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ

ಅಂಶಗಳನ್ನು ಒಳಗೊಂಡ ಆಯ್ಕೆಗಳನ್ನು ವರ್ಧಿಸುತ್ತದೆ. ಈ ನಿಟ್ಟಿನಲ್ಲಿ ಮಾನವ ಅಭಿವೃದ್ಧಿಯು ಹಿಂದಿನ ಯಾವುದೇ ಸೂಚ್ಯಂಕಗಳಿಗಿಂತಲೂ ವಿಸ್ತೃತವೂ ಆಗಿದೆ.

ಮಾನವ ಅಭಿವೃದ್ಧಿಯ ವಿಚಾರ ಪ್ರಣಾಳಿಕೆಯು ಇತ್ತೀಚೆಗಷ್ಟೇ ಅಭಿವೃದ್ಧಿ ಹೊಂದಿರುವ ಮಾದರಿಯಾಗಿರುವುದರಿಂದ ಅಭಿವೃದ್ಧಿಯ ಎಲ್ಲಾ ಆಯಾಮಗಳನ್ನು ಇರಬಹುದು. ಆದರೆ ಹಿಂದಿನ ಎಲ್ಲಾ ಅಭಿವೃದ್ಧಿ ಮಾದರಿಗಿಂತ ಇದು ಸುಧಾರಿತ ಮಾದರಿ ಎಂದೇ ಹೇಳಬಹುದು. ರಾಜಕೀಯ ಅಂಶಗಳನ್ನು ಈ ಮಾದರಿ ಒಳಗೊಂಡಿಲ್ಲ ಎಂಬ ಟೀಕೆಯಲ್ಲಿ ಹುರುಳಿಲ್ಲ. ಏಕೆಂದರೆ ಈ ಮಾದರಿಯು ಲಿಂಗಸಶಕ್ತೀಕರಣ ಮಾಪನ(GEM) ಎಂಬ ಸೂಚ್ಯಂಕ ಅಭಿವೃದ್ಧಿಪಡಿಸಿದ್ದು, ಮುಖ್ಯವಾಗಿ ಮಹಿಳೆಯು ರಾಜಕೀಯ ಚಟುವಟಿಕೆಯಲ್ಲಿ ಎಷ್ಟು ಭಾಗವಹಿಸುತ್ತಿದ್ದಾಳೆ ಎಂಬುದರ ಮೂಲಕ ಅಭಿವೃದ್ಧಿಯಲ್ಲಿ ಆಕೆಯ ಪಾಲ್ಗೊಳ್ಳುವಿಕೆಯನ್ನು ಇದು ತಿಳಿಸುತ್ತದೆ. ಅಲ್ಲದೇ ಹಕ್ ಅವರು (೧೯೯೬) ತಮ್ಮ ಗ್ರಂಥದಲ್ಲಿ ರಾಜಕೀಯ ಸ್ವಾತಂತ್ರ್ಯ ಸೂಚ್ಯಂಕವನ್ನು ಅಭಿವೃದ್ಧಿಪಡಿಸಿದ್ದಾರೆ. ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು, ಕೇವಲ ಸಾಮಾಜಿಕ ಅಭಿವೃದ್ಧಿಯನ್ನು ಪರಿಗಣಿಸಿದ್ದು, ಇದು ಬೆಳವಣಿಗೆಗೆ ವಿರೋಧವಾದುದು ಎಂಬ ಅಭಿಪ್ರಾಯವು ಸತ್ಯಕ್ಕೆ ದೂರವಾದುದೆಂದು ಹೇಳಬಹುದು. ಮಾನವ ಅಭಿವೃದ್ಧಿ ಎಂದರೆ 'ಮಾನವನು ಜೀವಿಸಲು ಇರುವ ಆಯ್ಕೆ ಅವಕಾಶಗಳನ್ನು ಹೆಚ್ಚಿಸುವುದೇ ಆಗಿದೆ. ಅದರಲ್ಲಿ ವರಮಾನ ಒಂದು ಆಯ್ಕೆ ಎಂಬುದನ್ನು ತಿಳಿಸುವುದರ ಮೂಲಕ ಈ ಅಭಿವೃದ್ಧಿ ಮಾದರಿಯು ಇಡೀ ಸಮಾಜದ ಒಳಿತನ್ನು ಬಯಸುವ ವಿಚಾರವನ್ನು ಇಟ್ಟುಕೊಂಡಿದೆ ಎಂಬುದು ತಿಳಿಯುತ್ತದೆ. ಮಾನವ ಅಭಿವೃದ್ಧಿಯು ಆರ್ಥಿಕ ಬೆಳವಣಿಗೆಯನ್ನು ತಿರಸ್ಕರಿಸಿಲ್ಲ. ಬದಲಾಗಿ, ಸ್ವಯಂ ಘೋಷಿತ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆ ಅತ್ಯಾವಶ್ಯಕ ಎಂಬುದನ್ನು ತಿಳಿಸಿದೆ. ಈ ವಿಷಯವನ್ನು ಕುರಿತಂತೆ ಎರಡನೆಯ ಮಾನವ ಅಭಿವೃದ್ಧಿ ವರದಿಯು ಈ ರೀತಿ ಹೇಳುತ್ತದೆ, "ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯ ಅವಶ್ಯಕತೆ ಇದೆ. ಇದಿಲ್ಲದೇ ಜನಹಿತದ ಸ್ವಯಂಘೋಷಿತ ಸುಧಾರಣೆ ಅಸಾಧ್ಯ, ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯ ಅವಶ್ಯಕತೆ ಇದೆ. ಆದರೆ ಇದಷ್ಟೇ ಸಾಕಾಗುವುದಿಲ್ಲ. ಹೆಚ್ಚಿನ ಬೆಳವಣಿಗೆಯ ಪ್ರಮಾಣಗಳು ತನ್ನಿಂದ ತಾನಾಗಿಯೇ ಹೆಚ್ಚಿನ ಮಾನವ ಅಭಿವೃದ್ಧಿಗೆ ಪರಿವರ್ತಿತವಾಗಲಾರವು. ಆರ್ಥಿಕ ಬೆಳವಣಿಗೆ ಮತ್ತು ಮಾನವ ಅಭಿವೃದ್ಧಿಗಳ ನಡುವಿನ ಕೊಂಡಿಗೆ ನೀತಿ-ನಿರೂಪಕಗಳ ಅವಶ್ಯಕತೆ ಇದೆ. ಮಾನವ ಅಭಿವೃದ್ಧಿಗೆ ಆರ್ಥಿಕ ಬೆಳವಣಿಗೆಯು, ಆರ್ಥಿಕ ಬೆಳವಣಿಗೆಗೆ ಮಾನವ ಅಭಿವೃದ್ಧಿಯು ಅವಶ್ಯಕವು, ಅಗತ್ಯವೂ ಆಗಿದೆ"(**ಹೆಚ್.ಡಿ.ಆರ್. ೧೯೯೧**)

ಆರ್ಥಿಕ ಬೆಳವಣಿಗೆಯನ್ನು ನಾಲ್ಕು ಮಾರ್ಗಗಳ ಮೂಲಕ ಮಾನವ ಅಭಿವೃದ್ಧಿಗೆ ಹೊಂದಾಣಿಕೆ ಮಾಡಿಕೊಳ್ಳಬಹುದಾಗಿದೆ. ಮೊದಲನೆಯದಾಗಿ ಶಿಕ್ಷಣ, ಆರೋಗ್ಯ, ಜನತೆಯ ಕೌಶಲ್ಯಗಳನ್ನು ಹೆಚ್ಚಿಸುವ ರಂಗಗಳಲ್ಲಿ ಬಂಡವಾಳವನ್ನು ಹೂಡಿ, ಜನತೆ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಲ್ಗೊಂಡು,

ಅದರ ಫಲಗಳನ್ನು ಪಡೆಯುವಂತೆ ಮಾಡುವುದು. ಈ ಕ್ರಮವನ್ನು ಅಳವಡಿಸಿಕೊಂಡ ರಾಷ್ಟ್ರಗಳೆಂದರೆ, ಚೀನಾ, ಹಾಂಕಾಂಗ್, ಜಪಾನ್, ಮಲೇಶಿಯಾ ಇತ್ಯಾದಿ. ಭಾರತದಲ್ಲಿ ಕೇರಳ ರಾಜ್ಯ ಇದಕ್ಕೆ ತಕ್ಕ ಉದಾಹರಣೆಯಾಗಿದೆ. ಎರಡನೆಯ ಕ್ರಮವೆಂದರೆ ದೇಶದಲ್ಲಿ ಲಭ್ಯವಿರುವ ವರಮಾನ, ಆಸ್ತಿ, ಸಂಪತ್ತನ್ನು ಸಮಾನವಾಗಿ ಹಂಚುವುದರ ಮೂಲಕ, ವರಮಾನ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಹೊಂದಾಣಿಕೆ ಮಾಡಬಹುದಾಗಿದೆ. ಬ್ರೆಜಿಲ್, ನೈಜೀರಿಯಾ, ಪಾಕಿಸ್ತಾನದಂತಹ ರಾಷ್ಟ್ರಗಳಲ್ಲಿ ವರಮಾನ ಹೆಚ್ಚಿದ್ದರೂ ಅಲ್ಲಿ ಅದರ ವಿತರಣೆಯಲ್ಲಿ ಸಮಾನತೆಯಿಲ್ಲದ ಕಾರಣ ವರಮಾನದಲ್ಲಿಯ ಹೆಚ್ಚಳವೂ ಮಾನವ ಅಭಿವೃದ್ಧಿಯಾಗಿ ಪರಿವರ್ತಿತಗೊಂಡಿಲ್ಲ, ಭಾರತದಲ್ಲಿ ಇದಕ್ಕೆ ತಕ್ಕ ಉದಾಹರಣೆ ಪಂಜಾಬ್ ರಾಜ್ಯವಾದರೆ, ಒಳ್ಳೆಯ ಆರ್ಥಿಕ ಬೆಳವಣಿಗೆ ಮತ್ತು ಒಳ್ಳೆಯ ವರಮಾನ ವಿತರಣೆಯ ಹೊರತಾಗಿಯೂ ಸರಕಾರವು ರಚನಾತ್ಮಕವಾಗಿ, ಸುವ್ಯವಸ್ಥಿತವಾಗಿ ಸಾಮಾಜಿಕ ವೆಚ್ಚಗಳನ್ನು ಮಾಡುವುದರ ಮೂಲಕ ಮಾನವ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಇದು ಮೂರನೆಯ ಮಾರ್ಗ. ಇದಕ್ಕೆ ಉದಾಹರಣೆ ಎಂದರೆ ಕ್ಯೂಬಾ, ಜುಮೈಕಾ, ಶ್ರೀಲಂಕಾ, ಇತ್ಯಾದಿ ದೇಶಗಳು, ಆದರೆ ಮಾನವ ಅಭಿವೃದ್ಧಿ ಸ್ವಯಂ ಘೋಷಿತವಾಗಬೇಕಾದರೆ ಆರ್ಥಿಕ ಬೆಳವಣಿಗೆ ಅತ್ಯವಶ್ಯಕವಾಗಿ ಬೇಕಾಗುತ್ತದೆ. ಮುಖ್ಯವಾಗಿ ಮಹಿಳೆಯರನ್ನು ಒಳಗೊಂಡು ಜನತೆಯನ್ನು ಸಶಕ್ತೀಕರಣಗೊಳಿಸುವುದರ ಮೂಲಕ ವರಮಾನ ಮತ್ತು ಮಾನವ ಅಭಿವೃದ್ಧಿಗಳ ನಡುವೆ ಹೊಂದಾಣಿಕೆ ಸಾಧಿಸಬಹುದಾಗಿದೆ. ಇದು ನಾಲ್ಕನೆಯ ಮಾರ್ಗವಾಗಿದೆ.[೧೦] **(ಹಕ್ ಉಲ್–ಮೆಹಬೂಬ್, ೧೯೯೬)** ಸಾಂಪ್ರದಾಯಿಕ ಅಭಿವೃದ್ಧಿ ಸಂಕಥನದಲ್ಲಿ ಪುರುಷಶಾಹಿತ್ವ ಹೆಚ್ಚಾಗಿ ಕಾಣುತ್ತದೆ. ಅಭಿವೃದ್ಧಿಯು ಲಿಂಗ ನಿರಪೇಕ್ಷವಾಗಿದ್ದು, ಅದರ ಫಲಗಳೆಲ್ಲವೂ ಲಿಂಗಭೇದವೆನಿಸದೇ ಎಲ್ಲರಿಗೂ ದೊರೆಯುತ್ತದೆ ಎಂದು ಅದು ಭಾವಿಸುತ್ತದೆ. ಆದರೆ ಶ್ರೇಣೀಕೃತ ಸಮಾಜದಲ್ಲಿ ಅಭಿವೃದ್ಧಿ ಫಲಗಳು ಹೆಚ್ಚಾಗಿ ಪುರುಷರ ಪಾಲಾಗುತ್ತಿವೆ ಎಂಬುದನ್ನು ಹಾಗೂ ಕುಟುಂಬದಲ್ಲಿಯ ಅವಕಾಶಗಳಲ್ಲಿ ಸಹ ಲಿಂಗಭೇದ ಇರುವುದನ್ನು ಸೆನ್(೧೯೮೪) ಅವರ ಅಧ್ಯಯನಗಳು ಧೃಡಪಡಿಸಿವೆ. ಅಭಿವೃದ್ಧಿಯ ಧ್ಯೇಯವು ಮಹಿಳೆಯರಿಗೆ ನ್ಯಾಯವನ್ನು ದೊರಕಿಸಿಕೊಡಬೇಕೆ ಹೊರತು ದಾನವಾದ ಅನುಕಂಪವನ್ನಲ್ಲ ಮತ್ತು ಮಹಿಳೆಯರು ಬದಲಾವಣೆಗಳನ್ನು ಪಡೆಯಬೇಕಾದ ಫಲಾನುಭವಿಗಳೆಂದು ಭಾವಿಸಬೇಕೆಂದು ೧೯೯೫ರ ಮಾನವ ಅಭಿವೃದ್ಧಿಯು ಒತ್ತಿ ಹೇಳಿದೆ. ಕೈರೋದಲ್ಲಿ ಸೆಪ್ಟೆಂಬರ್ ೧೯೯೪ರಲ್ಲಿ ನಡೆದ ಜನಸಂಖ್ಯೆ ಮತ್ತು ಅಭಿವೃದ್ಧಿ ಕುರಿತಾದ ಅಂತರರಾಷ್ಟ್ರೀಯ ಸಮ್ಮೇಳನವೂ ಲಿಂಗಸಮಾನತೆ, ಮಹಿಳೆಯನ್ನು ಸಶಕ್ತಿಗೊಳಿಸುವುದು, ಮಹಿಳೆಯ ಮೇಲಿನ ದೌರ್ಜನ್ಯವನ್ನು ತಡೆಯುವುದು, ತಮ್ಮ ಫಲವಂತಿಕೆಯನ್ನು ತಾವೇ ಪಡೆಯುವ ಸಾಮರ್ಥ್ಯವನ್ನು ನೀಡುವುದು ಈ ಮೊದಲಾದ ಅಂಶಗಳನ್ನು ಸಮ್ಮೇಳನ ಜಾರಿಗೊಳಿಸಿತು. ಮಾನವ ಅಭಿವೃದ್ಧಿಯಲ್ಲಿ ಮಹಿಳೆಯರಿಗೆ, ಪುರುಷರಿ ಗಿಂತಲೂ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಜನತೆಯ ಧಾರಣಶಕ್ತಿ ವೃದ್ಧಿಯಾಗಬೇಕಾದರೆ ಮೊದಲು ಮಹಿಳೆಯರ ಧಾರಣಶಕ್ತಿ ವೃದ್ಧಿಯಾಗಬೇಕೆಂಬುದನ್ನು ಮಾನವ ಅಭಿವೃದ್ಧಿಯು ಒತ್ತಿ ಹೇಳಿದೆ.

"ಮಾನವ ಅಭಿವೃದ್ಧಿ ಸಂಕಥನದ ರೂವಾರಿಗಳಾದ ಅಮರ್ತ್ಯ ಸೆನ್ ಮತ್ತು ಮೆಹಬೂಬ್-ಉಲ್-ಹಕ್ ಅವರು ಅಭಿವೃದ್ಧಿಯನ್ನು ವರಮಾನದ ವರ್ಧನೆಯ ನೆಲೆಯಲ್ಲಿ ಪರಿಭಾವಿಸುವುದಕ್ಕೆ ಪ್ರತಿಯಾಗಿ ಬದುಕುವ ಅವಕಾಶಗಳ ಹಾಗೂ ಆ ಅವಕಾಶಗಳಲ್ಲಿ ಆಯ್ಕೆಯ ವ್ಯಾಪ್ತಿ ವರ್ಧನೆಯ ನೆಲೆಯಲ್ಲಿ ನಿರ್ವಚಿಸುತ್ತಾರೆ. 'ಜನರು ಏನಾಗಿದ್ದಾರೆ' ಮತ್ತು 'ಏನು ಮಾಡುತ್ತಿದ್ದಾರೆ' ಎಂಬ ಸಂಗತಿಗಳು ಅಭಿವೃದ್ಧಿಯ ದೃಷ್ಟಿಯಿಂದ ಮಹತ್ವವಾಗಿದ್ದರೂ ಸಹ ಅವೇ ಅಭಿವೃದ್ಧಿಯಲ್ಲ ಎಂದು ಮಾನವ ಅಭಿವೃದ್ಧಿ ಸಂಕಥನವು ಪ್ರತಿಪಾದಿಸುತ್ತದೆ. ವರಮಾನದ ಪ್ರಮಾಣ ಹಾಗೂ ಅದರ ಬೆಳವಣಿಗೆ ಗತಿ ಇವು ಅಭಿವೃದ್ಧಿಯಲ್ಲಿ ಉಪಕರಣವಾದಿ ಮಹತ್ವ ಹೊಂದಿದ್ದಾವೆ ವಿನಾ ಅಭಿವೃದ್ಧಿಯ ಅಂತಸ್ಥ ಗುಣವಾಗುವುದಿಲ್ಲ. ಸಾಂಪ್ರದಾಯಿಕ ಅಭಿವೃದ್ಧಿ ಸಂಕಥನವು ಅಭಿವೃದ್ಧಿಯ ಲಿಂಗಸ್ವರೂಪದ ಬಗ್ಗೆ ಕುರುಡಾಗಿದ್ದರೇ, ಮಾನವ ಅಭಿವೃದ್ಧಿ ಸಂಕಥನವು ಲಿಂಗಸಂಬಂಧಗಳ ಬಗ್ಗೆ ಸಂವೇದನಾಶೀಲವಾಗಿದೆ.(**ಚಂದ್ರಶೇಖರ್ ಟಿ.ಆರ್.** ೧೯೯೩) ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಅಭಿವೃದ್ಧಿಶೀಲ ದೇಶಗಳಿಗೆ ದಾರಿದೀಪವಾಗಬಹುದಾಗಿದೆ. ಈವರೆಗೂ ಅಭಿವೃದ್ಧಿಯ ವಿಚಾರಧಾರೆಯಲ್ಲಿ ಮರೆಮಾಚಿದ್ದ ಮಾನವನ ಸುರಕ್ಷತೆ/ಭದ್ರತೆಯಂಥ ವಿಷಯಗಳಿಗೆ ಹೊಸ ತಿರುವನ್ನು ನೀಡಿರುವ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಇತರ ಅಭಿವೃದ್ಧಿ ಮಾದರಿಗಳಿಗಿಂತ ವಿಶಿಷ್ಟವಾಗಿ ತೋರುವುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಬಡವರ ಪರ, ಮಹಿಳೆಯರ ಪರ, ನಿಸರ್ಗಪರವಾಗಿರುವ ಈ ಅಭಿವೃದ್ಧಿ ಮೀಮಾಂಸೆಯ ೨೦ನೇ ಶತಮಾನದ ಬೆಳವಣಿಗೆಗಳಲ್ಲಿ ಒಂದೆಂದು ಹೇಳಬಹುದು.

೧೯೯೦ರಿಂದ ಯು.ಎನ್.ಡಿ.ಪಿ.ಯು ಮಾನವ ಅಭಿವೃದ್ಧಿ ವರದಿಗಳನ್ನು ಪ್ರಕಟಪಡಿಸುತ್ತಾ ಆರ್ಥಿಕ ಬೆಳವಣಿಗೆಯ ತನ್ನಿಂದ ತಾನೇ ಮಾನವ ಅಭಿವೃದ್ಧಿಯಾಗಿ ಪರಿವರ್ತನೆಯಾಗುವುದಿಲ್ಲ, ಅದಕ್ಕಾಗಿ ಸರ್ಕಾರಗಳ ಪ್ರಜ್ಞಾಪೂರ್ವಕ ಮಧ್ಯಸ್ಥಿಕೆ ಬೇಕು ಎನ್ನುವ ಸಂದೇಶವನ್ನು ಸಾರುತ್ತಲೇ ಬಂದಿದೆ. ೧೯೯೫ರ ಮಾನವ ಅಭಿವೃದ್ಧಿ ವರದಿಯು ಅಭಿವೃದ್ಧಿಯ ಲಿಂಗಸಂವೇದಿಯಾಗಿರದಿದ್ದರೆ, ಅದು ಅಪಾಯಕಾರಿಯಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಿದೆ. ಮಾನವ ಅಭಿವೃದ್ಧಿ ವರದಿಗಳಲ್ಲಿ ಇದುವರೆವಿಗೂ ಮೂರು ಬಗೆಯ ಸೂಚ್ಯಂಕಗಳನ್ನು ರೂಪಿಸಿ ಅಭಿವೃದ್ಧಿಯನ್ನು ಮಾಪನ ಮಾಡುತ್ತಾ ಬರಲಾಗಿದೆ. ಅವು ಯಾವುವೆಂದರೆ,

೧. ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್.ಡಿ.ಐ.)

೨. ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕ (ಜಿ.ಡಿ.ಐ.)

೩. ರಾಜಕೀಯ ಸಶಕ್ತೀಕರಣದ ಮಾಪನ.

೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿ ಜಗತ್ತಿನ ೧೭೫ ರಾಷ್ಟ್ರಗಳಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ನೀಡಲಾಗಿದೆ, ಅದರಲ್ಲಿ ಕೆನಡಾ, ಫ್ರಾನ್ಸ್, ನಾರ್ವೆ,

ಯು.ಎಸ್.ಎ. ಮತ್ತು ಐರ್ಲ್ಯಾಂಡ್ ರಾಷ್ಟ್ರಗಳು ಕ್ರಮವಾಗಿ ಮೊದಲ ಐದು ಸ್ಥಾನಗಳನ್ನು ಹೊಂದಿದ್ದರೆ. ಮಾಲಿ, ಬುರ್ಕಿನಾ, ನೈಜರ್, ರೆವೆಂಡಾ, ಸಿಯೆರಾ ರಾಷ್ಟ್ರಗಳು ಕೊನೆಯ ಐದು ಸ್ಥಾನಗಳನ್ನು ಹೊಂದಿರುವ ರಾಷ್ಟ್ರಗಳಾಗಿವೆ. ಈ ವರದಿಯಲ್ಲಿ ಜಾಗತಿಕ ರಾಷ್ಟ್ರಗಳನ್ನು ಅಧಿಕ, ಮಧ್ಯಮ, ಕಡಿಮೆ ಮಾನವ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿ ವಿಭಾಗಿಸಲಾಗಿದೆ. ೧೭೫ ರಾಷ್ಟ್ರಗಳಲ್ಲಿ ೬೪ ರಾಷ್ಟ್ರಗಳು ಅಧಿಕ ಮಾನವ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿದ್ದರೆ, ೬೬ ದೇಶಗಳು ಮಧ್ಯಮ ಮಾನವ ಅಭಿವೃದ್ಧಿ ಸಾಧಿಸಿರುವ ರಾಷ್ಟ್ರಗಳ ಪಂಕ್ತಿಯಲ್ಲಿ ಬರುತ್ತವೆ. ಭಾರತ ೧೩೮ನೇ ಸ್ಥಾನ ಪಡೆದು, ಕಡಿಮೆ ಮಾನವ ಅಭಿವೃದ್ಧಿ ಹೊಂದಿರುವ ೪೫ ರಾಷ್ಟ್ರಗಳ ಪೈಕಿ ಒಂದಾಗಿದೆ(ಹೆಚ್.ಡಿ.ಆರ್. ೧೯೯೭, ೪೭). ಮಾನವ ಅಭಿವೃದ್ಧಿ ವರದಿಗಳಲ್ಲಿ ಜಗತ್ತಿನ ೧೪೬ ರಾಷ್ಟ್ರಗಳಿಗೆ ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕವನ್ನು ನೀಡಲಾಗಿದೆ. ೧೯೯೭ರ ಮಾನವ ಅಭಿವೃದ್ಧಿ ವರದಿಯಲ್ಲಿರುವ ೫೫.೫೫ ಮತ್ತು ೩೬ ರಾಷ್ಟ್ರಗಳು ಕ್ರಮವಾಗಿ ಉತ್ತಮ, ಮಧ್ಯಮ ಮತ್ತು ಕಡಿಮೆ ಲಿಂಗಸಂಬಂಧಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಾಗಿವೆ. ಇದರಲ್ಲಿ ಭಾರತದ ಸ್ಥಾನ ೧೧೮ನೆಯದ್ದಾಗಿದೆ(ಹೆಚ್.ಡಿ.ಆರ್. ೧೯೯೭, ೧೫೧). ಇದೇ ವರದಿಯಲ್ಲಿ ವಿಶ್ವದ ೯೪ ರಾಷ್ಟ್ರಗಳ ಲಿಂಗ ಸಶಕ್ತೀಕರಣ ಮಾಪನವನ್ನು ನೀಡಲಾಗಿದೆ. ಈ ೯೪ ರಾಷ್ಟ್ರಗಳಲ್ಲಿ ಸಿಯಾರ್ ಕೊನೆಯ ಸ್ಥಾನದಲ್ಲಿದೆ. ನಾರ್ವೆ ಮೊದಲ ಸ್ಥಾನದಲ್ಲಿದೆ. ೪೫ ದೇಶಗಳು ಉನ್ನತ ಮಟ್ಟದ ಲಿಂಗ ಸಶಕ್ತೀಕರಣ ಹೊಂದಿರುವ ೩೧ ದೇಶಗಳು ಕಡಿಮೆ ಲಿಂಗ ಸಶಕ್ತೀಕರಣ ಹೊಂದಿರದ ರಾಷ್ಟ್ರಗಳಾಗಿವೆ. ಇದರಲ್ಲಿ ಭಾರತವು ೮೬ನೇ ಸ್ಥಾನ ಪಡೆದಿದೆ.[೧೧]**(ಹೆಚ್.ಡಿ.ಆರ್, ೧೯೯೭)** ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಪ್ರವರ್ತಕ ಮೆಹಬೂಬ್-ಉಲ್-ಹಕ್ ಅವರ ನೇತೃತ್ವದಲ್ಲಿ ದಕ್ಷಿಣ ಏಷ್ಯಾ ರಾಷ್ಟ್ರಗಳಿಗೆ ಮಾನವ ಅಭಿವೃದ್ಧಿ ವರದಿಗಳನ್ನು ರಚಿಸಲಾಗಿದೆ. "ದಕ್ಷಿಣ ಏಷ್ಯಾದಲ್ಲಿ ಮಾನವ ಅಭಿವೃದ್ಧಿ-೧೯೯೭"ರಲ್ಲಿ ದಕ್ಷಿಣ ಏಷ್ಯಾದ ಮಾನವ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಲಾಗಿದೆ.

ಶ್ರೀಲಂಕಾ ಮಾನವ ಅಭಿವೃದ್ಧಿಯಲ್ಲಿ ಪವಾಡಸದೃಶ ಸಾಧನೆಯನ್ನು ಮಾಡಿದೆ. ಈ ಸಾಧನೆಯ ಹಿಂದಿರುವ ಸಂಗತಿಗಳನ್ನು 'ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿ ಮಾನವ ಅಭಿವೃದ್ಧಿ ವರದಿ ೧೯೯೭ರಲ್ಲಿ ಗುರುತಿಸಲಾಗಿದೆ. ಮಾನವ ಅಭಿವೃದ್ಧಿಯ ದೃಷ್ಟಿಯಲ್ಲಿ 'ಶ್ರೀಲಂಕಾ" ದಕ್ಷಿಣಾ ಏಷ್ಯಾ ರಾಷ್ಟ್ರಗಳಲ್ಲಿಯೇ ಅಗ್ರಸ್ಥಾನದಲ್ಲಿದೆ. ಶ್ರೀಲಂಕಾ ಮಾನವ ಅಭಿವೃದ್ಧಿಯಲ್ಲಿ ಇತರ ರಾಷ್ಟ್ರಗಳಿಗೆ ಮಾದರಿಯಾಗಿದೆ. "ಇಲ್ಲಿಯ ಸಾಕ್ಷರತಾ, ಶಾಲಾ ದಾಖಲಾತಿಗಳಲ್ಲಿ ಅಧಿಕ ಲಿಂಗತಾರತಮ್ಯಗಳಿಲ್ಲ. ಶೇ.೯೩ರಷ್ಟು ಜನತೆಗೆ ಆರೋಗ್ಯ ಸೌಲಭ್ಯಗಳು ದೊರೆಯುತ್ತಿವೆ" ಇವೆಲ್ಲವೂ ಅಲ್ಲಿಯ ಸರಕಾರಗಳ ಪ್ರಜ್ಞಾಪೂರ್ವಕ ನೀತಿಗಳಿಂದ ಸಾಧ್ಯವಾಗಿದೆ. ಇಲ್ಲಿಯ ಪ್ರಭುತ್ವಗಳು ಕಳೆದ ಐದು ದಶಕಗಳಿಂದಲೂ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅಧಿಕ ಬಂಡವಾಳವನ್ನು ವಿನಿಯೋಗ ಮಾಡುತ್ತಿವೆ. ತಮಿಳರು, ಸಿಂಹಳೀಯರ ನಡುವೆ ೧೯೫೦ರಿಂದಲೂ ಜನಾಂಗೀಯ ಘರ್ಷಣೆಗಳಿದ್ದಾಗಿಯೂ ಈ ದೇಶ ಮಾನವ ಅಭಿವೃದ್ಧಿಯಲ್ಲಿ ಪ್ರಗತಿ ಸಾಧಿಸಿರುವುದು ಒಂದು ಅದ್ಭುತವೆಂದೇ ಹೇಳಬಹುದು. ಆದರೆ

ದುರದೃಷ್ಟವೆಂದರೆ, ಹೆಚ್ಚಾದ ಮಾನವ ಅಭಿವೃದ್ಧಿಯನ್ನು ಕಾಯ್ದುಕೊಳ್ಳಲು, ಅಲ್ಲಿ ವರಮಾನವು ಸಾಕಷ್ಟು ಪ್ರಮಾಣದಲ್ಲಿ ಅಧಿಕಗೊಳ್ಳುತ್ತಿಲ್ಲ. ಶ್ರೀಲಂಕಾ ರಾಷ್ಟ್ರಕ್ಕೆ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಬೆಳವಣಿಗೆ ನಡುವೆ ಸಮತೋಲನ ಕಾಯ್ದುಕೊಂಡು ಬರಲು ಆಗುತ್ತಿಲ್ಲ. ಶ್ರೀಲಂಕಾ ದೇಶ ಮಾನವ ಅಭಿವೃದ್ಧಿ ಮತ್ತು ಆರ್ಥಿಕ ಬೆಳವಣಿಗೆ ನಡುವೆ ಸಮತೋಲನ ಕಾಯ್ದುಕೊಳ್ಳಬೇಕಾದ ಅವಶ್ಯಕತೆಯನ್ನು ಈ ವರದಿ ತಿಳಿಸಿದೆ.

ಪಾಪುಲೇಶನ್ ಫೌಂಡೇಶನ್ ಆಫ್ ಇಂಡಿಯಾ(೧೯೯೮)ದವರು ಭಾರತದ ೧೫ ರಾಜ್ಯಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕ, ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕ, ಪ್ರಜನೋತ್ಪತ್ತಿ ಆರೋಗ್ಯ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಿದ್ದಾರೆ. ಈ ಅಧ್ಯಯನದಲ್ಲಿ, ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಭಾರತದ ರಾಜ್ಯಗಳಲ್ಲಿ ಕೇರಳ ಮೊದಲ ಸ್ಥಾನದಲ್ಲಿದೆ. ಹರಿಯಾಣ, ಹಿಮಾಚಲ ಪ್ರದೇಶ, ಮಹಾರಾಷ್ಟ್ರ, ಪಂಜಾಬ್, ತಮಿಳುನಾಡು ರಾಜ್ಯಗಳು ಮಧ್ಯಮ ಮಾನವ ಅಭಿವೃದ್ಧಿ ಸಾಧಿಸಿರುವ ರಾಜ್ಯಗಳಾಗಿವೆ. ಅಸ್ಸಾಂ, ಹಿಮಾಚಲ ಪ್ರದೇಶ, ಕೇರಳ, ಒರಿಸ್ಸಾ, ತಮಿಳುನಾಡು ಮತ್ತು ಪಶ್ಚಿಮ ಬಂಗಾಳ ರಾಜ್ಯಗಳು ರಾಜ್ಯ ಆಂತರಿಕ ಉತ್ಪನ್ನದಲ್ಲಿ ಹೊಂದಿರುವ ಸ್ಥಾನಗಳಿಗಿಂತಲೂ ಮಾನವ ಅಭಿವೃದ್ಧಿಯಲ್ಲಿ ಉನ್ನತ ಸ್ಥಾನ ಪಡೆದಿವೆ. ಬಿಹಾರ, ಉತ್ತರ ಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳು ಮಾನವ ಅಭಿವೃದ್ಧಿ ಮತ್ತು ರಾಜ್ಯ ಆಂತರಿಕ ಉತ್ಪನ್ನಗಳೆರಡರಲ್ಲಿಯೂ ಏಕರೂಪವಾದ ಸ್ಥಾನ ಪಡೆದಿವೆ. ಆಂಧ್ರಪ್ರದೇಶ, ಗುಜರಾತ್, ಹರಿಯಾಣ, ಕರ್ನಾಟಕ, ಮಧ್ಯಪ್ರದೇಶ, ಪಂಜಾಬ್ ಮತ್ತು ರಾಜಸ್ಥಾನ ರಾಜ್ಯಗಳು, ರಾಜ್ಯ ಉತ್ಪನ್ನದಲ್ಲಿ ಉನ್ನತ ಸ್ಥಾನ ಪಡೆದಿದ್ದರೂ, ಮಾನವ ಅಭಿವೃದ್ಧಿಯಲ್ಲಿ ಈ ರಾಜ್ಯಗಳು ಕೆಳಸ್ಥಾನದಲ್ಲಿವೆ. ಅಧ್ಯಯನದ ಪ್ರಕಾರ ಕರ್ನಾಟಕ ರಾಜ್ಯವು ಸಾಪೇಕ್ಷವಾಗಿ ಭಾರತಕ್ಕಿಂತಲೂ ಉತ್ತಮ ಸ್ಥಿತಿಯಲ್ಲಿದೆ. ಲಿಂಗಸಂಬಂಧಿ ಆರೋಗ್ಯ ಸೂಚ್ಯಂಕದಲ್ಲಿ ಯಥಾವತ್ತಾಗಿ ಕೇರಳ ರಾಜ್ಯ ಭಾರತದ ರಾಜ್ಯಗಳಲ್ಲಿಯೇ ಮೊದಲ ಸ್ಥಾನದಲ್ಲಿದ್ದರೆ, ಮಧ್ಯಪ್ರದೇಶ ಮತ್ತು ಒರಿಸ್ಸಾಗಳು ಕೊನೆಯ ಸ್ಥಾನದಲ್ಲಿರುವ ಎರಡು ರಾಜ್ಯಗಳಾಗಿವೆ. ಫೌಂಡೇಶನ್ ಸಿದ್ಧಪಡಿಸಿದ, ಹೆಚ್.ಡಿ.ಐ. ಬಿ.ಹೆಚ್.ಐ.ಗಳಿಗೆ ಸಂಬಂಧಿಸಿದಂತೆ ರಾಷ್ಟ್ರದ ೫ ರಾಜ್ಯಗಳಲ್ಲಿ ಕರ್ನಾಟಕವು ಕ್ರಮವಾಗಿ ೮.೮.೭ನೆಯ ಸ್ಥಾನ ಪಡೆದಿದ್ದು, ಮೂರು ಸೂಚ್ಯಂಕಗಳಲ್ಲಿ ಕರ್ನಾಟಕದ ಸ್ಥಿತಿಯು ಅಖಿಲ ಭಾರತ ಮಟ್ಟದಲ್ಲಿನ ಸ್ಥಿತಿಗಿಂತಲೂ ಉತ್ತಮವಾಗಿದೆ[೧೨](**ಸ್ಟೇಟ್ ಆಫ್ ಇಂಡಿಯನ್ ಪಾಪ್ಯುಲೇಶನ್, ೧೯೯೮**)

ದಲಿತರ ಶಿಕ್ಷಣದಿಂದ ಹಿಡಿದು ಉದ್ಯೋಗ, ಆರೋಗ್ಯ, ದಲಿತ ಸ್ತ್ರೀಯರ ಸ್ಥಾನಮಾನ, ಭೂಮಿ, ನೀರು ಹಾಗೂ ಮಾನವ ಹಕ್ಕುಗಳ ಬಗ್ಗೆ ಈ ಪ್ರಬಂಧದಲ್ಲಿ ವಿಶ್ಲೇಷಣಾತ್ಮಕವಾದಂತಹ ಸಾಮಾನ್ಯ ಚರ್ಚೆಗಳು ನಡೆದಿವೆ. ಅದರಲ್ಲೂ ವಿಶೇಷವಾಗಿ ದಲಿತರು ಹಾಗೂ ಜಾಗತೀಕರಣದ ತೊಡಕುಗಳನ್ನು ವಿವಿಧ ತೆರದಲ್ಲಿ ವಿವರಿಸಲಾಗಿದೆ. ದಲಿತರ ಜೀವನದ ಮುಂದಿನ ಭವಿಷತ್ತಿನಲ್ಲಿ ದಲಿತರ ಜೀವನದ ಮುಂದಿನ ಭವಿಷ್ಯತ್ತಿನಲ್ಲಿ ಏನಾಗಬಹುದೆಂದು ಮುನ್ನೆಚ್ಚರಿಕೆಯ ಹೇಳಿಕೆಗಳನ್ನು ಅರಿಯುವಲ್ಲಿ ಈ ಚರ್ಚೆಯು ಸಹಾಯಕವಾಗಬಹುದು. ಪ್ರಭುತ್ವವು ಅಭಿವೃದ್ಧಿಯ ಹೆಸರಿನಲ್ಲಿ

ಮಾಡುವಂತಹ ಪ್ರಯೋಜನಗಳ ಬಗ್ಗೆ ಪೂರ್ಣ ಮಾಹಿತಿಯನ್ನು ತಿಳಿದು ಅದಕ್ಕೆ ಸಂದರ್ಭಕ್ಕನು ಗುಣವಾಗಿ ವರ್ತಿಸಿ. ದಲಿತರ ಸಮಸ್ಯೆಗಳನ್ನು ಜಾಗತಿಕ ಮಟ್ಟದಿಂದ ಸ್ಥಳೀಯದವರೆಗೂ ನಿರ್ಮೂಲನೆ ಮಾಡಬೇಕು. ಅನ್ನುವುದನ್ನು ಇಲ್ಲಿ ಪರೋಕ್ಷವಾಗಿ ವಿವರಿಸಲಾಗಿದೆ.

ತಿಳಿದವರು ಹೇಳುವಂತೆ ಅಭಿವೃದ್ಧಿಯೆಂಬುದು ಅದರ ಸೂಚಿಗಳಾದ ಅಕ್ಷರ, ಆಹಾರ, ಆರೋಗ್ಯ, ಆಶ್ರಯ, ಅಭಯಗಳೆಲ್ಲವೂ ಪರಿಶಿಷ್ಟರಿಗೆ ಕ್ರಮೇಣವಾಗಿ ದೂರವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಬಾಬಾ ಸಾಹೇಬ್ ಅಂಬೇಡ್ಕರವರು "ಲೈಫ್ ಆಫ್ ಕಾಂಟ್ರಡಿಕ್ಷನ್" ಎಂದು ಕರೆದಿದ್ದಾರೆ. ದಲಿತರು ಸಾಮಾಜಿಕ, ಆರ್ಥಿಕ ವಾಗಿ ಶ್ರೇಣಿಯಲ್ಲಿ ಪಕ್ಕದಲ್ಲಿದ್ದು ಅವರು ಶೋಷಣೆಗೆ ಒಳಪಟ್ಟಿದ್ದಾರೆ. ಜಾತಿ ತಾರತಮ್ಯದ ಪೆಟ್ಟಿನೋ ಇವರೇ ಅನುಭವಿಸಬೇಕಾಗಿದೆ. ಮತ್ತು ಇವರೇ ಅಸ್ಪೃಶ್ಯತೆಗೆ ಬಲಿಪಶುಗಳು ಸಹ ಆಗಿದ್ದಾರೆ. ಇವರ ಮೇಲಿನ ದೌರ್ಜನ್ಯ, ಕಳಂಕ ತಾರತಮ್ಯ ಹೊಸದೇನಲ್ಲ. ಭಾರತದಂತಹ ಜಾತಿ ಪದ್ಧತಿಯು ಶತಮಾನಗಳಿಂದ ದಲಿತರನ್ನು ಗುಲಾಮರಾಗಿ ವ್ಯವಸಾಯ ಕೂಲಿಗಳನ್ನಾಗಿಸಿದೆ. ಅದರಲ್ಲಿ ಜಾಗತೀಕರಣ ಹಾಗೂ ಅದರ ಬಾಹು ಕೂಲಿಗಳನ್ನಾಗಿಸಿದೆ. ಆದರೇ ಜಾಗತೀಕರಣ ಹಾಗೂ ಅದರ ಬಾಹುಗಳಾದ ಖಾಸಗೀಕರಣ, ಉದಾರೀಕರಣಗಳು ಹೊಸ ತಂತ್ರಗಳನ್ನು ರೂಪಿಸುತ್ತಿದೆ. ಜಾಗತೀಕರಣದ ಸಾದಕ ಬಾದಕಗಳ ಬಗ್ಗೆ ಎಲ್ಲರೂ ತಿಳಿದಿರಬೇಕು. ಹಾಗೂ ಇದರ ಅನುಕೂಲಗಳು ದಲಿತರಿಗೆ ಆಗಿದ್ದರೆ ಅದೂ ಉನ್ನತ ಮಟ್ಟದಲ್ಲಿರುವವರಿಗೆ ಮಾತ್ರ ಸಾಧ್ಯ. ಆದ್ದರಿಂದ ಜಾಗತೀಕರಣ ಅನ್ನುವುದು ದೊಡ್ಡ ಪರಿಕಲ್ಪನೆ, ಇದರ ಬಗ್ಗೆ ಎಲ್ಲಾ ರೀತಿಯ ಚರ್ಚೆ ವಿಚಾರ ವಿನಿಮಯ ಸಂವಾದಗಳು ನಡೆಯಬೇಕು. ಯಾವುದೇ ಅಧ್ಯಯನಕ್ಕೆ ಅಂತ್ಯವಿಲ್ಲ ಆದ್ದರಿಂದ ಇಂತಹ ಪ್ರಕ್ರಿಯೆಗಳು ಯಾವಾಗಲೂ ನಡೆಯಬೇಕು ಅನ್ನೋದು ಪ್ರಬಂಧದ ಆಶಯವಾಗಿದೆ. ಹಾಗೇ ಜಾಗತೀಕರಣದ ತೊಡಕುಗಳಿಂದ ಮುಕ್ತವಾಗಬೇಕಾದರೆ ಎಲ್ಲಾ ರಂಗದಲ್ಲು ದಲಿತರಿಗೆ ಮೀಸಲಾತಿಯನ್ನು ನೀಡಬೇಕು. ಅನ್ನುವುದನ್ನು ಭೂಪಾಲ್ ಘೋಷಣೆಯಲ್ಲಿ ಚರ್ಚಿಸಿದೆ.[೧೩]

**೨.೧.೪. ಕರ್ನಾಟಕದಲ್ಲಿ ಅಭಿವೃದ್ಧಿ ಕುರಿತ ಚರ್ಚೆಗಳು**

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ಕುರಿತಂತೆ ಮುಖ್ಯವಾಗಿ ಎರಡು ಅಧ್ಯಯನಗಳು ನಡೆದಿವೆ. ಮೊದಲನೆಯದಾಗಿ ಕರ್ನಾಟಕ ಸರ್ಕಾರದ ಯೋಜನಾ ವಿಭಾಗವು ರಾಜ್ಯದ ಜಿಲ್ಲೆಗಳಿಗೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದೆ. ಎರಡನೆಯದಾಗಿ ವಿನೋದ್ ವ್ಯಾಸಲು(೧೯೯೬) ಅವರು ಸ್ವತಂತ್ರವಾಗಿ ರಾಜ್ಯದ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಿದ್ದಾರೆ. ವಾಣಿ ಮತ್ತು ವ್ಯಾಸಲು; ೧೯೯೬ರಲ್ಲಿ ಅವರು ಕರ್ನಾಟಕದ ೧೯ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಸಾಕ್ಷರತೆ, ಜೀವನಾಯುಷ್ಯ ಮತ್ತು ವರಮಾನಗಳ ಕನಿಷ್ಠ ಮತ್ತು ಗರಿಷ್ಠ ಮೌಲ್ಯಗಳನ್ನು ಕರ್ನಾಟಕದ ಜಿಲ್ಲೆಗಳಿಂದ ಆಯ್ದು ಒಂದು ರೀತಿಯ ಮಾನವ ಅಭಿವೃದ್ಧಿಯ ಸೂಚ್ಯಂಕ ಅಭಿವೃದ್ಧಿಪಡಿಸಿದ್ದು, ಈ ಮೂರು ಚಲಕಗಳ ಮೌಲ್ಯಗಳನ್ನು ರಾಷ್ಟ್ರೀಯ ಮಟ್ಟದಿಂದ ಆರಿಸಿಕೊಂಡು ಎರಡನೆಯ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಇವರು ಒಟ್ಟು

ಆರು ಪರ್ಯಾಯ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ರಚಿಸಿದ್ದಾರೆ. ಇವರ ಅಧ್ಯಯನದಿಂದ ಬಂದ ತಥ್ಯವೆಂದರೆ, ಮಾನವ ಅಭಿವೃದ್ಧಿಯಲ್ಲಿ ಕರ್ನಾಟಕ ರಾಜ್ಯದ ಜಿಲ್ಲೆ ಜಿಲ್ಲೆಗಳ ನಡುವೆ ಅಂತರಗಳಿವೆ. ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಮತ್ತು ಬೆಂಗಳೂರು ಜಿಲ್ಲೆಗಳು ರಾಜ್ಯದಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನದಲ್ಲಿದ್ದರೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಗುಲ್ಬರ್ಗಾ, ಬಳ್ಳಾರಿ, ಬೀದರ್ ಮತ್ತು ರಾಯಚೂರು ಜಿಲ್ಲೆಗಳನ್ನು ಕ್ರಮವಾಗಿ ೧೫.೧೭.೧೮ ಮತ್ತು ೧೯ನೇ ಸ್ಥಾನದಲ್ಲಿವೆ. ಆರು ಪರ್ಯಾಯ ಮಾನವ ಅಭಿವೃದ್ಧಿ ಸೂಚ್ಯಂಕಗಳಲ್ಲಿ ಇವುಗಳ ಸ್ಥಾನ ಸರಿಸಮಾನವಾಗಿ ಏಕರೂಪತೆಯಿಂದ ಕೂಡಿವೆ. ಕರ್ನಾಟಕದಲ್ಲಿ ಅತಿ ಹೆಚ್ಚು ಮಾನವ ಅಭಿವೃದ್ಧಿ ಮೌಲ್ಯ ಹೊಂದಿರುವ ಜಿಲ್ಲೆಗಳು.[೧೪] **(ವಾಣಿ ಮತ್ತು ವ್ಯಾಸುಲು, ೧೯೯೬)**

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-೧೯೯೯ ವರದಿಯನ್ನು ಕರ್ನಾಟಕ ಸರಕಾರ ಪ್ರಕಟಿಸಿದೆ. ಈ ವರದಿಯು ರಾಜ್ಯದ ೨೦ ಜಿಲ್ಲೆಗಳಿಗೆ ಮಾನವ ಅಭಿವೃದ್ಧಿ ಮತ್ತು ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳನ್ನು ಸಿದ್ಧಪಡಿಸಿದೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಕೊಡಗು, ಬೆಂಗಳೂರು ನಗರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕ್ರಮವಾಗಿ ಮೊದಲ ಮೂರು ಸ್ಥಾನದಲ್ಲಿದ್ದರೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಬಳ್ಳಾರಿ, ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಕೊನೆಯ ಸ್ಥಾನಗಳನ್ನು ಪಡೆದುಕೊಂಡಿವೆ, ಜಿಡಿಐ ದರ್ಜೆಗಳು, ಹೆಚ್.ಡಿ.ಐ. ದರ್ಜೆಗಳನ್ನೇ ಬಹುತೇಕವಾಗಿ ಅನುಸರಿಸಿವೆ. ಮಾನವ ಅಭಿವೃದ್ಧಿಗೆ ಸಂಬಂಧಿಸಿದಂತೆ, ಜಾಗತಿಕ ಮಟ್ಟದಲ್ಲಿ ಭಾರತ ೧೫೪ನೇ ಸ್ಥಾನದಲ್ಲಿದ್ದರೆ, ಕರ್ನಾಟಕ ರಾಜ್ಯ ೧೫೧ನೇ ಸ್ಥಾನದಲ್ಲಿ ನಿಲ್ಲುತ್ತದೆ. ಜಾಗತಿಕ ಮಟ್ಟದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ನಾಲ್ಕು ಜಿಲ್ಲೆಗಳು ಅತ್ಯಂತ ಕೆಳಮಟ್ಟದ ಸ್ಥಾನಗಳನ್ನು ಪಡೆದಿರುವ ಜಿಲ್ಲೆಗಳಾಗಿವೆ ಎಂಬ ಕಳವಳಕಾರಿ ಸಂಗತಿಯನ್ನು ಕರ್ನಾಟಕ ಮಾನವ ಅಭಿವೃದ್ಧಿ ವರದಿ ತೋರಿಸಿಕೊಟ್ಟಿದೆ.[೧೫] **(ಕರ್ನಾಟಕ ಮಾನವ ಅಭಿವೃದ್ಧಿ ವರದಿ, ೧೯೯೯)**

ಈ ಅಧ್ಯಯನದಲ್ಲಿ ಮುಖ್ಯ ಅಂಶಗಳೆಂದರೆ ಅಭಿವೃದ್ಧಿಯ ಮುಖ್ಯ ಉದ್ದೇಶ ಬದುಕಿನ ಆಯ್ಕೆಗಳ ವ್ಯಾಪ್ತಿಯನ್ನು ವರ್ಧಿಸುವುದಾಗಿದೆ. ಜನತೆ ಸುಖಕರವಾಗಿ, ದೃಢಕಾಯರಾಗಿ, ಆರೋಗ್ಯವಾಗಿ, ಬಹುಕಾಲ ಬಾಳುವಂತಹ ವಾತಾವರಣವನ್ನು ನಿರ್ಮಿಸುವುದು ಅಭಿವೃದ್ಧಿಯ ಗುರಿ(ಹಕ್ ೧೯೯೬). ಜನತೆಯ ಭಾಗವಹಿಸುವಿಕೆಯಿಂದ ಮಾತ್ರ ಅಭಿವೃದ್ಧಿ ಸಾಧ್ಯ. ಸಾಂಪ್ರದಾಯಕ ವಾಗಿ ನಡೆಯುತ್ತಾ ಬಂದಿರುವ ಅಧ್ಯಯನಗಳು ಅಭಿವೃದ್ಧಿಯ ಸ್ಥಿತಿಗತಿಗಳನ್ನು ಹಾಗೂ ಪ್ರಾದೇಶಿಕ ಅಸಮಾನತೆಯನ್ನು ವರಮಾನ, ಬಂಡವಾಳ ಮತ್ತು ಕೈಗಾರಿಕಾ ಘಟಕಗಳನ್ನು ಅಧಾರವಾಗಿಟ್ಟುಕೊಂಡು ನಡೆಯುತ್ತಾ ಬಂದಿದೆ. ಹೈದರಾಬಾದ್-ಕರ್ನಾಟಕ ಪ್ರದೇಶದ ಅಭಿವೃದ್ಧಿಗೆ ವಿಶೇಷ ಕಾರ್ಯಕ್ರಮದ ಅಗತ್ಯವಿದೆ. ಈ ಪ್ರದೇಶದ ಅಭಿವೃದ್ಧಿಯು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ನೆಲೆಯಲ್ಲಿ ನಡೆಯಬೇಕು. ಅದು ಲಿಂಗ ಸಂವೇದಿಯಾಗಿರಬೇಕು. ಅದಕ್ಕೆ ಸಾಮಾಜಿಕ ಮುಖವಿರಬೇಕು. ಈ ಕಾರ್ಯಕ್ರಮದಲ್ಲಿ ಸಾಕ್ಷರತೆ, ಶಿಕ್ಷಣ ಹಾಗೂ ಆರೋಗ್ಯ ಇವುಗಳಿಗೆ ಆದ್ಯತೆಯ ಗಮನ ನೀಡಬೇಕು. ಜನರ

ಧಾರಣಶಕ್ತಿಯನ್ನು ಸಂವರ್ಧಿಸುವ ಕೆಲಸವನ್ನು ಮಾಡಬೇಕು. ನನ್ನ ಅಭಿಪ್ರಾಯ ವೆಂದರೆ ಈ ಅಧ್ಯಯನವು ಅಭಿವೃದ್ಧಿಯ ಪ್ರಕ್ರಿಯೆಯು ತಳಹಂತದಿಂದ ಮೇಲ್ಮುಖವಾಗಿ ಚಲಿಸಬೇಕು ಎಂದು ಇಡೀ ಪ್ರಬಂಧ ವಾದಿಸುತ್ತದೆ[೪](**ಕೃಷ್ಣ ಜಿ. ೨೦೦೦**). ಇಲ್ಲಿ ಜನತೆ ಅಥವಾ ಜನರು ಎಂದರೆ ಯಾರು ಜಾತಿ, ವರ್ಗ ಮತ್ತು ಲಿಂಗಾಧಾರಿತ ಪರಿಕಲ್ಪನೆಗಳಿಂದ ಸಮಾಜದ ಅಂಚಿನಲ್ಲಿರುವ ಜನರೆ ಅಥವಾ ಯಾರು ಎಂಬುದನ್ನು ಸ್ಪಷ್ಟಪಡಿಸಬೇಕಾಗಿತ್ತು.

ಅಸ್ಪೃಶ್ಯತೆಯನ್ನು ಅಭಿವೃದ್ಧಿಯ ಚೌಕಟ್ಟಿನಲ್ಲಿ ಪರಿಭಾವಿಸಿಕೊಳ್ಳಲು ಮತ್ತು ಇವುಗಳ ನಡುವಿನ ಸಂಬಂಧವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಭಾರತ ಮತ್ತು ಕರ್ನಾಟಕದ ಅಭಿವೃದ್ಧಿಯ ಪರಿಶಿಷ್ಟ ಮತ್ತು ಶಿಷ್ಟ ನೆಲೆಗಳನ್ನು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. ಸಮಾಜದಲ್ಲಿ ಅಭಿವೃದ್ಧಿಯಿಂದ ವಂಚಿತವಾದ ಮತ್ತು ತೀವ್ರ ದುಸ್ಥಿತಿಯಲ್ಲಿರುವ ಜನಸಮುದಾಯವೆಂದರೆ ಪರಿಶಿಷ್ಟರು ಎಂಬುದಾಗಿ ನಿರ್ವಚಿಸಿಕೊಳ್ಳಲಾಗಿದೆ. ಅಕ್ಷರಸಂಸ್ಕೃತಿ ಮತ್ತು ಅಸ್ಪೃಶ್ಯತೆಯ ಚರ್ಚೆಯಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಶಿಷ್ಟ-ಪರಿಶಿಷ್ಟರ ನಡುವಿನ ಅಸಮಾನತೆಯ ನಿದರ್ಶನವನ್ನು ಇಲ್ಲಿ ತೋರಿಸಲಾಗಿದೆ. ಶಿಷ್ಟರ ಸಾಕ್ಷರತೆಯು ಯಾವ ಪ್ರಮಾಣದಲ್ಲಿ ಏರಿಕೆಯಾಗುತ್ತದೆಯೋ ಅದೇ ಪ್ರಮಾಣದಲ್ಲಿ ಪರಿಶಿಷ್ಟ ಅನಕ್ಷರತಾ ಪ್ರಮಾಣ ಕಡಿಮೆಯಾಗುತ್ತಿಲ್ಲ. ಶಿಷ್ಟ-ಪರಿಶಿಷ್ಟರಿಗೆ ಸಂಬಂಧಿಸಿದಂತೆ ಸಾಕ್ಷರತೆಯ ಮಟ್ಟ ಪರಿಶಿಷ್ಟರಲ್ಲಿ ಕಡಿಮೆಯಿದೆ. ಆದರೆ ಪರಿಶಿಷ್ಟರನ್ನು ಗಣನೆಗೆ ತೆಗೆದುಕೊಂಡಾಗ ಕನಿಷ್ಠ ಸಾಕ್ಷರತೆಯು ಪರಿಶಿಷ್ಟ ಮಹಿಳೆಯರಲ್ಲಿದೆ. ಅಕ್ಷರಕ್ಕೂ ಅಧಿಕಾರಕ್ಕೂ ನಡುವೆ ಇರುವ ಸಂಬಂಧವನ್ನು ಅಲ್ಲಗಳೆಯುವಂತಿಲ್ಲ. ಈ ದೃಷ್ಟಿಯಿಂದ ಪರಿಶಿಷ್ಟರಿಗೆ ಅಕ್ಷರವು ತುಂಬಾ ಮಹತ್ವವಾದ ಸಂಗತಿಯಾಗಿದೆ. ದುಡಿಮೆಯನ್ನು ಶಿಷ್ಟ-ಪರಿಶಿಷ್ಟ ನೆಲೆಯಲ್ಲಿ ಸೂಕ್ಷ್ಮವಾಗಿ ಚರ್ಚಿಸಲಾಗಿದೆ. ದುಡಿಮೆಗೆ ಸಂಬಂಧಿಸಿದ ಒತ್ತಡವನ್ನು ಪರಿಶಿಷ್ಟರು ನಿರ್ವಹಿಸುತ್ತಿದ್ದರೆ ಬಂಡವಾಳ ಸಂಚಯನದ ಅನುಕೂಲಗಳನ್ನು ಶಿಷ್ಟರು ಅನುಭವಿಸುತ್ತಿದ್ದಾರೆ. ಬಂಡವಾಳ ಸಂಚಯನ ಎಂಬುದನ್ನೇ ಅಭಿವೃದ್ಧಿ ಯೆಂದು ಕರೆದರೆ ಅದನ್ನು ಶಿಷ್ಟರಿಗೆ ಮಾತ್ರ ಸಂಬಂಧಿಸಿದ್ದು, ಪರಿಶಿಷ್ಟರು ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವುದಿರಲಿ, ದುಸ್ಥಿತಿಯ ತೀವ್ರತೆಯನ್ನು ಕಡಿಮೆ ಮಾಡಿಕೊಳ್ಳುವುದರಲ್ಲಿ ವಿಫಲರಾಗುತ್ತಿದ್ದಾರೆ. ದುಡಿಮೆಯನ್ನು ಶಿಷ್ಟ-ಪರಿಶಿಷ್ಟ ನೆಲೆಯಲ್ಲಿ ಚರ್ಚಿಸುವಾಗ ಅಸ್ಪೃಶ್ಯತೆಯ ಲಿಂಗಸಂಬಂಧಿ ಅಯಾಮ ವನ್ನು ಗುರುತಿಸಿದ್ದಾರೆ. ಅಸ್ಪೃಶ್ಯತೆಯ ಆಚರಣೆಯಿಂದ ಹೆಚ್ಚು ದೌರ್ಜನ್ಯಕ್ಕೆ, ಹಿಂಸೆಗೆ ಪರಿಶಿಷ್ಟ ಮಹಿಳೆಯರು ಒಳಗಾಗಿದ್ದಾರೆ. ದುಡಿಮೆಯ ರಾಚನಿಕ ಸ್ವರೂಪವನ್ನು ಗುರುತಿಸುವುದರ ಮೂಲಕ ನಮ್ಮ ಸಮಾಜದ ಸಂದರ್ಭದಲ್ಲಿ ಪರಿಶಿಷ್ಟರು ಕೃಷಿ, ಗಣಿಗಾರಿಕೆ, ಮೀನುಗಾರಿಕೆ, ಕಲ್ಲು ಹೊಡೆಯುವುದು ಮುಂತಾದ ಪ್ರಾಥಮಿಕ ವಲಯದಲ್ಲಿ ಮುಗಿಬಿದ್ದಿರುವುದನ್ನು ಮತ್ತು ಶಿಷ್ಟರು ಹೆಚ್ಚು ವರಮಾನ ತರುವ ಉದ್ದಿಮೆ ಮತ್ತು ಸೇವಾ ವಲಯದಲ್ಲಿದ್ದಾರೆ. ಅಭಿವೃದ್ಧಿಯ ಮಂಚೂಣಿಯಲ್ಲಿ ಶಿಷ್ಟರಿದ್ದರೆ, ಪರಿಶಿಷ್ಟರು ಅದರಿಂದ ವಂಚಿತರಾಗಿ ಅಂಚಿಗೆ ತಳ್ಳಲ್ಪಟ್ಟಿದ್ದಾರೆ. ಪರಿಶಿಷ್ಟರ ನೆಲೆಯಲ್ಲಿ ನೋಡಿದಾಗ ಪರಿಶಿಷ್ಟ ಮಹಿಳೆಯರ ಸ್ಥಿತಿ ತುಂಬಾ ಶೋಚನೀಯವಾಗಿದೆ. ಅಸ್ಪೃಶ್ಯತೆ, ತಾರತಮ್ಯ, ಮಡಿಮೈಲಿಗೆ ಮತ್ತು ಶೋಷಣೆಗಳಿಂದಾಗಿ ಪರಿಶಿಷ್ಟರು ಅಕ್ಷರಸಂಪತ್ತಿನಿಂದ ವಂಚಿತರಾಗಿದ್ದಾರೆ. ಅಕ್ಷರಸಂಸ್ಕೃತಿಯಿಂದ

ವಂಚಿತರಾದ ಕಾರಣದಿಂದಾಗಿ ಪ್ರಾಥಮಿಕೇತರ ವಲಯವನ್ನು ಹೆಚ್ಚು ಹೆಚ್ಚಾಗಿ ಪ್ರವೇಶಿಸಲು ಅವರಿಗೆ ಸಾಧ್ಯವಾಗಿಲ್ಲ. ಜಾಗತೀಕರಣವು ಸಮಾಜದಲ್ಲಿ ಆಳವಾಗಿ ಬೇರೂರಿರುವ ತಾರತಮ್ಯ-ಅಸಮಾನತೆಗಳನ್ನು ಮತ್ತಷ್ಟು ತೀವ್ರಗೊಳಿಸುವ ಸಾಧ್ಯತೆಯನ್ನು ಇಲ್ಲಿ ಗುರುತಿಸಲಾಗಿದೆ. ಶಿಕ್ಷಣಕ್ಕೆ ಮತ್ತು ಉದ್ದಿಮೆಗೆ ಸಂಬಂಧಿಸಿದಂತೆ ಸರ್ಕಾರವು ಹಿಂದೆ ಸರಿಯುತ್ತಿರುವುದರಿಂದಾಗಿ ಮತ್ತು ಖಾಸಗಿ ವಲಯದ ವರ್ಧನೆಯಿಂದಾಗಿ, ಮಾರ್ಕೆಟ್ಟೀಕರಣದಿಂದಾಗಿ ಪರಿಶಿಷ್ಟರು ಶಿಕ್ಷಣ ಪಡೆಯುವುದು ದುರ್ಲಭವಾಗುತ್ತಿದೆ. ಶಿಕ್ಷಣದಿಂದ ವಂಚಿತರಾದ ಪರಿಶಿಷ್ಟರು ತೀವ್ರಗತಿಯಲ್ಲಿ ವರ್ಧಿಸುತ್ತಿರುವ ಸೇವಾವಲಯವನ್ನು ಪ್ರವೇಶಿಸುವುದು ಕಷ್ಟವಾಗಿದೆ. ಒಟ್ಟಾರೆ ಪ್ರಬಂಧದಲ್ಲಿ ಅಭಿವೃದ್ಧಿ-ಬಂಡವಾಳ ಸಂಚಯನಗಳು ನಮ್ಮ ಸಮಾಜದ ಸಂದರ್ಭದಲ್ಲಿ ಪರಿಶಿಷ್ಟರಿಗೆ ವಿಮುಖವಾಗಿದ್ದರೆ ಶಿಷ್ಟರಿಗೆ ಅಭಿಮುಖವಾಗಿದೆ ಎಂದು ವಾದಿಸಿದ್ದಾರೆ. ಇಲ್ಲಿ ನನ್ನ ಅಭಿಪ್ರಾಯವೆಂದರೆ ಇದೊಂದು ಉತ್ತಮವಾದ ಗುಣಾತ್ಮಕತೆ ಮತ್ತು ಪರಿಮಾಣಾತ್ಮಕತೆಯಿಂದ ಕೂಡಿದ ಅಧ್ಯಯನವಾಗಿದೆ. ಇಲ್ಲಿ ನನ್ನ ಪ್ರಶ್ನೆಯೆಂದರೆ ಪರಿಶಿಷ್ಟರು, ಅಸ್ಪೃಶ್ಯತೆ ಎಂಬುದಾಗಿ ಮಾತನಾಡುವಾಗ ಈ ಪರಿಶಿಷ್ಟರೆಂದರೆ ಯಾರು? ಪರಿಶಿಷ್ಟರಲ್ಲಿ ಅಸ್ಪೃಶ್ಯರು ಮತ್ತು ಸ್ಪೃಶ್ಯರು ಯಾರು ಎನ್ನುವುದನ್ನು ನಿರ್ದಿಷ್ಟವಾಗಿ ಯಾರೆಂದು ತಿಳಿಸಿಲ್ಲ. ಏಕೆಂದರೆ ಪ್ರಸ್ತುತ ದಲಿತರ ಸ್ಥಿತಿಗತಿಯನ್ನು ನೋಡಿದಾಗ ಇಂತಹ ಸೂಕ್ಷ್ಮ ವಿಚಾರಗಳನ್ನು ಗಮನಿಸುವುದು ಈ ಕಾಲಘಟ್ಟಕ್ಕೆ ಅತ್ಯವಶ್ಯಕವಾಗಿದೆ[೭೭] **(ಚಂದ್ರಶೇಖರ ಟಿ.ಆರ್,೨೦೧೦)**

**೨.೧.೫. ಅಭಿವೃದ್ಧಿ ಕುರಿತ ವ್ಯಾಖ್ಯಾನಗಳು ಮತ್ತು ಸಮಕಾಲೀನ ಚರ್ಚೆಗಳು**

ಅಭಿವೃದ್ಧಿ ಎನ್ನುವ ಪರಿಕಲ್ಪನೆಗೆ ವೀಕೀಪೀಡಿಯದಲ್ಲಿ ವಿವಿಧ ರೀತಿಯಲ್ಲಿ ವ್ಯಾಖ್ಯಾನಗಳನ್ನು ನೀಡಿದ್ದಾರೆ, ಅದರಲ್ಲಿ ಕೆಲವು ವ್ಯಾಖ್ಯಾನಗಳನ್ನು ಚರ್ಚಿಸಲಾಗಿದೆ.

ಅ. ಅಭಿವೃದ್ಧಿಯ ಅಧ್ಯಯನದ ದೃಷ್ಟಿಯಲ್ಲಿ ಸಮಾಜವಿಜ್ಞಾನದ ಮೂಲಕ ಅಬಿವೃದ್ಧಿಶೀಲ ರಾಷ್ಟ್ರಗಳ ವಿಚಾರ ಅಥವಾ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ಮತ್ತು ಬಗೆಹರಿಸುವ ಪ್ರಕ್ರಿಯೆಯಾಗಿದೆ.

ಆ. ಮನಶಾಸ್ತ್ರದ ಪ್ರಕಾರ ವ್ಯಕ್ತಿಯ ಜೀವಿತಾವಧಿಯಲ್ಲಿ ಮಾನಸಿಕ, ಭಾವಾನಾತ್ಮಕ ಮತ್ತು ಗ್ರಹಿಕೆಯ ಬದಲಾವಣೆಯು ಒಂದು ವ್ಯವಸ್ಥಿತವಾದ ವೈಜ್ಞಾನಿಕ ಅಧ್ಯಯನವಾಗಿದೆ.

ಇ. ಸಮುದಾಯ ಅಭಿವೃದ್ಧಿ ಹಿನ್ನೆಲೆಯಲ್ಲಿ ಪ್ರಾಯೋಗಿಕ ಮತ್ತು ಶೈಕ್ಷಣಿಕ ಶಿಸ್ತುಗಳ ಮೂಲಕ ಸ್ಥಳೀಯ ಸಮುದಾಯವನ್ನು ಉತ್ತಮವಾಗಿಸುವ ವಿಧಾನವಾಗಿದೆ.

ಈ. ಅರ್ಥಶಾಸ್ತ್ರ(ಆರ್ಥಿಕ) ಹಿನ್ನೆಲೆಯಲ್ಲಿ ಅಭಿವೃದ್ಧಿಯೆಂದರೆ ಮಾರುಕಟ್ಟೆ, ಉತ್ಪಾದನೆ, ಲಾಭ, ಗಳಿಕೆ ಮುಂತಾದ ಆರ್ಥಿಕ ವಿಚಾರಗಳ ಮೂಲಕ ಸಮಾಜದ ಬದಲಾವಣೆಯ ಪ್ರಕ್ರಿಯೆಯಾಗಿದೆ.

ಉ. ಮಾನವ ಅಭಿವೃದ್ಧಿ ಸಿದ್ಧಾಂತದ ಪ್ರಕಾರ ಸಮಾಜೋ-ಆರ್ಥಿಕ, ಪರಿಸರ, ಸುಸ್ಥಿರ ಅಭಿವೃದ್ಧಿ, ಕಲ್ಯಾಣ ಸೇವೆಗಳು ಮತ್ತು ಲಿಂಗ ಸಂಬಂಧಿ ಅಥವಾ ಮಹಿಳಾ ಆರ್ಥಿಕತೆ ಮುಂತಾದವು ಗಳನ್ನೊಳಗೊಂಡ ವಿಚಾರವಾಗಿದೆ.

ಊ. ಗ್ರಾಮೀಣ ಅಭಿವೃದ್ಧಿಯ ಹಿನ್ನೆಲೆಯಲ್ಲಿ ನೋಡುವುದಾದರೆ ಕ್ರಿಯೆ ಮತ್ತು ಪ್ರಾರಂಭದಿಂದ ನಗರವಲ್ಲದ, ಹಳ್ಳಿಗಳ ಜೀವನ ಮಟ್ಟವನ್ನು ಸುಧಾರಿಸುವ ಕ್ರಮವಾಗಿದೆ.

ಋ. ಸಾಮಾಜಿಕ ಅಭಿವೃದ್ಧಿಯ ಪ್ರಕಾರ ಸಮಾಜದಲ್ಲಿ ಆಗುವ ಬದಲಾವಣೆಯ ಮೂಲಕ ಮತ್ತು ಸಮಾಜವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದು ಮತ್ತು ಅದರ ಸಮಗ್ರ ಅಭಿವೃದ್ಧಿಯಡೆಗೆ ಕೊಂಡೊಯ್ಯುವ ಪ್ರಕ್ರಿಯೆಗಳಾಗಿವೆ.

ಎ. ಸಮಾಜೋ-ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸಮಾಜವನ್ನು ಕಾಲ ಮತ್ತು ಘಟನೆಗಳ ಅನುಸಾರವಾಗಿ ಸಕಾರಾತ್ಮಕವಾಗಿ ಪುನರ್ಸಂಘಟಿಸುವ ಮತ್ತು ಪುರಾತನ ಮಾದರಿಯಿಂದ ಗುಣಾತ್ಮಕವಾಗಿ ಮಾರ್ಪಡಿಸುವ ವಿಭಿನ್ನತೆಯ ಪ್ರಕ್ರಿಯೆಯಾಗಿದೆ. ಇವುಗಳನ್ನು ಅವಲೋಕಿಸಿದಾಗ ಈ ಅಧ್ಯಯನಕ್ಕೆ ಪೂರಕವಾಗಿ ಅಭಿವೃದ್ಧಿಯ ವ್ಯಾಖ್ಯಾನಗಳನ್ನು ಬಹುಶಿಸ್ತೀಯ ನೆಲೆಗಳಲ್ಲಿ ಅರ್ಥ ಮಾಡಿಕೊಳ್ಳ ಬಹುದಾಗಿದೆ.

**ಅಂತರ್ಜಾಲದಲ್ಲಿ ಬ್ಯುಸಿನೆಸ್ ಶಬ್ದಕೋಶದಲ್ಲಿ ಅಭಿವೃದ್ಧಿಯ ನಾಲ್ಕು ವ್ಯಾಖ್ಯಾನಗಳನ್ನು ಕೊಡಲಾಗಿದೆ.** ಅವುಗಳಲ್ಲಿ

೧. ವೈಜ್ಞಾನಿಕ ಮತ್ತು ತಾಂತ್ರಿಕ ಜ್ಞಾನದ ಮೂಲಕ ಕೆಲವು ನಿರ್ದಿಷ್ಟ ಉದ್ದೇಶಗಳನ್ನು ಈಡೇರಿಸುವುದಾಗಿದೆ.

೨. ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಕ್ಷೇತ್ರಗಳ ವಿಸ್ತರಣೆ, ಪರಿಕಲ್ಪನೆಗಳ ಅಂಶ, ವಿನ್ಯಾಸ ಮತ್ತು ಆವಿಷ್ಕಾರಗಳೇ ಅಭಿವೃದ್ಧಿ.

೩. ಸಂಕೀರ್ಣವಾದ ಸಂಸ್ಕೃತಿ ಮತ್ತು ಪರಿಸರಾತ್ಮಕ ಸಂಗತಿಗಳು ಮತ್ತು ಅವುಗಳ ಅಂತರಕ್ರಿಯೆಗಳ ಅಧಾರದ ಮೇಲೆ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯೇ ಅಭಿವೃದ್ಧಿ.

೪. ಭೂಮಿಯ ಅಭಿವೃದ್ಧಿ, ಉಪವಿಭಾಗಗಳ ರಚನೆ, ರಸ್ತೆಗಳು ಮತ್ತು ಅವಕ್ಕೆ ಪೂರಕವಾದ ಉಪಯುಕ್ತತೆಯ ಸಾಧನಗಳು ಅಂದರೆ ವ್ಯವಹಾರದ ದೃಷ್ಟಿಯಿಂದ ನೋಡುವುದೇ ಅಭಿವೃದ್ಧಿ. ಈ ಅಧ್ಯಯನವನ್ನು ಬಹುಹಿನ್ನೆಲೆಯುಳ್ಳ ದೃಷ್ಟಿಯಲ್ಲಿ ನೋಡಬಹುದಾಗಿದೆ.[೧೮] **(ವಿಕಿಪೀಡಿಯಾ, ಇಂಟರ್‌ನೆಟ್)**. ಹೀಗೆ ವಿಭಿನ್ನ ರೀತಿಯ ಅಭಿವೃದ್ಧಿ ಕುರಿತ ಅಧ್ಯಯನಗಳು, ವ್ಯಾಖ್ಯಾನಗಳನ್ನು ನಿರ್ವಚಿಸಿರುವುದನ್ನು ನಾವು ಗಮನಿಸಬಹುದು ಮತ್ತು ಸಮಯ ಮತ್ತು ಪ್ರದೇಶಗಳ ಹಿನ್ನಲೆಯಿಂದ ಅರ್ಥ ಮಾಡಿಕೊಳ್ಳಬಹುದು ಎಂಬ ವಿಚಾರಗಳನ್ನು ಅಧ್ಯಯನ ದಿಂದ ಕಂಡುಕೊಳ್ಳಲಾಗಿದೆ.

ಅಭಿವೃದ್ಧಿ ಎಂದರೆ ಬಡತನ ನಿವಾರಣೆ, ಸಮಾನತೆ, ಶೋಷಣೆರಹಿತ ಸಮಾಜ ಮತ್ತು ಒಳ್ಳೆಯ ಆಡಳಿತ ಎನ್ನುವಂತಾಗಿದೆ. ತೊಂಬತ್ತರ ನಂತರ ಜಾರಿಗೆ ಬಂದ ಅಭಿವೃದ್ಧಿ ನೀತಿಗಳ ಮೇಲೆ ಕಣ್ಣಾಡಿಸಿದರೆ ರಾಜಕೀಯಕ್ಕೂ ಮತ್ತು ಅಭಿವೃದ್ಧಿಗೂ ವ್ಯತ್ಯಾಸ ಕಾಣಬಹುದು. ಪ್ರಜಾಪ್ರಭುತ್ವದ

ಬಗ್ಗೆ ವಿಶ್ಲೇಷಣೆ ಅದರಲ್ಲೂ ನಮ್ಮ ದೇಶ ಮತ್ತು ಶ್ರೀಮಂತ ದೇಶಗಳ ಭಿನ್ನತೆಗಳನ್ನು ಗುರುತಿಸಿರುವುದು. ಪ್ರತಿ ಸಮುದಾಯದ ತಳಸ್ತರದ ಜನರ ಆರ್ಥಿಕ ಸ್ಥಿತಿ ಹೆಚ್ಚು ಕಡಿಮೆ ಒಂದೇ ಇದೆ. ಜಾತಿ ಧರ್ಮಗಳು ಇವರಿಗೆ ಪ್ರತ್ಯೇಕತೆಯನ್ನು ನೀಡುತ್ತಿವೆ. ಈ ವ್ಯವಸ್ಥೆಯನ್ನು ಪೋಷಿಸುವ ಮತ್ತು ಬೆಳೆಸುವ ಕೆಲಸವನ್ನು ಇವರದ್ದೇ ಮೇಲ್ವರ್ಗಗಳು ಮತ್ತು ನಮ್ಮ ಸಂಸ್ಕೃತಿ ಕಲ್ಪನೆಗಳು ಮಾಡುತ್ತಿವೆ. ಗುರುತಿನ ರಾಜಕೀಯ ತಳಸ್ತರದ ಜನರನ್ನು ಚುನಾವಣಾ ರಾಜಕೀಯಕ್ಕೆ ಎಳೆದು ತರುತ್ತಿದೆ. ತಳಸ್ತರದ ಜನರ ಪಾಲುಗೊಳ್ಳುವಿಕೆಯ ಮೂಲಕ ನಮ್ಮ ಪ್ರಜಾಪ್ರಭುತ್ವಕ್ಕೆ ಲೆಜಿಟಮೆಸಿ ನೀಡುತ್ತಿವೆ. ಇದೇ ಪ್ರಜಾಪ್ರಭುತ್ವ ತಳಸ್ತರದ ಜನರ ಆಸಕ್ತಿಗಳಿಗೆ ವಿಶೇಷ ಒತ್ತು ನೀಡದಿರುವ ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿಯನ್ನು ಜಾರಿಗೆ ತರುತ್ತಿದೆ. ಹೀಗೆ ಗುರುತಿನ ರಾಜಕಾರಣ ತಮ್ಮ ಆಸಕ್ತಿಗಳಿಗೆ ವಿರುದ್ಧವಾದ ಪಾಲಿಸಿಗಳನ್ನು ತರುವ ಸರಕಾರಗಳ ರಚನೆಯಲ್ಲಿ ತಳಸ್ತರದ ಜನರು ಪಾಲ್ಗೊಳ್ಳುವಂತೆ ಮಾಡುತ್ತಿದೆ. ಇದೇ ರೀತಿ ಮಹಿಳೆಯರಿಗೂ ಸಹ ಲಿಂಗತಾರತಮ್ಯ ಮಾಡಿದೆ. ಸಾಂಸ್ಕೃತಿಕ ರಾಜಕೀಯದಲ್ಲಿ ತಮ್ಮ ಸ್ಥಾನಮಾನ ಹಾಗೂ ಗುರುತಿನ ಬಗ್ಗೆ ಕೀಳರಿಮೆ ಹೊಂದಿ ಅತಿ ಕಡಿಮೆ ಬೆಲೆಗೆ ತಮ್ಮ ಶ್ರಮವನ್ನು ವಿನಿಮಯ ಮಾಡಿ ಕೊಳ್ಳಲು ರೆಡಿಯಾಗುವ ತಳಸ್ಥರದ ಜನರನ್ನು ಸಾಂಸ್ಕೃತಿಕ ರಾಜಕೀಯ ಸೃಷ್ಟಿಸುತ್ತಿದೆ. ವ್ಯಕ್ತಿಯೊಬ್ಬರ ದಿನನಿತ್ಯದ ಬದುಕಿನ ವ್ಯವಹಾರಗಳಿಗೆ ಅರ್ಥ, ಮೌಲ್ಯಗಳನ್ನು ತುಂಬುವ ಕೆಲಸವನ್ನು ಸಂಸ್ಕೃತಿ ಮಾಡುತ್ತದೆ. ವ್ಯಕ್ತಿ/ಸಮುದಾಯಗಳ ಗುರುತನ್ನು, ಮಾನ ಅಪಮಾನವನ್ನು ಸಾಂಸ್ಕೃತಿಕ ರಾಜಕೀಯ ಪ್ರಭಾವಿಸುತ್ತದೆ. ಅಂದರೆ ಮನುಷ್ಯರ ನಡುವೆ ಕಂದರ ಮತ್ತು ಏಣಿಶ್ರೇಣಿಯನ್ನು ನಿರ್ಮಾಣ ಮಾಡಿವೆ. ಅಭಿವೃದ್ಧಿ ಉಳ್ಳವರ ಆಸಕ್ತಿಗೆ ಅನುಗುಣವಾಗಿ ಪ್ರತಿಪಾದಿಸಲಾಗುತ್ತಿದೆ, ಹಾಗೆಯೇ ಮುಂದುವರಿಯುವಂತೆ ಕಟ್ಟುನಿಟ್ಟಾಗಿ ನೋಡಿಕೊಳ್ಳಲಾಗುತ್ತಿದೆ"**(ಚಂದ್ರ ಪೂಜಾರಿ ಎಂ., ೨೦೧೪)** ಒಟ್ಟಿನಲ್ಲಿ ಈ ಲೇಖನದಲ್ಲಿ ಅಭಿವೃದ್ಧಿ ಮತ್ತು ರಾಜಕೀಯ ಪರಿಕಲ್ಪನೆಗಳು ಸಮಯಕ್ಕೆ ತಕ್ಕಂತೆ ತಮ್ಮ ರೂಪಗಳನ್ನು ಬದಲಿಸುತ್ತಾ ಸಮಾಜದ ಅಂಚಿನಲ್ಲಿರುವವರ ಕಡೆ ಗಮನ ಹರಿಸದೇ ಕೆಲವು ಕಲ್ಯಾಣ ಕಾರ್ಯಕ್ರಮಗಳನ್ನು ಮಾಡುವುದರ ಮೂಲಕ ಬಹುಜನರ ಬಾಯಿಯನ್ನು ಮುಚ್ಚಿಸುವ ಪ್ರಯತ್ನಗಳು ನಡೆಯುತ್ತಿವೆ. ಪ್ರಸ್ತುತದ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಭಿವೃದ್ಧಿ ಎನ್ನುವ ಕನಸು ದೇವದಾಸಿ ಮಹಿಳೆಯರಿಗೆ ಮರೀಚಿಕೆಯಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಒಟ್ಟಿನಲ್ಲಿ ಹಿಂದಿನಿಂದಲೂ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಕೇಂದ್ರಸ್ಥಾನ ಪಡೆದಿದ್ದ, ಆರ್ಥಿಕ ಅಂಶಗಳನ್ನು ಕಡೆಗಣಿಸದೇ ಅದರೊಂದಿಗೆ ಸಾಮಾಜಿಕ ಅಂಶಗಳು ಸಹ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತವೆ. ಎನ್ನುವುದರ ಮೂಲಕ ಅಭಿವೃದ್ಧಿಯ ಅರ್ಥವ್ಯಾಪ್ತಿಯನ್ನು ವಿಶಾಲ ಮತ್ತು ವಿಸ್ತೃತಗೊಳಿಸಿದ ಕೀರ್ತಿ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಗೆ ಸಲ್ಲುತ್ತದೆ. ಇಲ್ಲಿಯವರೆಗೂ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮರೆಮಾಚಲಾಗಿದ್ದ ಮಹಿಳೆ, ಅವರ ಕಾರ್ಯಭಾರಕ್ಕೆ ಈ ವಿಚಾರ ಪ್ರಣಾಳಿಕೆ ಹೆಚ್ಚಿನ ಸ್ಥಾನಮಾನ ನೀಡಿದೆ. ಮಹಿಳೆಯರ, ಮಕ್ಕಳ ಶ್ರೇಯಸ್ಸಿನ ಜೊತೆಯಲ್ಲಿ ಇಂದಿನ ಜನಾಂಗದೊಂದಿಗೆ, ಮುಂದಿನ ಜನಾಂಗದ ಶ್ರೇಯಸ್ಸನ್ನು ಸಹ ಬಯಸುವ

ಈ ವಿಚಾರ ಪ್ರಣಾಳಿಕೆಯು ೨೧ನೇ ಶತಮಾನದ ಅನ್ವೇಷಣೆಗಳಲ್ಲಿ, ಪ್ರಮುಖ ಬೌದ್ಧಿಕ ಅನ್ವೇಷಣೆ ಯೆಂದೇ ಹೇಳಬಹುದಾಗಿದೆ. ಹೀಗೆ ಅಭಿವೃದ್ಧಿಯನ್ನು ಪ್ರಸ್ತುತದ ಅಧ್ಯಯನಕ್ಕೆ ಅಗತ್ಯವಿರುವಷ್ಟು ಮಾತ್ರ ಗಣನೆಗೆ ತೆಗೆದುಕೊಂಡಿದೆ.

## ೨.೨. ಮಹಿಳೆ, ದಲಿತ ಮಹಿಳೆಯರ ಕುರಿತ ಅಧ್ಯಯನಗಳು

ಈ ಅಧ್ಯಯನದಲ್ಲಿ ದೇವದಾಸಿಯ ವಿಚಾರ ಪ್ರಧಾನವಾಗಿರುವುದರಿಂದ ಅದಕ್ಕೆ ಹಿನ್ನೆಲೆಯಾಗಿ ಮಹಿಳೆಯ ಸಂಕ್ಷಿಪ್ತ ವಿವರಣೆಯನ್ನು ಪ್ರಸ್ತುತ ಅಧ್ಯಯನಕ್ಕೆ ಬೇಕಾಗುವಷ್ಟು ಮಾತ್ರ ಬಳಸಲಾಗಿದೆ. ಮಹಿಳೆಯೆರೆಂದರೆ ಪ್ರಪಂಚಾದ್ಯಂತ ಎರಡನೇ ದರ್ಜೆಯ ಸ್ಥಾನಮಾನವನ್ನು ಅಲಂಕರಿಸಿದ್ದಾರೆ ಎನ್ನುವುದು ಸಾರ್ವತ್ರಿಕ ಸತ್ಯ ಮತ್ತು ಇತ್ತೀಚಿನ ಬೆಳವಣಿಗೆಗಳನ್ನು ಗಮನಿಸಿದಾಗ ಅಂತಹ ಪಡಿಯಚ್ಚಿನ ಹುಸಿ ಸತ್ಯವನ್ನು ಸಹ ಹುಸಿಯಾಗಿಸಬಹುದು. ಅದರಲ್ಲೂ ದಲಿತ ಮತ್ತು ದೇವದಾಸಿ ಯರಂತಹ ಸಮುದಾಯವು ವಿಮೋಚನೆಯ ಹಂತಕ್ಕೆ ಬಂದರೆ ಸಾಧ್ಯವಾಗಹಬಹುದು. ಇಲ್ಲಿ ಮಹಿಳೆ ಮತ್ತು ದಲಿತ ಹಾಗೂ ಇವರಿಗೆ ಸಮಾನವಾಗಿರುವ ಇತರೆ ಮಹಿಳೆಯರ ಸ್ಥಿತಿಗತಿಯನ್ನು ಸಹ ಅಧ್ಯಯನದ ಮಿತಿಯನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಲಾಗಿದೆ. ಪ್ರಸ್ತುತದ ಚರ್ಚೆಯಲ್ಲಿ ಸಾಮಾನ್ಯ ಮಹಿಳೆ, ದಲಿತ ಮತ್ತು ಆದಿವಾಸಿ ಮಹಿಳೆ ನಂತರ ಅಧ್ಯಯನದ ಕಥಾವಸ್ತುವಾಗಿರುವ ದೇವದಾಸಿಯರು ಮತ್ತು ಆ ಪದ್ಧತಿಯ ಬಗ್ಗೆ ಹೆಚ್ಚಿನ ಚರ್ಚೆಯನ್ನು ವಿಮರ್ಶಾತ್ಮಕವಾಗಿ ಮತ್ತು ಸೂಕ್ಷ್ಮತೆಯಿಂದ ಅಧ್ಯಯನಕ್ಕೆ ರೂಪ ಕೊಡುವ ಜವಾಬ್ದಾರಿಯನ್ನು ಹೊತ್ತು ಈ ಅಧ್ಯಾಯದಲ್ಲಿ ಎಲ್ಲಾ ವಿಚಾರಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ.



### ೨.೨.೧. ಮಹಿಳೆಯರ ಮತ್ತು ದಲಿತ ಮಹಿಳೆಯರ ಕುರಿತ ಚರ್ಚೆಗಳು

ಮಹಿಳೆಯ ಅಸ್ಮಿತೆಯೆಂಬುದು ಸಾರ್ವತ್ರಿಕವಾಗಿದೆ ಎನ್ನುವುದನ್ನು ಸಹ ಇತ್ತೀಚೆಗೆ ವಿಮರ್ಶಿಸ ಲಾಗುತ್ತಿದೆ. ಮಹಿಳೆಯರೆಲ್ಲರಿಗೂ ಹೊಂದುವ ಸಮಾನ ನೆಲೆಯೊಂದರ ಹುಡುಕಾಟವು ಭಿನ್ನತೆಗಳನ್ನು ನಿರ್ಲಕ್ಷಿಸಿದೆಯೆಂಬ ಅಂಶದೆಡೆಗೆ ಗಮನ ಸೆಳೆಯಲಾಗುತ್ತಿದೆ. ಪ್ರತಿಯೊಬ್ಬ ಮಹಿಳೆಯ ಬದುಕಿನ ಪರಿಸ್ಥಿತಿಯು ಮತ್ತು ಕಾರ್ಯಚಟುವಟಿಕೆಗಳು ಪಡೆದುಕೊಳ್ಳುವ ಆರ್ಥಗಳು ಮೂಲಭೂತವಾಗಿ ಭಿನ್ನವಾಗಿರುವಾಗ ಅಸ್ಮಿತೆ ಒಂದೇ ಆಗಿರಲು ಸಾಧ್ಯವಿಲ್ಲ ಎನ್ನುವ ಅಂಶದ ಜೊತೆಗೆ ಎಲ್ಲಾ ಸಮಾಜದಲ್ಲೂ ಮಹಿಳೆಯು ಪುರುಷರಿಗೆ ಅಧೀನಳು ಹಾಗೂ ಮಹಿಳೆಯು ಅನುಭವಿಸುವ ಕಷ್ಟ ಸುಖಗಳೆಲ್ಲವೂ ಸಹ ಒಂದೇ ರೀತಿ ಇರುವುದರಿಂದ ಸಹೋದರಿತ್ವವೊಂದು ಅಸ್ತಿತ್ವದಲ್ಲಿರುತ್ತದೆ. ಹಾಗೆಯೇ ಮಹಿಳೆಯರ ಬಗ್ಗೆ ಮಹಿಳೆಯರೇ ಬರೆಯುವುದು ಸಹಜವೆಂದು ಪರಿಗಣಿಸಲಾಗಿದೆ. ಭಾರತದ ಸಾಂಪ್ರದಾಯಿಕ ಜಾತಿವ್ಯವಸ್ಥೆಯಲ್ಲಿ ಕೆಳಜಾತಿಯ ಮಹಿಳೆಯರು ಮೇಲ್ಜಾತಿಯ ಪುರುಷರಿಂದ ಇಂದಿಗೂ ಲೈಂಗಿಕ ಶೋಷಣೆಗೆ ಒಳಗಾಗುತ್ತಿದ್ದಾರೆ. ವಿಪರ್ಯಾಸವೆಂದರೆ ಪುರುಷರು ತಮ್ಮ ಜಾತಿಯ ಮಹಿಳೆಯರ ಲೈಂಗಿಕ ಪಾವಿತ್ರ್ಯವನ್ನು ಜಾಗರೂಕತೆಯಿಂದ ಕಾಯುತ್ತಾರೆ. ಹಾಗೆಯೇ ಇಡೀ ಸಮಾಜದ ವ್ಯವಸ್ಥೆ ಮೇಲ್ಜಾತಿ ಮತ್ತು ಮೇಲ್ವರ್ಗದವರನ್ನು ಅವಲಂಬಿಸಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮಹಿಳೆಯರಿಗೂ ಸಹ ಒತ್ತಾಯಪೂರ್ವಕವಾಗಿ ಕೆಲವು ವೃತ್ತಿಗಳನ್ನು ಸೃಷ್ಟಿಸಿದರು.

ಉದಾ: ದೇವದಾಸಿ ಮುಂತಾದ ವೃತ್ತಿಗಳು. ಇಂತಹ ಅಧ್ಯಯನದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ವಿವಿಧ ಆಯಾಮಗಳ ಮೂಲಕ ಮಾಡುವಂತೆ ಸಲಹೆ ಸೂಚನೆಗಳನ್ನು ನೀಡುತ್ತದೆ. ಗಂಡು ಹೆಣ್ಣಿನ ನಡುವಿನ ವ್ಯತ್ಯಾಸಗಳನ್ನು ವಿವರಿಸಲು ಆನೇಕ ದೃಷ್ಟಿಕೋನಗಳಿವೆ. ಅವು ಲಿಂಗ ಮತ್ತು ಸಾಮಾಜಿಕ ಲಿಂಗತ್ವ ನಡುವಿನ ವ್ಯತ್ಯಾಸವನ್ನು ಮತ್ತು ಲಿಂಗ ಅಸಮಾನತೆಯನ್ನು ಪರಿಶೀಲಿಸುತ್ತದೆ. ಅಂತಹ ಮೂರು ದೃಷ್ಟಿಕೋನಗಳೆಂದರೆ ಹೆಣ್ಣು ಮತ್ತು ಗಂಡಿನ ನಡುವಿನ ಶಾರೀರಿಕ ಮತ್ತು ವರ್ತನೆಯಲ್ಲಿನ ವ್ಯತ್ಯಾಸಕ್ಕೆ ಜೈವಿಕ ಅಂಶಗಳೇ ಅಧಾರವೆಂದು ಗ್ರಹಿಸುವುದು. ಲಿಂಗವನ್ನು ಜೈವಿಕವೆಂದು ಗ್ರಹಿಸಿ ಸಾಮಾಜಿಕ ಲಿಂಗತ್ವವನ್ನು ಸಾಮಾಜಿಕ ನಿರ್ಮಿತಿ ಎಂದು ಗ್ರಹಿಸುವುದು ಮತ್ತು ಲಿಂಗ ಮತ್ತು ಸಾಮಾಜಿಕ ಲಿಂಗತ್ವಗಳೆರಡು ಸಂಪೂರ್ಣವಾಗಿ ಸಾಮಾಜಿಕ ನಿರ್ಮಿತಿಯೆಂದು ಗ್ರಹಿಸುವುದು. ಹೀಗೆ ಲಿಂಗ ಮತ್ತು ಸಾಮಾಜಿಕ ಲಿಂಗತ್ವದ ವಿಭಿನ್ನತೆಯನ್ನು ಹುಡುಕುವ ಅವಶ್ಯಕತೆಯಿದೆ.

ಸ್ತ್ರೀವಾದದ ಉಗಮ, ನಿರ್ವಚನೆ, ಪರಿಕಲ್ಪನೆಗಳನ್ನು ವಿವರಿಸಲು ಈ ಚರ್ಚೆಯಲ್ಲಿ ಪ್ರಯತ್ನಿಸಲಾಗಿದೆ. ಸ್ತ್ರೀವಾದ ಎಂಬ ಪರಿಕಲ್ಪನೆಯು ತುಂಬಾ ಸಂಕೀರ್ಣವಾಗಿದೆ. ಕಾಲ, ಸಂದರ್ಭ, ಪ್ರದೇಶಗಳಿಗೆ ಅನುಗುಣವಾಗಿ ಸ್ತ್ರೀವಾದದ ಅಯಾಮಗಳು ವಿವರಿಸಲ್ಪಡುತ್ತವೆ ಮತ್ತು ವಿಸ್ತರಿಸಲ್ಪಡುತ್ತವೆ. ಒಟ್ಟಾರೆಯಾಗಿ ಸ್ತ್ರೀವಾದವೆಂದರೆ ಮಹಿಳೆ ತನ್ನ ಸಮಾನತೆ ಮತ್ತು ಘನತೆ ಕಾಪಾಡಿಕೊಳ್ಳುವುದು. ಅದಕ್ಕಾಗಿ ತನ್ನ ಬದುಕು ಮತ್ತು ದೇಹಕ್ಕೆ ಸಂಬಂಧಿಸಿದಂತೆ, ಮನೆಯ ಒಳಗೆ, ಹೊರಗೆ ತಾನೇ ನಿರ್ಧಾರ ಕೈಗೊಳ್ಳುವ ಸ್ವಾತಂತ್ರ್ಯವನ್ನು ಪಡೆಯಲು ನಡೆಸುವ ಹೋರಾಟದ ಪ್ರಕ್ರಿಯೆಯಾಗಿದೆ.[೨೦] **(ಸುಧಾ ಸೀತಾರಾಮನ್)** ಸಾಮಾಜಿಕವಾಗಿ ಅವಕಾಶವಂಚಿತ ಮತ್ತು ಹಿಂದುಳಿದ ಜಾತಿಗೆ ಸೇರಿದ ಕುಟುಂಬದ ಮಹಿಳೆಯರ ಪಾಡು ಅತ್ಯಂತ ನಿಕೃಷ್ಟವಾಗಿದೆ ಎಂದು ಸೆನ್‌ರ ಅಧ್ಯಯನಗಳಲ್ಲಿ ಗುರುತಿಸಬಹುದು. ಸಮಾಜೀಕರಣದ ಪ್ರಕ್ರಿಯೆಯು ಮಹಿಳೆಯರನ್ನು ಅಧೀನರನ್ನಾಗಿಯೂ, ಅಬಲೆಯರನ್ನಾಗಿಯೂ, ಅಸಹಾಯಕರನ್ನಾಗಿಯೂ ಮಾಡಿಬಿಡುತ್ತದೆ. ಅಮರ್ತ್ಯ ಸೆನ್ ಪ್ರಕಾರ ಸಮಾಜ ಅಧ್ಯಯನದ ಜ್ಞಾನ ಶಿಸ್ತುಗಳು ಮಹಿಳೆಯರನ್ನು ರೋಗಿಯ ತರಹ ಮಾತ್ರ ನೋಡುತ್ತಿವೆ **(ಟಿ.ಆರ್. ಚಂದ್ರಶೇಖರ, ೧೯೯೬)**. ಇತ್ತೀಚಿನ ವರ್ಷಗಳಲ್ಲಿ ಮಹಿಳಾ ಸಬಲೀಕರಣ ಮಾತು ಮತ್ತೆ ಮತ್ತೆ ಕೇಳಿಬರುತ್ತಿದೆ. ೭೦ರ ದಶಕದಲ್ಲಿ ಸ್ತ್ರೀವಾದದ ಅಲೆ ಬೀಸತೊಡಗಿದಾಗ ಆರ್ಥಿಕ ಸ್ವಾತಂತ್ರ್ಯವೇ ಮಹಿಳಾ ಸಮಾನತೆಯ ಮತ್ತು ಸಬಲೀಕರಣದ ಪ್ರಮುಖ ಅಸ್ತ್ರ ಎಂಬಂತೆ ಬಿಂಬಿಸಲಾಗಿತ್ತು. ೧೯೯೫ರ ಯು ಎನ್.ಡಿ.ಪಿ. ಮಾನವ ಅಭಿವೃದ್ಧಿ ವರದಿಯಲ್ಲಿ ಮಹಿಳೆಯರ ಕೆಲವು ಸ್ಥಿತಿಗತಿಗಳನ್ನು ಸೂಚಿಸಿದ್ದಾರೆ: ಮಹಿಳೆಯರು ಶೇಕಡ ೭೦ಕ್ಕಿಂತ ಅಧಿಕವಾಗಿ ಬಡತನದಲ್ಲಿದ್ದಾರೆ. ೯೦೦ ಮಿಲಿಯನ್ ಸಂಖ್ಯೆಯಷ್ಟು ಅನಕ್ಷರಸ್ಥರಾಗಿದ್ದಾರೆ. ಗಂಡಸರಿಗಿಂತ ಹೆಂಗಸರು ಹೆಚ್ಚು ಅಪೌಷ್ಟಿಕತೆಯಿಂದ ನರಳುತ್ತಾ ವಿವಿಧ ರೋಗಗಳಿಗೆ ಗುರಿಯಾಗುತ್ತಿದ್ದಾರೆ, ಹಿಂದುಳಿದ ದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಮರಣದ ಪ್ರಮಾಣವು ಹೆಚ್ಚಾಗಿದೆ. ಗಂಡಸರಿಗಿಂತ ೩೦–೪೦ರಷ್ಟು ಕಡಿಮೆ ಕೂಲಿಯನ್ನು

ಪಡೆಯುತ್ತಾರೆ. ಹೆಂಗಸರು ಕಡಿಮೆ ಸಂಖ್ಯೆಯಲ್ಲಿ ಉನ್ನತ ಮತ್ತು ಆಡಳಿತಾತ್ಮಕ ಹುದ್ದೆಗಳಲ್ಲಿದ್ದಾರೆ ಮತ್ತು ರಾಜಕೀಯ ಪ್ರಾತಿನಿಧ್ಯದಲ್ಲೂ ಸಹ ತುಂಬಾ ಕಡಿಮೆ ಸಂಖ್ಯೆಯಲ್ಲಿದ್ದಾರೆ.

ಭಾರತ ಕಂಡ ಯಾವುದೇ ಸಾಮಾಜಿಕ, ಧಾರ್ಮಿಕ ಚಳುವಳಿಗಳು, ಚಳುವಳಿಯ ನಾಯಕರು ಹೆಣ್ಣಿಗೆ ಸಂಬಂಧಿಸಿದ ಹಾಗೆ ಇರುವ ಸಮಸ್ಯೆಗಳನ್ನು ಸರಿಯಾಗಿ ಗ್ರಹಿಸಿದಂತೆ ಕಾಣಿಸುವುದಿಲ್ಲ. ಅಂದಂದಿನ ಕಾಲದ ಒಳಗಡೆ ಹೆಣ್ಣನ್ನು ಇಟ್ಟು ಅವಳ ತತ್‌ಕ್ಷಣದ ಸಮಸ್ಯೆಗಳ ಬಗ್ಗೆ ಆಲೋಚಿಸಿ ಸುಧಾರಣೆ ತರಬಯಸಿದರೆ ವಿನಾ ಬದಲಾವಣೆಗೆ ಒತ್ತುಕೊಟ್ಟಿಲ್ಲ. ಹೆಣ್ಣನ್ನು ಕುಟುಂಬ ನೆಲೆಯಲ್ಲಿ ಆಸ್ತಿಯ ಭಾಗವಾಗಿಯೇ ನೋಡುವ ಒತ್ತಡಗಳನ್ನು ಮೀರುವ ಸಾಧ್ಯತೆಗಳೇಕೆ ಚರಿತ್ರೆಯಲ್ಲಿ ಕಾಣದೇ ಹೋದವು ಎಂಬುದರ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸಬೇಕಾಗಿದೆ. ಬುದ್ಧ, ಬಸವಣ್ಣನ ನಂತರ ಬಂದ ಶಂಕರಾಚಾರ್ಯರು ಹೆಣ್ಣನ್ನು ನರಕಕ್ಕೆ ದಾರಿ ಎಂದೇ ಕರೆದಿರುವುದರ ಹಿಂದೆ ಕೆಲಸ ಮಾಡಿದ ಮನಸ್ಸಿನ ಸೈದ್ಧಾಂತಿಕ ನೆಲೆಯನ್ನು ಕಂಡುಹಿಡಿಯಬೇಕಾಗಿದೆ. ಗಾಂಧೀಜಿಯಲ್ಲಿ ಸನಾತನ ಸಂಸ್ಕೃತಿಯ ಚೌಕಟ್ಟಿನೊಳಗಿರುವ ಹೆಣ್ಣಿನ ಬಗ್ಗೆ ಗೌರವಾದರಗಳಿದ್ದವೇ ಹೊರತು ಚೌಕಟ್ಟಿನಾಚೆಗೆ ಬದುಕಲು ಇಚ್ಛಿಸುವ ಮಹಿಳೆಯರ ಕುರಿತ ಸದಭಿಪ್ರಾಯವಿರಲಿಲ್ಲ. ಹಾಗೆ ನೋಡಿದರೆ ಜ್ಯೋತಿಬಾ ಫುಲೆ ಮತ್ತು ಪೆರಿಯಾರ್ ಅವರ ದಿಟ್ಟ ನಿಲುವು ಮತ್ತು ಸ್ಪಷ್ಟವಾದ ವಿಚಾರಗಳು ಮಹಿಳೆಯ ಬದುಕಿನ ಬದಲಾವಣೆಯ ದಿಕ್ಕು ದೆಸೆಗಳನ್ನು ವೈಚಾರಿಕವಾಗಿಯೇ ಗುರುತಿಸಿವೆ. ನಂತರದಲ್ಲಿ ಬಂದ ಮಾನವತಾವಾದಿ ಅಂಬೇಡ್ಕರ್ ಮಹಿಳೆಯರ ಬಗ್ಗೆ ಕಾನೂನು ಸಮ್ಮತಗೊಳಿಸುವಲ್ಲಿ ಅವರ ದಿಟ್ಟ ನಿಲುವಿಗೆ ಅನುಗುಣವಾದ ಫಲ ಸಿಗಲಿಲ್ಲ. ಇದಕ್ಕೆ ಕಾರಣ ಹುಡುಕುತ್ತಾ ಹೋದರೆ ಮನುವಿನ ಮೂಲವೇ ಕೈಗೆ ಸಿಗುತ್ತದೆ.[೨೧] **(ಪ್ರೊ. ಮಲ್ಲಿಕಾ ಘಂಟಿ, ೨೦೦೮)** ಇಲ್ಲಿ ನನ್ನ ವೈಯಕ್ತಿಕ ಅಭಿಪ್ರಾಯವೆಂದರೆ ಆಗಿನ ಕಾಲಘಟ್ಟದ ಸಂಕೀರ್ಣತೆಗಳನ್ನು ಮತ್ತು ಪ್ರಸ್ತುತದ ಸಮಸ್ಯೆಗಳನ್ನು ಅವಲೋಕಿಸಿದಾಗ ಸಮಸ್ಯೆಗಳ ಸ್ವರೂಪದಲ್ಲಿ ಬದಲಾವಣೆಗಳಾಗಿವೆ ಹಾಗೂ ಮಾರ್ಪಾಡುಗಳು ಸಹ ಆಗಿವೆ. ಮೇಲಿನ ಚರ್ಚೆಯೂ ಸಹ ಮಹಿಳೆಯರ ಮೇಲಿನ ಚರ್ಚೆಯನ್ನು ವಸ್ತುನಿಷ್ಠತೆಯಿಂದ ನೋಡುವುದಾಗಿದೆ.

ಮಹಿಳೆ ಪುರುಷನ ನಡುವೆ ತಾರತಮ್ಯ ಹುಟ್ಟು ಹಾಕಿದಂದಿನಿಂದ ಇಲ್ಲಿಯವರೆಗೂ ಉತ್ಪಾದನಾ ಸಂಬಂಧ ಮತ್ತು ಉತ್ಪಾದನೆಯ ಮೇಲಿನ ಹಿಡಿತದ ಹಿನ್ನೆಲೆಯಲ್ಲಿ ಸೃಷ್ಟಿಸಲ್ಪಟ್ಟ ಈ ಭೇದದ ನೀತಿಯ ಬೇರು ಖಾಸಗಿ ಆಸ್ತಿಯ ಉಗಮದೊಂದಿಗೆ ತಳುಕುಹಾಕಿಕೊಂಡಿದೆ. ಮನುಷ್ಯ ಒಂದೆಡೆ ನೆಲೆಗೊಂಡು ಆಸ್ತಿಯ ಮೇಲಿನ ಒಡೆತನ ಹೊಂದಿ ಮಹಿಳೆಯನ್ನು ಸಾಮಾಜಿಕ, ಆರ್ಥಿಕ ಸಂಬಂಧದಿಂದ ವಿಮುಖಗೊಳಿಸಿ ಅವಳನ್ನು ಕೇವಲ ಮನೆಯ ಕೆಲಸಕ್ಕೆ ಸೀಮಿತಗೊಳಿಸಿದನು. ಸಂಪತ್ತಿನಂತೆ ಮಹಿಳೆಯನ್ನು ಖಾಸಗಿ ಆಸ್ತಿಯಾಗಿಸಲಾಯಿತು. ಅಬಲೆಯನ್ನಾಗಿಸಿತು. ಧಾರ್ಮಿಕ ವಲಯದಲ್ಲಿ ಮಾಯೆ ಎಂದರು. ಸಾಮಾಜಿಕ ಸಂದರ್ಭದಲ್ಲಿ ಮಕ್ಕಳು ಹೆರುವ ಯಂತ್ರವಾದಳು. ಆರ್ಥಿಕವಾಗಿ ಪರಾಧೀನೆಯಾದಳು. ಸಮಾಜವು ಜಾತಿ, ವರ್ಗ, ವರ್ಣ, ಮತದ ಅಧಾರದಿಂದ

ಹೇಗೆ ವರ್ಗೀಕರಿಸಲ್ಪಟ್ಟಿದೆಯೋ ಹಾಗೇ ಲಿಂಗತಾರತಮ್ಯದಿಂದಲೂ ಒಡೆಯಲ್ಪಟ್ಟಿದೆ. ಭಾರತದಂತಹ ಶ್ರೇಣೀಕೃತ ಮತ್ತು ಸನಾತನ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ಪುರುಷನ ನಡುವೆ ಇರುವ ಎಲ್ಲ ತರಹದ ಜೈವಿಕ ವೈಶಿಷ್ಟಗಳ ಮೇಲೆಯೂ ಪ್ರಹಾರ ಮಾಡಿ ಭೇದ ಹುಟ್ಟಿಸಲಾಗಿದೆ. ಮಹಿಳೆಗೆ ಇರುವ ಗರ್ಭ, ತಿಂಗಳ ಋತುಚಕ್ರ, ಶಾರೀರಿಕ ಸಂರಚನೆ, ಭಿನ್ನವೆನಿಸುವ ಧ್ವನಿ ಹೀಗೆ ಎಲ್ಲಾ ಬಗೆಯ ನೈಸರ್ಗಿಕ ವೈಶಿಷ್ಟ್ಯಗಳು ಅವಳನ್ನು ಮೂಲೆಗುಂಪಾಗಿಸುವ ಅಸ್ತ್ರಗಳಾದವು. ಈ ಎಲ್ಲವುಗಳನ್ನು ಅವಳ ವಿರುದ್ಧವೇ ಬಳಸಲಾಯಿತು[೨೨](ಕೆ. ನೀಲಾ, ೨೦೦೮) ಈ ಚರ್ಚೆಯು ಸಹ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಸಮಾನತೆ ಮತ್ತು ಸ್ವಾತಂತ್ರ್ಯಗಳೆರಡು ಕೈಗೆಟಕದ ಸ್ಥಿತಿಯಲ್ಲಿ ಇರಿಸಲಾಯಿತು. ಪ್ರಸ್ತುತ ಕಾಲಕ್ಕೆ ತುಲನೆ ಮಾಡಿದಾಗಲೂ ಸಹ ಮಹಿಳೆ ಎರಡನೆಯ ಸ್ಥಾನಮಾನ ದಲ್ಲಿದ್ದಾಳೆ ಎಂಬುದು ನಿಸ್ಸಂದೇಹ.

ಮಹಿಳಾ ಭಾಗವಿಸುವಿಕೆ ಮತ್ತು ರಾಜಕೀಯ ಭಾಗವಹಿಸುವಿಕೆ ಪರಿಕಲ್ಪನೆಗಳ ಬಗ್ಗೆ ಸಂಕ್ಷಿಪ್ತವಾಗಿ ನಿರ್ವಚಿಸಿದ್ದಾರೆ. ಮಹಿಳೆ ತಾನು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಪ್ರಕ್ರಿಯೆ. ಉದಾಹರಣೆಗೆ ಯಾವುದೇ ರಾಜಕೀಯ ಪಕ್ಷಗಳ ಸದಸ್ಯತ್ವ, ಪಕ್ಷ ಕಟ್ಟುವುದು, ಚುನಾವಣೆಯಲ್ಲಿ ಸ್ಪರ್ಧಿಸುವುದು ಇತ್ಯಾದಿ... ಶಾಸನ ಸಭೆಯಲ್ಲಿ ಶೇ. ೩೩.೩೩ ಇರಬೇಕೆಂದು ತಮ್ಮ ನಿಲುವುಗಳನ್ನು ಮಹಿಳಾ ಮೀಸಲಾತಿ ಮಸೂದೆ ಜಾರಿ ಕುರಿತ ಚರ್ಚೆಗಳು ಇದಕ್ಕೆ ಸಾಕ್ಷಿ. ಇಲ್ಲಿ ರಾಜಕೀಯ ಭಾಗವಹಿಸುವಿಕೆಯನ್ನು ಮೂರು ಗುಂಪುಗಳಲ್ಲಿ ಗುರುತಿಸಿದ್ದಾರೆ. ಅವು– ಅತಿಯಾದ ಕ್ರಿಯಾಶೀಲತೆ, ಪ್ರಾಸಂಗಿಕ ಕ್ರಿಯಾಶೀಲತೆ ಮತ್ತು ಕ್ರಿಯಾಶೂನ್ಯ ಮಟ್ಟ. ಹಾಗೆ ರಾಜಕೀಯ ಸಮಾಜೀಕರಣ ಪರಿಕಲ್ಪನೆಯನ್ನು ಇಲ್ಲಿ ತಿಳಿಸಿದ್ದಾರೆ. ಆರ್. ಬಾಲು ಅವರು ಹೇಳುವಂತೆ ರಾಜಕೀಯ ಪದ್ಧತಿಯ ಬಗ್ಗೆ ನಂಬಿಕೆಗಳನ್ನು, ಅನಿಸಿಕೆಗಳನ್ನು ಸ್ಥಾಪಿಸಿ, ಬಳಸಿಕೊಳ್ಳುವುದೇ ರಾಜಕೀಯ ಸಮಾಜೀಕರಣ. ಕೊನೆಯಲ್ಲಿ ಅಮರ್ತ್ಯ ಸೆನ್ ಅವರ ಧಾರಣಶಕ್ತಿಯ ಹಾಗೂ ರಾಜಕೀಯ ಸಮಾಜೀಕರಣದ ನಿಯೋಗಗಳ ಹಿನ್ನೆಲೆಯಲ್ಲಿ ಚುನಾಯಿತ ಮಹಿಳೆಯರು ಸಂಖ್ಯಾತ್ಮಕ ವಾಗಿ ರಾಜಕೀಯದಲ್ಲಿ ಪಾಲ್ಗೊಂಡರೂ, ರಾಜಕೀಯ ನೀತಿ ನಿರೂಪಣೆ ಮತ್ತು ನಿರ್ಣಯ ಕೈಗೊಳ್ಳುವಂತಹ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿರುವುದು ಕ್ರಿಯಾಶೂನ್ಯ ಮಟ್ಟದಲ್ಲಿರುವುದು ಕಾಣಿಸುತ್ತದೆ. ಪ್ರಾಸಂಗಿಕ ಕ್ರಿಯಾಶೀಲ ಮಟ್ಟದಲ್ಲಿ ಪಾಲ್ಗೊಳ್ಳುವುದು ಗೋಚರಿಸಿದಂತೆ ಕಂಡುಬಂದರೂ ಕ್ರಿಯಾಶೂನ್ಯ ಹಂತದಲ್ಲಿ ಅಧಿಕವಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ಲಿಂಗ, ಜಾತಿ ಮತ್ತು ವರ್ಗಾಧಾರಿತ ಹಿನ್ನೆಲೆಯಲ್ಲಿ ಸಹ ನೋಡಲಾಗಿದೆ.[೨೩](ಡಾ. ಮೀನಾಕ್ಷಿ, ೨೦೧೦) ಇಂದಿನ ರಾಜಕೀಯ ಸ್ಥಿತಿಯನ್ನು ಮತ್ತು ಮಹಿಳೆಯರ ಸ್ಥಾನಮಾನವನ್ನು ಕಣ್ಣಿಗೆ ರಾಚುವಂತೆ ಅಧ್ಯಯನಕಾರರು ವಿವರಿಸುತ್ತಾ ವಿಮರ್ಶಿಸಿದ್ದಾರೆ. ಸಂಘಟಿತ ಕ್ಷೇತ್ರದಲ್ಲಿ ಹೆಚ್ಚು ಮಹಿಳೆಯರು ಕಂಡುಬರುತ್ತಾರೆ. ಅದರ ಹಿನ್ನೆಲೆಯನ್ನು ನೋಡಿದಾಗ ಮಹಿಳೆಯರಿಗೆ ಶಿಕ್ಷಣ, ಜ್ಞಾನ, ಕೌಶಲ್ಯ ಮುಂತಾದವುಗಳಿಂದ ವಂಚಿತರಾಗಿದ್ದರಿಂದ ಇವರ ಸಂಖ್ಯೆ ಕಡಿಮೆ. ಅದ್ದರಿಂದ ಇದನ್ನು ಮಹಿಳೆಯರಿಗೆ ಮಾನವ ಬಂಡವಾಳ ಕಡಿಮೆಯಿದೆ ಎಂದಿದ್ದಾರೆ. ಅಸಂಘಟಿತ ಕ್ಷೇತ್ರದಲ್ಲಿ ಸ್ತ್ರೀ–ಪುರುಷರು ಹೆಚ್ಚು ಕಡಿಮೆ ಸಮಾನವಾಗಿರುತ್ತಾರೆ. ಆದರೆ

ಕೂಲಿಯ ಮತ್ತು ಸ್ಥಾನಮಾನದ ವ್ಯತ್ಯಾಸಗಳು ಕಂಡುಬರುತ್ತವೆ. ಅದ್ದರಿಂದ ಇದನ್ನು ಬೇಕರ್ ಥಿಯರಿಂದ ಗುರುತಿಸಿದ್ದಾರೆ. ಸಂಘಟಿತ ಕ್ಷೇತ್ರದಲ್ಲಿ ಮಹಿಳೆಯರು ತಾರತಮ್ಯ ಅನುಭವಿಸುತ್ತಾರೆ. ಏಕೆಂದರೆ ಮಹಿಳೆಯರಿಗಿರುವ ಸ್ವಾಭಾವಿಕ ಪ್ರಕ್ರಿಯೆಗಳು ಅವರ ಉನ್ನತ ಅಭಿವೃದ್ಧಿಗೆ ಅಡ್ಡಬರುತ್ತವೆ. ಅವುಗಳಲ್ಲಿ ಸಂತಾನೋತ್ಪತ್ತಿ ಮತ್ತು ಅದಕ್ಕೆ ಸಂಬಂಧಿಸಿದ ಸ್ವಾಭಾವಿಕ ಪ್ರಕ್ರಿಯೆಗಳು, ಮನೆವಾರ್ತೆ ಹಾಗೂ ಇತರೆ ಆದ್ದರಿಂದ ಯಾವ ಕ್ಷೇತ್ರದಲ್ಲಿಯೂ ಸಹ ಅಭಿವೃದ್ಧಿ ಹೊಂದುವಲ್ಲಿ ಅವಳ ದೈಹಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳು ಅಡ್ಡಬರುತ್ತವೆ”(**ಛಾಯಾ ದೇಗಾಂವಕರ್, ೨೦೦೮**) ಇಲ್ಲಿಯೂ ಸಹ ಸಂಘಟಿತ ಮತ್ತು ಅಸಂಘಟಿತ ವಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಮಹಿಳೆಯರು ಸ್ವಾಭಾವಿಕ ಮತ್ತು ಸಾಮಾಜಿಕ ಎಲ್ಲೆಗಳನ್ನು ಮೀರುವಂತಿಲ್ಲ ಎಂದು ತಮ್ಮ ಚರ್ಚೆಯಲ್ಲಿ ಗುರುತಿಸಿದ್ದಾರೆ.

ಸಮಾಜದಲ್ಲಿ ವಿಧವೆಯರು ಸಾಮಾನ್ಯ ಮಹಿಳೆಯರಿಗಿಂತ ದುರ್ಬಲರಾಗಿದ್ದಾರೆ, ಅವರಲ್ಲಿ ತಕ್ಷಣದ ಬದಲಾವಣೆಯಿಂದ ಸಾಮಾಜಿಕ ಮತ್ತು ಆರ್ಥಿಕ ಸ್ಥಿಗತಿಗಳು ಹೇಳಿಕೊಳ್ಳುವಂತಹ ಸ್ಥಿತಿಯಿರುವುದಿಲ್ಲ. ವಿಧವಾವ್ಯವಸ್ಥೆಯು ತುಂಬಾ ಒತ್ತಡದಾಯಕವಾಗಿರುತ್ತದೆ. ಇಂತಹ ಸ್ಥಿತಿಯು ಹಲವು ರೀತಿಯ ಕಳಂಕಗಳು ಸಹ ಬಂಧಿಸಿಕೊಂಡಿರುತ್ತವೆ. ಇದಲ್ಲದೆ ಪುರುಷಪ್ರಧಾನವಾದ ಹಿಂದು ಸಮಾಜವು ವಿಧವೆಯನ್ನು ಸ್ವತಂತ್ರವಾಗಿ ಬದುಕಲು ಬಿಡುವುದಿಲ್ಲ. ಇವರ ಸಾಂಸ್ಕೃತಿಕ ಸ್ಥಿತಿಗತಿಯು ವಿಧವೆಯರನ್ನು ಹೆಚ್ಚಾಗಿ ಜಾತಿ ಮತ್ತು ಧಾರ್ಮಿಕತೆಯ ಕೆಲವು ಕಟ್ಟುನಿಟ್ಟಿನ ನಿಬಂಧನೆ ಮತ್ತು ನಿಯಂತ್ರಣಗಳಿಂದ ಕಟ್ಟಿಹಾಕಿರುತ್ತದೆ. ಭಾವನೆಯ ಹಂತವು ಕಡಿಮೆ ಪ್ರಮಾಣದಲ್ಲಿರುತ್ತದೆ. ಗ್ರಹಿಕೆಯು ತಾವು ತಮ್ಮ ಮನೆ ಮತ್ತು ಮಕ್ಕಳನ್ನು ನೋಡಿಕೊಳ್ಳುವ ಹಾಗೆ ನಿಗದಿಯಾಗಿರುತ್ತದೆ. ಯಾವಾಗಲೂ ತೇಜೋವಧೆಯಿಂದ ಮತ್ತು ಆರ್ಥಿಕ ಅಭದ್ರತೆಯಿಂದ, ಸಾಮಾಜಿಕವಾಗಿ ಕೆಳಹಂತದಲ್ಲಿ ಮತ್ತು ಭಾವನಾತ್ಮಕವಾಗಿ ಬೆಂಬಲವಿಲ್ಲದ ವೈಯಕ್ತಿಕವಾಗಿ ಒಬ್ಬಂಟಿತನದಿಂದ ಜೀವಿಸಬೇಕಾಗುತ್ತದೆ ಹಾಗೂ ಎಲ್ಲಾ ರೀತಿಯಲ್ಲಿ ತುಂಬಾ ಹಿಂದುಳಿದಿದ್ದಾರೆ(**ಶಾಂತಾ ಭಂಗಾರಿ, ೨೦೦೮**). ಈ ಅಧ್ಯಯನದಲ್ಲಿ ಇನ್ನು ಕೆಲವು ಅಂಶಗಳನ್ನು ಗುರುತಿಸಬಹುದಿತ್ತು. ಅವುಗಳೆಂದರೆ; ಸಮಾಜ ಮತ್ತು ಸಮುದಾಯದಲ್ಲಿ ವಿಧವೆಯರ ಮಾನ ಮತ್ತು ಜೀವ ರಕ್ಷಣೆಗಳಿಗೂ ಸಹ ಕಂಟಕವಿರುತ್ತದೆ. ಮನೆಯ ಒಳಗೆ ಮತ್ತು ಹೊರಗೆ ಅಭದ್ರತೆಯಿಂದ ಮತ್ತು ಅಸಹಾಯತೆಯಿಂದ ಬದುಕುವ ಸ್ಥಿತಿಗೆ ಇಡೀ ವ್ಯವಸ್ಥೆ ತಂದೊಡ್ಡುತ್ತದೆ.

ಮಹಿಳೆಯರ ಸ್ಥಾನಮಾನ, ಸಮಾನತೆ ಮತ್ತು ಸ್ವಾತಂತ್ರ್ಯಕ್ಕಾಗಿ ಶತಮಾನಗಳಿಂದಲೂ ಹೊರಾಟ, ಪ್ರತಿಭಟನೆ ನಡೆಯುತ್ತಲೇ ಇವೆ. ಆದರೆ ಮಹಿಳಾ ಸಬಲೀಕರಣ ಪರಿಕಲ್ಪನೆಯನ್ನು ಕಳೆದ ನಾಲ್ಕು ದಶಕಗಳಿಂದ ಮಹಿಳಾ ಚಳುವಳಿಗಳು ಪ್ರಭಾವಯುತವಾಗಿ ಜಾಗೃತಗೊಳಿಸುತ್ತಿವೆ. ಆದರೂ ಸಹ ನಿರ್ಧಾರವನ್ನು ತೆಗೆದುಕೊಳ್ಳುವಂತಹ ಪ್ರತಿಷ್ಠಿತ ಹುದ್ದೆಗಳಾದ ಐ.ಎ.ಎಸ್, ಕೆ.ಎ.ಎಸ್‌ಗಳಲ್ಲಿ ಮಹಿಳೆಯರ ಮತ್ತು ಪುರುಷರ ಭಾಗವಹಿಸುವಿಕೆಯ ಸಂಖ್ಯೆಯಲ್ಲಿ ಇರುವ ಅಂತರವನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ ೧೯೮೫ರಲ್ಲಿ ಐ.ಎ.ಎಸ್. ಸ್ಥಾನಗಳಲ್ಲಿ ೧೮ ಜನ ಮಹಿಳೆಯರಾದರೆ, ೨೩೨೫

ಜನ ಪುರುಷರಿದ್ದಾರೆ. ಅಂದರೆ ಕೇವಲ ಶೇ. ೦೮ರಷ್ಟು ಮಾತ್ರ ಮಹಿಳೆಯರಿದ್ದಾರೆ. ೧೯೯೫ರಲ್ಲಿ ನೋಡಿದರೆ ಐ.ಎ.ಎಸ್.ನಲ್ಲಿ ೩೧೧ ಜನ ಮಹಿಳೆಯರು, ೪೯೬೩ ಜನ ಪುರುಷರು ಅಂದರೆ ಶೇ. ೬೩ರಷ್ಟು ಮಾತ್ರ ಮಹಿಳೆಯರಿದ್ದಾರೆ. ೧೯೯೬ರಲ್ಲಿ ಐ.ಪಿ.ಎಸ್.ನಲ್ಲಿ ೨೮೮೩ ಜನ ಪುರುಷರು, ೬೪ ಜನ ಮಹಿಳೆಯರಿದ್ದಾರೆ. ಅಂದರೆ ಶೇ. ೨೨ ಆ ನಿಟ್ಟಿನಲ್ಲಿ ಸ್ತ್ರೀವಾದಿಗಳ ಪ್ರಯತ್ನವು ಪರಿಣಾಮಕಾರಿಯಾಗದೆ ತಾಯ್ತನದ ವೈಭವೀಕರಣ, ಹಾಗೆಯೇ ತಂದೆತನಕ್ಕೆ ಎರಡನೇ ಸ್ಥಾನ ಕೊಟ್ಟು ಪತ್ನಿತ್ವ ಮತ್ತು ತಾಯ್ತನದ ನಿಗದಿತ ಮಾದರಿಗಳಲ್ಲಿ ಮಾತ್ರ ಸ್ತ್ರೀಯನ್ನು ಕಾಣುವ ವಿಚಾರವನ್ನು ಸ್ತ್ರೀವಾದವು ಅಲ್ಲಗಳೆಯುತ್ತದೆ. ಜೊತೆಗೆ ತಾರತಮ್ಯವಿಲ್ಲದೆ ಜೈವಿಕ ಭಿನ್ನತೆಗಳನ್ನು ಗೌರವಿಸಬೇಕೆಂಬ ತಾತ್ವಿಕವಾದವನ್ನು ಅದು ಮಂಡಿಸುತ್ತದೆ. 'ಹೆಂಗಸಿನ ಬುದ್ಧಿ ಮೊಳಕಾಲಿನ ಕೆಳಗೆ', 'ಸ್ತ್ರೀ ಬದ್ಧ ಪ್ರಳಯಾಂತಕಿ ಮುಂತಾದ ಮಾತುಗಳ ಮೂಲಕ ಸ್ತ್ರೀಯ ಬೌದ್ಧಿಕತೆಯನ್ನು ಅಲ್ಲಗಳೆಯುವುದನ್ನು, ತುಚ್ಛೀಕರಿಸುವುದನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಈ ದ್ವಿಲಿಂಗ ದೃಷ್ಟಿಕೋನವು ಸ್ತ್ರೀ ಪುರುಷರಿಬ್ಬರಲ್ಲೂ ಇರಬೇಕಾದ ಪ್ರಜ್ಞೆ ಎಂದು ಹೇಳುವ ಸ್ತ್ರೀವಾದದ ಅಂತಿಮ ಕಾಳಜಿಯೆಂದರೆ ಮನುಷ್ಯ-ಮನುಷ್ಯರ ನಡುವಿನ ಸಮಾನತೆ. ಆಧುನಿಕ ಅಧ್ಯಯನ, ಆಧುನಿಕ ಚಿಂತನೆಗಳು, ಆಧುನಿಕ ಜೀವನಶೈಲಿ ಮತ್ತು ಬದಲಾದ ಕಾಲಮಾನಗಳು ಮಹಿಳೆಯರನ್ನು ಯೋಚಿಸುವಂತೆ ಮಾಡಿದವು. ಆದರೆ ಮಹಿಳೆಯು ಪುರುಷನಿರ್ಮಿತ ಸಮಾಜದಡಿಯಲ್ಲಿ ಜೀವಿಸುತ್ತಿದ್ದಾಳೆ ಎಂಬ ಭಾವನೆ ಜಾಗೃತಗೊಂಡತೆ ಮಹಿಳಾ ಸಬಲೀಕರಣದ ಕೂಗು ಹೆಚ್ಚೆಚ್ಚು ಸ್ಪಷ್ಟವಾಗತೊಡಗಿತು. ಮಹಿಳೆ ಮತ್ತು ವಿಕ್ರೇಂದ್ರೀಕರಣ ಎಂಬೆರಡು ಅಂಶಗಳ ಮುಖ್ಯ ಉದ್ದೇಶ ಪ್ರಜಾಸತಾತ್ಮಕ ಸಮಾನತೆಯನ್ನು ಸ್ಥಾಪಿಸಿ ಆ ಮೂಲಕ ಶತಮಾನಗಳಿಂದ ಪ್ರಪಂಚದ ಎಲ್ಲಾ ಸಮಾಜಗಳಲ್ಲಿ ಬೇರೂರಿರುವ ಲಿಂಗ, ವರ್ಗ, ಜಾತಿ, ಭಾಷೆ, ಪ್ರದೇಶದಂತಹ ಸಾಮಾಜಿಕ ಭಿನ್ನತೆಯ ರೂಪದಲ್ಲಿ ಮನೆ ಮಾಡಿರುವ ಡಾಮಿನೆಂಟ್ ಸಂಸ್ಕೃತಿಯ ದಾಸ್ಯದ ಪದರುಗಳನ್ನು ನಿರ್ನಾಮವಾಗಿಸುವುದು ಅವುಗಳ ಪ್ರಮುಖ ಅಜೆಂಡವಾಗಿದೆ. ರಾಜಕೀಯದಲ್ಲಿ ಪರಿಣಾಮಕಾರಿಯಾಗಿ ಸಾಧಿಸುವಲ್ಲಿ ಕೆಳಹಂತದ ಅಥವಾ ಸ್ಥಳೀಯ ಮಟ್ಟದ ಸರ್ಕಾರಗಳು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ. ಡಾಮಿನೆಂಟ್ ಸಂಸ್ಕೃತಿ ಎನ್ನುವುದು ಮಹಿಳೆಯರ ಸಂದರ್ಭದಲ್ಲಿ ಪುರುಷಕೇಂದ್ರಿತ ಸಂಸ್ಕೃತಿ ಮತ್ತು ಭಾರತೀಯ ಸಂದರ್ಭದಲ್ಲಿ ಅಧಿಕಾರದಲ್ಲಿ ಕೇಂದ್ರೀಕೃತವಾಗಿರುವ ಪ್ರಾಬಲ್ಯ ಚಿಂತನೆಗಳೆಂದು ಭಾವಿಸಲಾಗಿದೆ. ಮಹಿಳಾ ಸಬಲೀಕರಣದ ಬೆಳೆಯುವಿಕೆಗೆ ಪುಷ್ಟಿಯನ್ನು ಪಡೆದಂತಾಗಿದೆ. ಮಹಿಳಾ ಸಬಲೀಕರಣದ ಸಮಸ್ಯೆ ಕೇವಲ ಅಭಿವೃದ್ಧಿ ಹೊಂದಿದ ಮತ್ತು ಹಿಂದುಳಿದ ರಾಷ್ಟ್ರಗಳ ಸಮಸ್ಯೆ ಮಾತ್ರ ಅಲ್ಲ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಸಹ ಇದನ್ನು ಎದುರಿಸುತ್ತಿವೆ ಎಂದು ಆರ್.ಎನ್.ಪ್ರಸಾದ್ ಅವರ ಸಂಶೋಧನಾ ಲೇಖನದಲ್ಲಿ ಮಾನವ ಹಕ್ಕುಗಳ ಕುರಿತು ಗಮನಿಸಬಹುದು. ಹೆಚ್ಚಾಗಿ ಖಾಸಗಿ ವ್ಯಕ್ತಿಗಳಿಂದ ಮಹಿಳೆಯರ ವಿರುದ್ಧ ಮತ್ತು ಮಹಿಳಾ ಸಂಘಟನೆಗಳ ವಿರುದ್ಧ ಹಿಂಸೆ ನಡೆಯುತ್ತಾ ಇದೆ. ಹಾಗೆಯೇ ರಾಜ್ಯಮಟ್ಟದಲ್ಲಿ ಇಂತಹ ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಲಾಗಿದ್ದು ಸರಕಾರದ ಹೇಳಿಕೆಗಳಿಗೂ ಮತ್ತು ವಾಸ್ತವಿಕತೆಯ ಅಂಶಗಳ ನಡುವೆ

ವ್ಯಾಪಕವಾದ ಅಂತರವಿದ್ದು ಅದು ಹೇಗೆ ಎನ್ನುವುದನ್ನು ಹೇಳುತ್ತದೆ. ಅದೇ ರೀತಿಯಾಗಿ ಯಾವುದೇ ಫಲಕಾರಿಗೊಳ್ಳುತ್ತಿಲ್ಲ ಎಂದು ಸಹ ವಿವರಿಸಿದ್ದಾರೆ. ಹಾಗಾಗಿ ಐಶಾ ಸಿದ್ದಿಕ್ ಮತ್ತು ಎಂ. ಮಿಜನೂರ್ ರೆಹಮಾನ್ ಅವರ ಸಂಶೋಧನಾ ಲೇಖನದಂತೆ, ಇಂದು ಜಗತ್ತು ೧೦೦ನೆಯ ಅಂತಾರಾಷ್ಟ್ರೀಯ ಮಹಿಳಾ ದಿನಾಚಾರಣೆಯನ್ನು ಅವರ "ಇಕ್ವಲ್ ರೈಟ್ಸ್ ಇಕ್ವಲ್ ಆಪರ್‌ಚ್ಯುನಿಟಿ ಪ್ರೊಗ್ರೆಸ್ ಫಾರ್ ಆಲ್" ಎಂಬ ನುಡಿಗಟ್ಟಿನೊಂದಿಗೆ ಆಚರಿಸಲಾಗಿದ್ದು, ಈ ಪರಿಕಲ್ಪನೆಯು ದಿನದಿಂದ ದಿನಕ್ಕೆ ಪರಿಣಾಮಕಾರಿಯಾಗಿ ಜಾಗೃತಗೊಳ್ಳುತ್ತಿದೆ. ಅದಕ್ಕೆ ಪೂರಕವಾಗಿ ಮಹಿಳಾ ಮೀಸಲಾತಿ ಪರಿಕಲ್ಪನೆಯು ಒಂದಾಗಿದೆ.[೨೫]**(ಅರ್ಚನಾ ಹಿರೆಮಠ, ೨೦೧೭)**

ಭಾರತದ ಮಹಿಳೆ ಸ್ಥಿತ್ಯಂತರ ಕಾಲಘಟ್ಟದಲ್ಲಿ ನಿಂತಿದ್ದಾಳೆ. ಅವಳ ಮುಂದೆ ಸಾಧಿಸಲು ಅಪಾರ ಅವಕಾಶಗಳು ಇವೆ. ಆದರೆ ಮಹಿಳೆ ಒಂದು ಹೆಜ್ಜೆ ಮುಂದಿಟ್ಟರೆ ನಾಲ್ಕು ಹೆಜ್ಜೆ ಹಿಂದಕ್ಕೆಳೆಯಲು ಆನೇಕ ಶಕ್ತಿಗಳು ಕಾದು ನಿಂತಿವೆ. ಅದ್ದರಿಂದ ಸಮಾಜದಲ್ಲಿ ಮಹಿಳೆ ಎರಡನೇ ದರ್ಜೆಯ ಪ್ರಜೆ ಆಗಿದ್ದಾಳೆ ಎಂಬುದರಲ್ಲಿ ಸಂದೇಹವಿಲ್ಲ ಎಂಬುದನ್ನು ಕಾಣಬಹುದು. ಗಂಡು ಹೆಣ್ಣಿನ ವರ್ಗೀಕರಣಕ್ಕೆ ಅವರೊಳಗಿನ ಜೈವಿಕ ಭಿನ್ನತೆಯೇ ಮೂಲ ಕಾರಣ. ಅವರಿಗೆ ಸ್ವಾಭಾವಿಕವಾಗಿ ಭಿನ್ನತೆಯಿರುವ ಮತ್ತು ಸಂತಾನೋತ್ಪತ್ತಿಗೆ ಪೂರಕವಾಗುವಂತೆ ಅವರ ದೈಹಿಕ ಮತ್ತು ಮಾನಸಿಕ ರಚನೆಗಳಿರುತ್ತವೆ. ಇದಕ್ಕೆ ಪೂರಕವಾಗಿ ಗಂಡು-ಹೆಣ್ಣುಗಳಲ್ಲಿ ಅವರದ್ದೇ ಆದ ನಿರ್ದಿಷ್ಟ ಪಾತ್ರ ಮತ್ತು ಜವಾಬ್ದಾರಿಗಳಿರುತ್ತವೆ. ಈ ಭಿನ್ನತೆಯನ್ನು ನಮ್ಮ ಸಮಾಜದಲ್ಲಿ ಸಾಮಾಜಿಕವಾಗಿ-ಸಾಂಸ್ಕೃತಿಕವಾಗಿ ಹಿಗ್ಗಿಸಿವೆ ಮತ್ತು ಶ್ರೇಷ್ಠತೆ ಮತ್ತು ಕನಿಷ್ಠತೆ ಎಂಬ ಶ್ರೇಣೀಕರಣವನ್ನು ಮಾಡಿದೆ. ಸಾಮಾಜಿಕ ಸ್ಥಾನ ಎಂಬುದು ವ್ಯಕ್ತಿಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳಿಂದ ಗುರುತಿಸಬಹುದು, ಮಹಿಳೆಯ ಸ್ಥಾನವು ಕೇವಲ ಸಾಮಾಜಿಕ ಮತ್ತು ಸಾಂಸ್ಕೃತಿಕ ಪದ್ಧತಿಯಿಂದ ಮಾತ್ರ ರೂಪಿತವಾಗಿದೆ[೨೬] **(ಸಂಗೀತ ಗಾಂವಕರ)** ಮಹಿಳೆ ಯಾವ ಯಾವ ರೀತಿಯಲ್ಲಿ ದೌರ್ಜನ್ಯಕ್ಕೆ ಗುರಿಯಾಗುತ್ತಾಳೆ ಎಂಬುದನ್ನು ನೋಡುವುದಾದರೆ ಅದರಲ್ಲೂ ಭಾರತೀಯ ಸಮಾಜದಲ್ಲಿರುವ ಸಾಮಾಜಿಕ ಪಿಡುಗುಗಳಾದ ಬಾಲ್ಯವಿವಾಹ, ಸತಿಸಹಗಮನ, ದೇವದಾಸಿ ಪದ್ಧತಿ, ವರದಕ್ಷಿಣೆ, ಅತ್ಯಾಚಾರ ಮತ್ತು ಎಲ್ಲಾ ರಂಗದಲ್ಲೂ ಲಿಂಗಭೇಧ ಹೀಗೆ ಹತ್ತು ಹಲವು ಸಮಸ್ಯೆಗಳ ಆಗರದಲ್ಲಿ ಇಂದು ಮಹಿಳೆ ಬದುಕುಳಿಯುತ್ತಿದ್ದಾಳೆ. ಈ ಆಧುನಿಕ ಕಾಲದಲ್ಲಿ ಮಹಿಳಾ ಜಾಗೃತಿ ಆಂದೋಲನ ನಡೆಯುತ್ತಿದ್ದರೂ ಮಹಿಳೆ ಇನ್ನೂ ಹೆಚ್ಚಿನ ಸಮಸ್ಯೆಗಳಿಗೆ ಸಿಲುಕಿದ್ದಾಳೆ ಎಂಬುದನ್ನು ಅಂಕಿಅಂಶಗಳಿಂದ ವಿಶ್ಲೇಷಣೆಯ ಮೂಲಕ ದೌರ್ಜನ್ಯದ ಬಗ್ಗೆ ಟೀಕಿಸಿದ್ದಾರೆ[೨೭]**(ವೀಣಾ ಸಂಕನಗೌಡರ)**

'ದಿ ವುಮೆನ್ ಜೆಂಡರ್ ಆ್ಯಂಡ್ ಡೆವಲಪ್‌ಮೆಂಟ್' ಕೃತಿಯಲ್ಲಿ ಆರ್ಥಿಕತೆಯಲ್ಲಿ ಮಹಿಳೆಯರ ಸಹಭಾಗಿತ್ವದ ಕುರಿತು ವಿಶ್ಲೇಷಿಸಲಾಗಿದೆ. ಈ ಕುರಿತಾಗಿ ರಚಿತವಾದ ಮೂರು ಸಿದ್ಧಾಂತಗಳ ಮೂಲಕ ಮಹಿಳಾ ಸಬಲೀಕರಣದ ವೇದಿಕೆ ಸಿದ್ಧವಾದ ಕುರುಹುಗಳ ಸ್ಪಷ್ಟವಾಗಿವೆ. ಇದು ಮಹಿಳೆಯರಿಗೆ ಪ್ರಗತಿ ಕಾರ್ಯಗಳನ್ನು ರೂಪಿಸಲು ಸರ್ಕಾರಕ್ಕೆ ವೇದಿಕೆಯಾಗಿದೆ. ೧೯೭೦ರಲ್ಲಿ

ಎಸ್ತರ್ ಬೋಸರಪ್ ಅವರ ಕೃತಿ 'ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆ' ಪ್ರಕಟವಾದ ನಂತರ ಅಮೇರಿಕಾದ ಉದಾರವಾದಿ ಸ್ತ್ರೀವಾದಿಗಳೂ ಕೂಡ ಇದಕ್ಕೆ ತಮ್ಮ ಧ್ವನಿ ಸೇರಿಸಿದರು. ಈ ಸಿದ್ಧಾಂತವು ಆಧುನೀಕರಣ ಸಿದ್ಧಾಂತವನ್ನೇ ಬೆಂಬಲಿಸುತ್ತದೆ. ಇದರ ಕಾರ್ಯಕ್ರಮಗಳು ಪಾಶ್ಚಾತ್ಯ ಮೌಲ್ಯಗಳನ್ನು ಬೆಂಬಲಿಸುತ್ತಾ ಸಾಮಾಜಿಕ ಬದಲಾವಣೆಯನ್ನು ಗುರಿಯಾಗಿರಿಸಿಕೊಂಡಿವೆ. ಈ ಸಿದ್ಧಾಂತವು ಸಾಂಪ್ರದಾಯಿಕ ಸಮಾಜವನ್ನು ಪುರುಷ ಪ್ರಧಾನ, ಅಧಿಕಾರಯುಕ್ತ ಎಂದೂ, ಆಧುನಿಕ ಸಮಾಜವನ್ನು ಪ್ರಜಾಪ್ರಭುತ್ವವಾದಿ ಹಾಗೂ ಸಮಾನತೆಯ ಪ್ರತಿರೂಪ ಎಂದೂ ಬಿಂಬಿಸಿವೆ. ಆದರೆ ಆಧುನೀಕರಣದ ಫಲಗಳು ಮಹಿಳೆಯರಿಗೆ ತಲುಪುವಲ್ಲಿ ಯಶಸ್ವಿಯಾಗಿರುವುದಿಲ್ಲ. ಹೀಗಾಗಿ ಮಹಿಳೆಯರನ್ನು ಆರ್ಥಿಕತೆಯಲ್ಲಿ ತೊಡಗಿಸಲು ಅಗತ್ಯವಿರುವ ಆಡಳಿತಾತ್ಮಕ ಬದಲಾವಣೆಗಳ ಕುರಿತು ಚರ್ಚಿಸಲಾಗಿದೆ. ಉತ್ಪಾದನಾ ವಲಯಗಳಲ್ಲಿ ಮಹಿಳೆಯ ಸಹಭಾಗಿತ್ವಕ್ಕಿರುವ ಅಡೆತಡೆಗಳನ್ನು ಕಡಿಮೆ ಮಾಡುವ ಬಗ್ಗೆ ವಿವರಣೆ ಇದೆ. ಆದರೆ ಎಸ್ತರ್ ಬೋಸರಪ್ ಅವರ ಕೃತಿಯಲ್ಲಿ ಮಹಿಳೆ, ಅಭಿವೃದ್ಧಿ ಧೋರಣೆಗಳ ಫಲಾನುಭಾವಿಯಾಗಿರುವುದಿಲ್ಲ ಎಂಬುದರ ವಿವರಣೆ ದೊರೆಯುವುದಿಲ್ಲ. ಕೇವಲ ಉತ್ಪಾದನಾ ಅಂಶಗಳನ್ನು ವಿಶ್ಲೇಷಿಸಲಾಗಿದೆಯೇ ವಿನಃ ಮಹಿಳೆಯ ಬಹುಮುಖ್ಯ ಕರ್ತವ್ಯವಾದ ಸಂತಾನೋತ್ಪತ್ತಿ ಕಾರ್ಯವನ್ನು ನಿರ್ಲಕ್ಷಿಸಿದ್ದಾರೆ ಎಂಬ ಆರೋಪವನ್ನು ಮಾಡಿದ್ದಾರೆ. ಈ ಸಿದ್ಧಾಂತದ ನಂತರ ಬಂದಂತಹ ಸಿದ್ಧಾಂತ 'ಮಹಿಳೆ ಮತ್ತು ಅಭಿವೃದ್ಧಿ' ಆಧುನೀಕರಣದ ವಿಮರ್ಶಕರಿಂದ ಹುಟ್ಟಿಕೊಂಡು ಬಂದಂತಹ ಸಿದ್ಧಾಂತ. ಇದರಲ್ಲಿ ಮಹಿಳೆಯನ್ನು ಅಭಿವೃದ್ಧಿ ಪ್ರಕ್ರಿಯೆಯ ಒಂದು ಭಾಗವೇ ಎಂದು ಬಣ್ಣಿಸಲಾಗಿದೆ. ಸಮಾಜದ ಅಥವಾ ಆರ್ಥಿಕ ಪ್ರಗತಿಯಲ್ಲಿ ಮಹಿಳೆಯ ಪ್ರಾಮುಖ್ಯತೆಯನ್ನು ಎತ್ತಿತೋರಿಸಿದೆ. ಆದರೆ ಈ ಸಿದ್ಧಾಂತದಲ್ಲಿ ಮಹಿಳೆಯ ದಾಸ್ಯ ಗಣನೆಗೆ ತೆಗೆದುಕೊಂಡಿರುವುದಿಲ್ಲ. ಲಿಂಗಾಧಾರಿತ ತಾರತಮ್ಯದ ಕುರಿತು ಇಲ್ಲಿ ಯಾವುದೇ ವಿಶ್ಲೇಷಣೆ ಇಲ್ಲ. ೧೯೮೦ರಲ್ಲಿ 'ಜೆಂಡರ್ ಅಂಡ್ ಡೆವಲಪ್‌ಮೆಂಟ್' ಸಿದ್ಧಾಂತವನ್ನು ಮಂಡಿಸ ಲಾಯಿತು.[೨೪](**ನಳಿನಿ ವಿಶ್ವನಾಥನ್, ೧೯೯೭**) ಮಹಿಳೆಯ ಶೋಷಣೆ ಕುಟುಂಬದಲ್ಲಿ ಹೇಗೆ ನಡೆಯುತ್ತದೆ ಎಂದು ಹೆಚ್ಚು ಒತ್ತು ನೀಡುತ್ತಾ ಮಹಿಳೆಯರನ್ನು ಸಾಮಾಜಿಕ ಬದಲಾವಣೆಯ ಕಾರ್ಯಕರ್ತಳು ಎಂದು ರೂಪಿಸಿವೆ. ಮಹಿಳೆಯರ ಸಂಘಟನೆ ಪ್ರಾಮುಖ್ಯತೆಯನ್ನು ಎತ್ತಿ ಹಿಡಿದಿದೆ. ಪ್ರಸ್ತುತ ಜಾರಿಯಲ್ಲಿರುವ ಸ್ತ್ರೀಪುರಷರ ಸ್ಥಾನಮಾನಗಳನ್ನು ಖಂಡಿಸುತ್ತಾ ಸ್ತ್ರೀಯರಿಗೆ ನ್ಯಾಯಯುತವಾದ ಹಕ್ಕುಗಳನ್ನು ನೀಡುವ ಕುರಿತು ಜಾರಿಗೆ ತರಬೇಕಾದ ನಿಯಮಗಳ ವಿಶ್ಲೇಷಣೆ ಇದೆ

ಮಾಧ್ಯಮಗಳು ಮಹಿಳೆಯರನ್ನು ಹೇಗೆ ಪ್ರತಿನಿಧೀಕರಣಗೊಳಿಸುತ್ತವೆ ಎಂಬುದನ್ನು ಇಲ್ಲಿ ಅರ್ಥ ಮಾಡಿಕೊಳ್ಳಬಹುದು. ಸಮಾಜದಲ್ಲಿ ಜನಪ್ರಿಯ ಸಂಸ್ಕೃತಿಯ ಭಾಗವಾದ ಮಾಧ್ಯಮ ಬಹುಬೇಗ ಸಮಾಜದ ಮೇಲೆ ಪರಿಣಾಮ ಬೀರುತ್ತದೆ. ಇವು ಒಂದು ರೀತಿಯ ಕನ್ನಡಿಗಳಾಗಿಯೂ ಕೆಲಸ ಮಾಡುತ್ತವೆ. ಇಲ್ಲಿ ಮಹಿಳೆಯು ಮಾಧ್ಯಮವನ್ನು ಹೇಗೆ ಸ್ವೀಕರಿಸುತ್ತಾಳೆ. ಮತ್ತು ಮಾಧ್ಯಮ ಮಹಿಳೆಯರನ್ನು ಹೇಗೆ ಸ್ವೀಕರಿಸಿದೆ ಎನ್ನುವುದನ್ನು ಪ್ರಾಯೋಗಿಕವಾಗಿ ಜೀವಂತ ಸಾಕ್ಷಿಗಳನ್ನು ಮುಂದಿಟ್ಟು ಚರ್ಚಿಸಿದ್ದಾರೆ. ಮಾಧ್ಯಮ ಯಾವಾಗಲೂ ಮಾರುಕಟ್ಟೆ, ಕಾಲ ಮತ್ತು ದೇಶಗಳ

ಪೂರಕವಾಗಿಯೇ ತನ್ನ ಕಾರ್ಯಕ್ರಮಗಳನ್ನು ರೂಪಿಸುತ್ತದೆ. ಆದರೆ ನಾನು ಇಡೀ ಮಹಿಳಾ ಸಮುದಾಯವನ್ನು ದೇಹ, ಸೌಂಧರ್ಯ ಮುಂತಾದವುಗಳಿಗೆ ಕೇಂದ್ರೀಕರಿಸಿ ಅವಳ ಉತ್ಪಾದನಾ ಚಟುವಟಿಕೆಯಲ್ಲಿ ಎಲ್ಲಾ ರೀತಿಯಲ್ಲಿ ಭಾಗವಹಿಸಿದರೂ ಉತ್ಪಾದನೆ, ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಇನ್ನು ಸಹ ಒಳಗೊಂಡಿಲ್ಲ"(ಬಿ.ಜಿ. **ಕಲಾವತಿ**) ಎಂಬುದನ್ನು ಮೇಲಿನ ಚರ್ಚೆಯಲ್ಲಿ ಗುರುತಿಸಿದ್ದಾರೆ. ಮಾಧ್ಯಮ ಅಂದರೆ ಸುದ್ದಿವಾಹಿನಿ ಮಾತ್ರವಲ್ಲ, ಕಿರುತರೆ ಮತ್ತು ಸಿನಿಮಾದಲ್ಲಿಯೂ ಸಹ ತೀವ್ರತರವಾದ ಅಸಮಾನತೆಗಳನ್ನು ಕಾಣಬಹುದು. ಉದಾಹರಣೆಗೆ ಸಂಭಾವನೆಯಲ್ಲಿ ವಿರುದ್ಧ ರೀತಿಯ ತಾರತಮ್ಯಗಳಿರುತ್ತವೆ.

### ೨.೨.೨. ದಲಿತ ಮತ್ತು ಆದಿವಾಸಿ ಮಹಿಳೆಯರ ಕುರಿತ ಚರ್ಚೆಗಳು

**ದಲಿತರ ವಿಶ್ಲೇಷಣೆ:** ಭಾರತದ ಸಾಮಾಜಿಕ, ಆರ್ಥಿಕ, ದಾರ್ಮಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ವರೂಪಗಳೆಲ್ಲವು ವಿಭಿನ್ನಮುಖಗಳನು ಹೊಂದಿವೆ, ಚಾತುರ್ವರ್ಣ ಪದ್ಧತಿಯಲ್ಲಿ ಶ್ರೇಷ್ಠರೆನಿಸಿಕೊಂಡುವರು ಇಲ್ಲಿ ಅಲ್ಪ ಮತಸ್ಥರಾಗಿದ್ದರೂ ಸಹ ದೈನಂದಿನ ಸಾಮಾಜಿಕ ನಡೆವಳಿಕೆಗಳನ್ನು ನಿಯಂತ್ರಿಸುವ ಸಾಮರ್ಥ್ಯವುಳ್ಳವರಗಿದ್ದಾರೆ ವರ್ಣಾ ವ್ಯವಸ್ಥೆಯ ಮೊದಲ ಶ್ರೇಯಾಂಕಿತದಲ್ಲಿರುವ ಬ್ರಾಹ್ಮಣರು ಕ್ರಮವಾಗಿ ವಿಬಜಿಸಿಕೊಂಡಿರುವ ಕ್ಷತ್ರೀಯ, ವೈಶ್ಯ ಹಾಗೂ ಶೂದ್ರ ಜಾತಿಗಳು ಆಧುನಿಕ ಕಾಲದಲ್ಲೂ ಭಯ-ಭಕ್ತಿಗಳಿಂದ ಇವೆ ಎಂಬುದು ಪುರಾವೆಗಳಲ್ಲಿವೆ. ಶೂದ್ರ ಅಂದಿನಿಂದಲೂ ಭೂಮಿಯೋಂದಿಗೆ ಬದುಕುತ್ತಲೇ ಬಂದಿರುವ ಜನ ಹಾಗೆ ರಾಜನ ಅಧಿಕಾರಕ್ಕೆ, ಬ್ರಾಹ್ಮಣರ ಉಪದೇಶಕ್ಕೆ ವೈಶ್ಯರ ತಕ್ಕಡಿಯ ಏರಿಳಿತಗಳನ್ನೆ ನೋಡುತ್ತಲೇ ಮೇಲಿನ ವರ್ಣಗಳ ನೇರ ತುಳಿತಕ್ಕೆ ಸಿಲುಕಿ ನಲುಗುತ್ತಿರುವವರು ದಲಿತರು.ಇವರನ್ನುಅತಿಹಿಂದುಳಿದ, ಪಂಚಮ, ಅಸ್ಪೃಶ್ಯ, ಅಂತ್ಯಜ ಹಾಗೂ ಹರಿಜನ-ಗಿರಿಜನಗಳೆಂಬ ಜಾತಿ-ಉಪಜಾತಿಗಳ ಆಧಾರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಾಳುತ್ತಿರುವವರು. ದಲಿತರು ಮೇಲ್ಜಾತಿಯ ಜನರಿಂದ ೯೯ ಅಡಿ ನಿಂತರೆ ಕೆಳಜಾತಿಯ ಮುಂದೆ ೩೩ ಅಡಿ ನಿಲ್ಲುವ ಜನ ಸಮುದಾಯವೇ ಇದಾಗಿದೆ. ಇವರನ್ನ ನಾವು ನಗರಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ಬಹಳ ಹತ್ತಿರದಿಂದ ಇವರ ಜೀವನಶೈಲಿ ಕಷ್ಟ, ದುಖಃ-ದುಮ್ಮನ ಸಂವೇದನೆಗಳನ್ನ ಕಾಣಬಹುದು. ಇದೀಗ ಇವರ ಜೀವನವು ಜಾಗತಿಕ ಮಟ್ಟದಲಿ ಯಾರ ಕೈಗೆ ಸಿಕ್ಕಿ ನಲುಗುತ್ತಿವೆ.

ದಲಿತ ಪದದ ಬಳಕೆಯು ಅಂಬೇಡ್ಕರ್ ಜಾತಿ ವಿಮೋಚನಾ ಚಳವಳಿಯನ್ನು ತೀವ್ರಗೊಳಿಸಿದಾಗ, ಗಾಂಧೀಜಿ ಅಸ್ಪೃಸ್ಯರನ್ನು ಹರಿಜನರೆಂದು ಸಂಭೋಧಿಸಲು ಮುಂದಾದರು. ಈ ಪರಿಕಲ್ಪನೆಯನ್ನು ಸಮಾಜವು ತೀವ್ರವಾಗಿ ಆಲಿಸಿತು. ಇದು ಗಾಂಧಿಜಿಯವರಿಂದ ಬಂದಂತಹ ಪದವಾದ್ದರಿಂದ ಹರಿಜನ-ಗಿರಿಜನ ಹೆಸರು ಮಾತ್ರ ಬೇಗನೇ ಮಾಸಲಿಲ್ಲ. ಸಾಮಾನ್ಯವಾಗಿ ದಮನಕ್ಕೆ ಒಳಗಾದವರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಗಳನ್ನು ಬಿಚ್ಚಿಡುವಲ್ಲಿ ಮುಂದಾದವು. ಈ ಹಿನ್ನೆಲೆಯಲ್ಲಿ ಹೊರ ಬಂದ ಪದವೇ ದಲಿತ. ಈ ಪದ ಬಳಕೆಯನ್ನು ಹಿಂದೂ ಸಮಾಜ ಬೇಗ ಸ್ವೀಕರಿಸಲಿಲ್ಲ. ಏಕೆಂದರೆ ತಾನು ಕೊಟ್ಟಿದ್ದನ್ನು ಚಿರಾಯುವಾಗಿರ

ಬೇಕೆಂಬ ಅಹಂ ಮನೋಧರ್ಮ ಪ್ರವೃತ್ತಿಯದ್ದು. ಈ ಪದವು ಹೆಚ್ಚು ಕಡಿಮೆ ಪಂಚಮ, ಅಂತ್ಯಜ, ಭಂಗಿ, ಪೌರ ಕಾರ್ಮಿಕ ಇತ್ಯಾದಿ ಜಾತಿಗಳ ಸುತ್ತಲೂ ಹೆಣೆದುಕೊಂಡಿದೆ. ಇಂದು ದಲಿತ ಪದದ ವ್ಯಾಖ್ಯಾನಕಾರರು ಸಹ ಭಿನ್ನ ರೀತಿಯಲ್ಲಿ ಚರ್ಚಿಸಿದ್ದಾರೆ. ಏಕೆಂದರೆ ಶೋಷಿತರ ವ್ಯಾಖ್ಯಾನಗಳು ಸಮಾಜದ ಅಸಂಬದ್ಧ ಹೇಳಿಕೆಗಳಾಗಿವೆ ಎನ್ನುವುದು ಹಿಂದೂಗಳಲ್ಲಿ ಅಂತರ್ಗತವಾಗಿಬಿಟ್ಟಿದೆ.

ಭಾರತದ ಜನಸಂಖ್ಯೆಯಲ್ಲಿ ದಲಿತರು ಒಟ್ಟು ಭಾಗದಲ್ಲಿ ಕಾಲು ಭಾಗಕ್ಕಿಂತ ಅಧಿಕವಾಗಿದ್ದಾರೆ. ಅದನ್ನು ಭಾರತ ಸರ್ಕಾರ ಕೆ.ಎಸ್. ಸಿಂಗ್ ಅವರ ನೇತೃತ್ವದಲ್ಲಿ **ಪೀಪಲ್ ಅಫ್ ಇಂಡಿಯ**, ಎಂಬ ಪುಸ್ತಕ ಹೊರ ತಂದಿತು. ಅದರಲ್ಲಿ ಒಟ್ಟು ೨೮೦೦ ಜಾತಿಗಳು ಭಾರತದಲ್ಲಿದ್ದವು. ಅವುಗಳಲ್ಲಿ ಪರಿಶಿಷ್ಟ ಜಾತಿ ೪೫೦, ಪರಿಶಿಷ್ಟ ಪಂಗಡಗಳು ೪೬೧ ಉಳಿದ ಹಿಂದುಳಿದವರು ೭೬೬ ಜಾತಿಗಳನ್ನು ಹೊಂದಿದೆ. ಹಾಗೇ ಉಳಿದ ಜಾತಿಗಳ ಮೇಲ್ವರ್ಗದ ಜಾತಿಗಳು ಇದ್ದಾರೆ ಎಂದು ತಿಳಿಸಲಾಯಿತು.**(ಎ.ಎಸ್.ಐ., ಕೆ.ಎಸ್.ಸಿಂಗ್ ವರದಿ)**

ಹಾಗೇ ಕರ್ನಾಟಕದಲ್ಲೂ ಸಹ ೨೦೧೧ರ ಜನಗಣತಿಯ ಪ್ರಕಾರ ಶೇಕಡ ೨೪.೧೦ರಷ್ಟು ಜನಸಂಖ್ಯೆಯನ್ನು ಹೊಂದಿದೆ. ದಲಿತರು ಹಾಗೂ ಇನ್ನಿತರ ಹಿಂದುಳಿದವರು ಹೆಚ್ಚಿನ ಸೌಕರ್ಯಗಳನ್ನು ಸಂವಿಧಾನಾತ್ಮಕವಾಗಿ ಪಡೆಯುತ್ತಿದ್ದಾರೆ. ಅದು ಪಡೆಯುತ್ತಿದ್ದರೆ ಇತ್ತೀಚಿನಲ್ಲಾದ ಶೈಕ್ಷಣಿಕ ಪ್ರಭಾವವಿರಬಹುದು. ಅದು ತೀರ ಕಮ್ಮಿಯಷ್ಟೆ. ಅದರೆ ಇಂದಿಗೂ ಸಹ ದಲಿತರು ಸಾಮಾಜಿಕ ತಾರತಮ್ಯದಿಂದ ಬಾಧಿತರಾಗುತ್ತಿದ್ದಾರೆ. ಇತ್ತಿಚೆಗೆ ದಲಿತರ ಒಕ್ಕೂಟದಲ್ಲಿ ಸಹ ಬಿರುಕುಗಳು ಕಾಣಿಸ ತೊಡಗಿವೆ. ಅದ ಸಹ ಸಾಮಾಜಿಕ ನ್ಯಾಯದ ಅಡಿಯಲ್ಲಿ ತಮ್ಮ ಜನಸಂಖ್ಯಾ ಆಧಾರಕ್ಕೆ ತಕ್ಕಂತೆ ಬೇಡಿಕೆಗಳು ಹಾಗೂ ಮೀಸಲಾತಿಯನ್ನು ಮುಂದಿಡುತ್ತಿದ್ದಾರೆ. ಇಂತಹ ದಲಿತರ ಒಗ್ಗಟಿನ ಬೆಸುಗೆಯು ಯಾರಿಂದ ಸಾಧ್ಯವೋ ಮುಂದು ನೋಡಬೇಕು. ಉದಾಹರಣೆಗೆ ಕರ್ನಾಟಕದಲ್ಲಿ ತಿಮ್ಮರಾಯಪ್ಪನವರು ದಲಿತ ಕ್ರಿಯಾ ಸಮಿತಿಯನ್ನ ಪ್ರಾರಂಬಿಸಿದರು. ನಂತರ ಪ್ರೊ. ಬಿ. ಕೃಷ್ಣಪ್ಪ ಅವರು ಕರ್ನಾಟಕ ದಲಿತ ಸಂಘರ್ಷ ಸಮಿತಿಯನ್ನ ಸಹ ದಲಿತರ ಮಕ್ಕಳ ವಿದ್ಯಾವಂತರ ಐಕ್ಯತೆಗೆ ಭದ್ರ ಬುನಾದಿಯನ್ನ ಹಾಕಿದ್ದರು. ಅದರೆ ಇತ್ತೀಚೆಗೆ ರಾಜಕೀಯದ ತಂತ್ರದಿಂದ ಇದರ ಒಡಕುಗಳು ದೇಶದ ಎಲ್ಲಾ ಕಡೆ ಕಾಣಿಸ ತೊಡಗಿವೆ. ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ಮುಂದಿಟ್ಟಿವೆ? ಹಾಗೇಯೇ ದಲಿತರ ಮೀಸಲಾತಿಯನ್ನ ತುಂಡರಿಸುತ್ತಿರುವ ಜಾಗತೀಕರಣಕ್ಕೆ ನಮದೊಂದು ಧಿಕ್ಕಾರವಿರಲಿ ಎನ್ನುವ ಹಾದಿಯಲ್ಲಿ ಕೆಲವು ದಲಿತ ಪರ ಸಂಘಟನೆಗಳು ಹಾಗೂ ಇತರೆ ಸರ್ಕಾರೇತರ ಸಂಘ-ಸಂಸ್ಥೆಗಳ ಕೂಗುಗಳು ಕೇಳಿ ಬರುತ್ತಿವೆ. ಅದರೆ ಖಾಸಗೀಕರಣದ ಮಂತ್ರಗಳೆಲ್ಲವು ಸ್ಪರ್ಧಾತ್ಮಕ ಪ್ರಪಂಚವನ್ನೆ ಜನರಿಗೆ ತೋರಿಸಬೇಕೆಂಬ ವಾದವನ್ನು ಮಂಡಿಸುತ್ತವೆ. ಅದು ಮುಖ್ಯವಾಗಿ ಪರೋಕ್ಷವಾಗಿ ಸರ್ಕಾರಿ ವಲಯಗಳಿಗೆ ತಗುಲುವ ವೆಚ್ಚವನ್ನ ಗಂಭಿರವಾಗಿ ಹಾಗೂ ಜನಪರ ಕಾರ್ಯಗಳನ್ನು ನಿಲ್ಲಿಸಬೇಕೆಂಬ ಷರತ್ತು ವಿಧಿಸುತ್ತದೆ. ಅಂತಹ ಸಂದರ್ಭಗಳಲ್ಲಿ ಮೊದಲು ನೇರ ಬಲಿ ಪಶುಗಳಾಗುವರು

ದಲಿತರಲ್ಲದೆ ಬೇರಾರು ಅಲ್ಲ ಎನ್ನುವುದು ವಾಸ್ತಾವವಾಗುತ್ತದೆ. ಅದ್ದರಿಂದ ದಲಿತರಿಗೆ ಖಾಸಗಿ/ ಸಾರ್ವಜನಿಕ ವಲಯ ಅಭಿವೃದ್ಧಿ ಪರ ಚಟುವಟಿಕೆಗಳಲ್ಲಿ ಮೀಸಲಾತಿಯನ್ನ ಕಲ್ಪಿಸಬೇಕೆಂದು ೨೦೦೨ರಲ್ಲಿ ಭುಪಾಲ್ ಘೋಷಣೆಯಂತಹ ಸಾರ್ವಜನಿಕ ಪ್ರತಿಭಟನೆಗಳಲ್ಲಿ ಪ್ರಸ್ತಾಪಿಸಿದರು ಸಹ ಇನ್ನು ಯಾವ ಮಹತ್ವದ ಕಾರ್ಯಗಳು ಅನುಷ್ಠಾನಗೊಂಡಿಲ್ಲ.(**ಭೂಪಾಲ್ ಘೋಷಣೆ, ೨೦೦೨**) ಹಾಗೇ ದೇಶದ ನಾನಾ ಕಡೆ ಇಂತಹ ಸಂಘಟನೆಗಳು ನಡೆಯುತ್ತಿವೆ. ಅದರೂ ಸಹ ಯಾವ ಬದಲಾವಣೆಗಳನ್ನು ಸರ್ಕಾಗಳು(ಪ್ರಭುತ್ವಗಳು) ಕ್ರಮ ತೆಗೆದುಕೊಂಡಿಲ್ಲ. ಇನ್ನು ಮುಂದೆ ಜಾಗತೀಕರಣದಿಂದ ದಲಿತರಿಗೆ ಅಗುತ್ತಿರುವ ಶೈಕ್ಷಣಿಕ ಉದ್ಯೋಗ, ಆರೋಗ್ಯ ಮೂಲಸೌಕರ್ಯ, ಜಾತಿ, ಲಿಂಗ, ವರ್ಗಧಾರಿತದಲ್ಲಿ ಅಗುತ್ತಿರುವ ತೊಡಕುಗಳನ್ನ ಚರ್ಚೆಗೆ ಒಳಪಡಿಸುವುದು ಸೂಕ್ತ. ಹಾಗೇ ದೇವದಾಸಿ ವಿಚಾರಕ್ಕೆ ಬಂದಾಗ ಸಾಮಾನ್ಯವಾಗಿ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ದಲಿತ ಸಮುದಾಯಕ್ಕಿಂತ ಕಡೆಯಾಗಿವೆ ಎನ್ನುವುದು ನೋವಿನ ಸಂಗತಿ.

ಭಾರತೀಯ ಜಾತಿಪದ್ಧತಿಯು ಸಾಮಾಜಿಕ ಹೊರತಳ್ಳುವಿಕೆಗೆ ಮುಖ್ಯ ಕಾರಣವಾಗಿದೆ. ಇದು ಒಂದೇ ತರವಾಗಿರದೇ ಹಲವಾರು ಸಾಂಸ್ಕೃತಿಕ ವೈವಿಧ್ಯತೆಗಳನ್ನು ಹೊಂದಿದೆ. ಇಂತಹ ಜಾತಿಯ ಸಾಂಸ್ಕೃತಿಕ ವೈರುಧ್ಯಗಳನ್ನು ಪ್ರಪಂಚದ ಯಾವುದೇ ಭಾಗದಲ್ಲೂ ನೋಡಲು ಸಾಧ್ಯವಿಲ್ಲ. ಭಾರತೀಯ ಸಮಾಜದಲ್ಲಿ ದಲಿತ, ಆದಿವಾಸಿ ಮತ್ತು ಹಿಂದುಳಿದ ಸಮುದಾಯಗಳು ಸಾಮಾಜಿಕವಾಗಿ ಹೊರತಳ್ಳಲ್ಪಟ್ಟ ಅಂಚೀಕೃತ ಸಮುದಾಯಗಳಾಗಿವೆ. ಸಾಮಾಜಿಕವಾಗಿ, ಆರ್ಥಿಕ ಮತ್ತು ರಾಜಕೀಯ ಹೊರತಳ್ಳುವಿಕೆಯ ಜೊತೆಗೆ ಶೈಕ್ಷಣಿಕವಾಗಿ ಅಂಚೀಕೃತ ಸಮುದಾಯವಾಗಿವೆ. ಭಾರತೀಯ ಸಮಾಜದ ಸಾಂಸ್ಕೃತಿಕ ಸಮುದಾಯಗಳ ಹಿಂದೆ ರಾಜಕೀಯ ಕಾನೂನುಗಳು ನಿಲ್ಲುವುದಿಲ್ಲ ಎಂದು ತಿಳಿಸಿದ್ದಾರೆ[೬೦](**ಅರವಿಂದ ಚೊಕ್ಕಾಡಿ**) ದೇಶ, ಜನಾಂಗ ಮತ್ತು ಸಮಾಜ ಯಾವುದೇ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸಬೇಕಾದರೆ ಅಲ್ಲಿನ ಮಾನವ ಸಂಪನ್ಮೂಲ ಬಹುಮುಖ್ಯ ಪಾತ್ರ ವಹಿಸುತ್ತದೆ. ಆದರೆ ನಮ್ಮ ದೇಶದಲ್ಲಿ ಹೆಚ್ಚಿನ ಕೃಷಿಯಾಧಾರಿತ ಕೆಲಸಗಳಲ್ಲಿ ಮಹಿಳೆಯರೇ ಅಧಿಕವಾಗಿ ಭಾಗವಹಿಸುತ್ತಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಶೇ. ೭೬ರಷ್ಟು ಕೃಷಿ ಕಾರ್ಮಿಕರಾಗಿದ್ದಾರೆ ಮತ್ತು ಶೇ. ೨೮ರಷ್ಟು ಮಹಿಳಾ ಸಾಗುವಳಿದಾರರಾಗಿದ್ದಾರೆ, ಆದರೆ ಭಾರತದಲ್ಲಿ ಕೃಷಿ ಕಾರ್ಮಿಕ ಮಹಿಳೆಯರ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಅಲ್ಲದೆ ಇವರ ಆದಾಯ ಯಾವ ಗಣನೆಗೆ ಬಂದಿಲ್ಲ[೬೧](**ಡಾ. ಯಮನೂರಪ್ಪ ಅಣ್ಣಿಗೇರಿ**) ಕೃಷಿ ಕಾರ್ಮಿಕರಲ್ಲಿ ಅಧಿಕ ಪ್ರಮಾಣದಲ್ಲಿ ದಲಿತರು ಮತ್ತು ಆದಿವಾಸಿಗಳು ಇದ್ದಾರೆ. ಹಾಗೆಯೇ ಅಲ್ಪಸಂಖ್ಯಾತ ಮಹಿಳೆಯರನ್ನು ಗಮನಿಸಿದಾಗ ಕೆಲವು ವೃತ್ತಿಗಳಿಗೆ ಮಾತ್ರ ಸೀಮಿತವಾಗಿದ್ದಾರೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಹಿಳೆಯರ ಆರೋಗ್ಯದ ಕಲ್ಪನೆಯ ಬಗ್ಗೆ ಇಂದು ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಶಿಶು ಮತ್ತು ಮಕ್ಕಳ ಮರಣ ಪ್ರಮಾಣದಲ್ಲಿ ಹೆಚ್ಚಳ ಹಾಗೂ ಕ್ಷೀಣಿಸುತ್ತಿರುವ ಆರೋಗ್ಯದ ಗುಣಮಟ್ಟವು ಇದಕ್ಕೆ ಮುಖ್ಯ ಕಾರಣವಾಗಿದೆ. ಭಾರತದಲ್ಲಿ ಮಹಿಳೆಯರ ಕೆಳಮಟ್ಟದ ಆರೋಗ್ಯಕ್ಕೆ ಅಪೌಷ್ಟಿಕತೆ, ಕಡಿಮೆ ಆರ್ಥಿಕತೆ,

ಸಾಮಾಜಿಕ ಸ್ಥಾನಮಾನದಲ್ಲಿ ಕೀಳು-ಮೇಲು ಎಂಬ ಭಾವನೆಗಳು ಕಾರಣಗಳಾಗಿವೆ[೩೨](**ಡಾ. ಎಸ್.ಸಿ. ಶೆಟ್ಟರ**) ಎಂದು ತಮ್ಮ ಲೇಖನದಲ್ಲಿ ಕಂಡುಕೊಂಡಿದ್ದಾರೆ. ಇದೆಲ್ಲವೂ ಸಹ ಅಕ್ಷರಶಃ ಚಾಲ್ತಿಯಲ್ಲಿವೆ.

ಮಹಿಳೆಯರ ಸಾಮಾಜಿಕ ಸಂವೇದನೆಯನ್ನು ಅರಿಯುವಲ್ಲಿ, ಅರ್ಥೈಸುವಲ್ಲಿ ಶಾಸನಗಳು ಪ್ರಮುಖವಾದ ಆಧಾರಗಳಾಗಿವೆ. ಹಿಂದಿನ ಕಾಲದ ವಾಸ್ತವಿಕ ಇತಿಹಾಸದಲ್ಲಿ ಮಹಿಳೆಯರ ವೃತ್ತಿಪರತೆ, ಬೌದ್ಧಿಕ ಚಲನ-ವಲನಗಳನ್ನು ಕಟ್ಟಿಕೊಟ್ಟಿವೆ. ರಾಜಕೀಯ ಕ್ಷೇತ್ರ ಮಹಿಳೆಯರಿಗೆ ಅಪಾಯಕಾರಿ ವ್ಯಾಪಾರವಿದ್ದಂತೆ, ಹಾಗೂ ಮಹಿಳೆಯರಿಗೆ ದೇಹ, ಸಾಮರ್ಥ್ಯ, ಶೀಲ ಸಂರಕ್ಷಣೆ ಯಂತಹ ಗಂಭೀರ ಕಾರ್ಯಗಳ ಬಗ್ಗೆ ಕೆಲವರಲ್ಲಿ ಮಾತ್ರ ಸೂಕ್ಷ್ಮವಾಗಿ ಗುರುತಿಸಬಹುದಾಗಿತ್ತು. ಉದಾ: ಅಕ್ಕಮಹಾದೇವಿ, ಹೊಯ್ಸಳ ಬಮ್ಮಾದೇವಿ ಮುಂತಾದವರು. ಕೊನೆಯಲ್ಲಿ ಧರ್ಮದ ಹೆಸರಲ್ಲಿ ಮಹಿಳೆಯರ ಹೆಸರು ಇದ್ದಂತೆ ಕೌಟುಂಬಿಕ ಹೊಣೆಗಾರಿಕೆಯಲ್ಲೂ ಸಹ ಆಕೆಯ ಹೆಸರು ಪ್ರಧಾನವಾಗಿದೆ[೩೩](**ಡಾ. ಚೆನ್ನಕ್ಕ ಪಾವಟೆ**) ಸಮಾಜದಲ್ಲಿ ಮುಸ್ಲಿಂ ಮಹಿಳೆಯರ ಸ್ಥಿತಿಗತಿಯನ್ನು ಅನಾರೋಗ್ಯ, ಶಿಕ್ಷಣ ಮತ್ತು ಆರ್ಥಿಕವಾಗಿ ತುಂಬಾ ಹಿಂದುಳಿದಿದ್ದಾರೆ ಎಂದು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ[೩೪](**ನಸೀಮ್ ಭಾನು ಎ ಖಲಾಸಿ, ೨೦೦೮**) ಇಲ್ಲಿ ಧಾರ್ಮಿಕತೆಯ ಸಂಕೀರ್ಣತೆಯು ಸಹ ಕಾರಣವಾಗಬಹುದು. ಇಲ್ಲಿ ಸ್ವಾತಂತ್ರ್ಯದ ವಿಚಾರಕ್ಕೆ ಹೋಲಿಸಿದಾಗ ದಲಿತ ಹಾಗೂ ಇತರೆ ಮಹಿಳೆಯರಿಗಿಂತ ಹಿಂದಿದ್ದಾರೆ ಎನ್ನುವುದು ತುಂಬಾ ಸೂಕ್ಷ್ಮತೆಯಿಂದ ಆವಲೋಕಿಸಿದಾಗ ತಿಳಿಯುತ್ತದೆ.

ದಲಿತ ಮಹಿಳೆಯರ ಹಾಗೂ ದಲಿತರ ಆರೋಗ್ಯವನ್ನು ಜಾಗತೀಕರಣದ ಹಿನ್ನೆಲೆಯಲ್ಲಿ ಚರ್ಚಿಸುವುದು ಮತ್ತು ವಿಶ್ಲೇಷಣೆಗೆ ಒಳಪಡಿಸುವುದು ಪ್ರಮುಖ ಕಾರ್ಯವಾಗಿದೆ. ಜಾಗತೀಕರಣ ದಲಿತರ ಪಾಲಿಗೆ ಅಸಮಾನತೆ, ಬಡತನ ದಾರಿದ್ರ್ಯ, ಅನಾರೋಗ್ಯಗಳನ್ನು ತಂದೊಡ್ಡಿ ಹಾಗೂ ವಿಶೇಷವಾಗಿ ಮಹಿಳೆಯ ಹಕ್ಕು ಬಾಧ್ಯತೆಗಳಿಗೆ ತಡೆಯೊಡ್ಡಿ ಇವರ ಬದುಕಿನಲ್ಲಿ ನೆಮ್ಮದಿ ಕಾಣದಂತೆ ಮಾಡಿದೆ. ಹಾಗೇ ದಲಿತರ ಆರೋಗ್ಯದ ಬಗ್ಗೆ ನೋಡಿದರೆ ಹೇಳಿಕೊಳ್ಳುವಂತಹ ಅಭಿವೃದ್ಧಿ ಪರ ಕಾರ್ಯಗಳೇನು ಅಗಿಲ್ಲ. ಯಾವುದೇ ಕಲ್ಯಾಣ ರಾಷ್ಟ್ರಗಳಲ್ಲಿ ದಲಿತರ ಹಾಗೂ ಎಲ್ಲರ ಶೈಕ್ಷಣಿಕ ಮತ್ತು ಆರೋಗ್ಯ ಇವೆರಡು ಸಂವಿಧಾನದಿಂದ ಪಡೆದ ಪ್ರಮುಖ ಅಂಶಗಳು. ಅದರೆ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣಗಳ ಆರ್ಥಿಕ ತೊಡಕಿನಿಂದ ಸರ್ಕಾರಗಳ ಆರೋಗ್ಯದ ಮೇಲಿನ ವೆಚ್ಚವನ್ನು ಕಡಿತಗೊಳಿಸದೆ ತನ್ನ ಜವಾಬ್ದಾರಿಯುತ ಕಾರ್ಯ ನಡೆಸುವಲ್ಲಿ ಹಾಗೂ ಜನರ ಮೂಲಭೂತ ಆರೋಗ್ಯ ಅಗತ್ಯೆಗಳನ್ನು ಪೂರೈಸುವಲ್ಲಿ ಹಿಂದೇಟಾಕಿದೆ.[೩೫](ಆದಾರ: ಆಡ್ವೋಕೆಸಿ ಇಂಟರ್ ನೆಟ್)

ದಲಿತ ಮಹಿಳೆಯರಲ್ಲಿ ಶಿಕ್ಷಣದ ಕೊರತೆಯು ಆರ್ಥಿಕ ಹಿನ್ನೆಲೆಯಿಂದ ಕಂಡುಬರುತ್ತಿದೆ. ಇತ್ತೀಚಿನ ದಿನಗಳಲ್ಲಿ ಕೆಲವು ಮಹಿಳೆಯರು ಉನ್ನತ ಹುದ್ದೆ, ರಾಜಕೀಯ ಹಾಗೂ ಇನ್ನಿತರ ಅವಕಾಶಗಳು ಮಹಿಳಾ ಮೀಸಲಾತಿಯಿಂದ ಮಾತ್ರ ಸಾಧ್ಯ. ಇದಕ್ಕೆ ಕರ್ನಾಟಕ ರಾಜ್ಯ ಬೇರೆ ರಾಜ್ಯಗಳಿಗೆ ಮಾದರಿಯಾಗಿದೆ. ಆದರೆ ಇಂತಹ ಪ್ರತಿಫಲಗಳು ಬೆರಳೆಣಿಕೆಯಷ್ಟೆ ಅತ್ಯಂತ ಕಳಪೆ

ಮಟ್ಟದಲ್ಲಿ ಸಾಗಿಸುತ್ತಿದ್ದಾರೆ. ದಲಿತ ಮಹಿಳೆಯರು ಗ್ರಾಮೀಣ ಪ್ರದೇಶದಲ್ಲಿ ಶೇಕಡ ೧೯.೪೬ರಷ್ಟು ಮಾತ್ರ ಅಕ್ಷರಸ್ಥರಿದ್ದಾರೆ. ಶೇಕಡಾ ೩೦.೬೨ರಷ್ಟು ದಲಿತೇತರ ಮಹಿಳೆಯರು ಅಕ್ಷರಸ್ಥರಾಗಿದ್ದಾರೆ. ಹಾಗೆಯೇ ಭಾರತ ಕೆಲವು ಹಿಂದುಳಿದ ರಾಜ್ಯಗಳಲ್ಲಿ ಇನ್ನು ತೀರಾ ಕಡಿಮೆ ಅಕ್ಷರಸ್ಥರಿದ್ದಾರೆ. ಉದಾಹರಣೆಗೆ ಬಿಹಾರ, ರಾಜಾಸ್ಥಾನ ಹಾಗೂ ಉತ್ತರ ಪ್ರದೇಶ. ಇನ್ನೊಂದು ಪ್ರಮುಖ ಸಮಸ್ಯೆಯೆಂದರೆ ದಲಿತ ಹೆಣ್ಣುಮಕ್ಕಳು ಹೆಚ್ಚು ಶಾಲೆಯಿಂದ ಹೊರ ಉಳಿದಿದ್ದಾರೆ. ೧೯೯೦–೯೧ರ ಸಮೀಕ್ಷೆ ಪ್ರಕಾರ ಭಾರತದಲ್ಲಿ ಶೇ. ೫೩.೯೬ರಷ್ಟು ದಲಿತ ಹುಡುಗಿಯರು ಶಾಲೆಯಿಂದ ಹೊರಗೆ ಇದ್ದಾರೆ. ಇಂತಹ ಅಸಮಾನತೆಗೆ ಮೂಲ ಕಾರಣವೆಂದರೆ ಜಾತಿ ಹಾಗೂ ಲಿಂಗ ತಾರತಮ್ಯವೇ ಆಗಿದೆ.

ದಲಿತ ಮಹಿಳೆಯರ ಸಮಸ್ಯೆಗಳು ಇತರ ಮಹಿಳಾ ಸಮಸ್ಯೆಗಳಿಗಿಂತ ತೀರ ಭಿನ್ನವಾಗಿದ್ದು, ಅವಳು ನಿತ್ಯ ಅತ್ಯಾಚಾರ–ದೌರ್ಜನ್ಯಕ್ಕೆ ಒಳಗಾಗುತ್ತಿರುವುದರಿಂದ ಅವಳಿಗೆ ರಕ್ಷಣಾತ್ಮಕ ಸ್ವಾತಂತ್ರ್ಯದ ಅವಶ್ಯಕತೆ ಇದೆ. ಸದ್ಯದ ಸಂದರ್ಭದಲ್ಲಿ ಅವಳಿಗೆ ವಿವಾಹ ವ್ಯವಸ್ಥೆಯೇ ಸೂಕ್ತವಾದುದು. ಅವಳು ಹೋರಾಡಬೇಕಿರುವುದು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ವಾತಂತ್ರ್ಯಕ್ಕಾಗಿ. ಆದ್ದರಿಂದ ಸದ್ಯದ ಸಂದರ್ಭದಲ್ಲಿ ಅವಳ ಆದ್ಯತೆ ಲೈಂಗಿಕ ಸ್ವಾತಂತ್ರ್ಯವಲ್ಲ; ಸಾಮಾಜಿಕ ಸಮಾನತೆ. ಹಾಗೆಯೇ ದಲಿತ ಮಹಿಳೆಯರ ಮೇಲೆ ದಿನನಿತ್ಯ ನಡೆಯುವ ಅತ್ಯಾಚಾರ–ದೌರ್ಜನ್ಯ ಪ್ರಕರಣಗಳನ್ನು ಅಧಿಕೃತವಾಗಿ ದಾಖಲಿಸಲು ಬೇಕಾಗುವ ಮಾನಸಿಕ ಬೆಂಬಲ ಹಾಗೂ ಮಾಹಿತಿಯ ಕೊರತೆಯಿಂದ ಅವು ಗೊಚರವಾಗುತ್ತಿಲ್ಲ. ಹಾಗೆಯೇ ಮಹಿಳಾ ಸಬಲೀಕರಣಕ್ಕೆ ಬೇಕಾಗುವ ಅಂಶಗಳನ್ನು ಗುರುತಿಸಿದ್ದಾರೆ[೬೩]**(ಡಾ. ಅನುಸೂಯ ಕಾಂಬಳೆ)** ಇಡೀ ಲೇಖನದಲ್ಲಿ ಸಾಂಪ್ರದಾಯಿಕವಾಗಿ ನಡೆಯುವ ಮತ್ತು ದಿನನಿತ್ಯ ನಡೆಯುವ ದೌರ್ಜನ್ಯ ಮತ್ತು ದಬ್ಬಾಳಿಕೆಯನ್ನು ಅನಾವರಣಗೊಳಿಸಿದ್ದಾರೆ. ಏಷ್ಯಾದಲ್ಲಿ ಅಸ್ಮಿತೆ ಅಥವಾ ಐಡೆಂಟಿಟಿ ಚರ್ಚೆ ೭೦ರ ದಶಕದಲ್ಲಿ ಶುರುವಾಯಿತು. ಈ ಸಂದರ್ಭದಲ್ಲಿ ಹಲವಾರು ಐಡೆಂಟಿಟಿಗಳ ಬಗ್ಗೆ ಚರ್ಚಿಸಲಾಯಿತು. ಭಾಷೆ, ಜನಾಂಗ, ಜಾತಿ, ಎಥ್ನಿಕ್, ಲಿಂಗ, ಧರ್ಮ, ವರ್ಗ, ಸಂಸ್ಕೃತಿ, ವೃತ್ತಿ ಆಚರಣೆ, ಆಹಾರಪದ್ಧತಿ, ಕಲೆ ಮತ್ತು ಸಾಹಿತ್ಯ ಮುಂತಾದವುಗಳ ಐಡೆಂಟಿಟಿಯ ಉದ್ದೇಶ ಸಮಾಜೋ–ಸಾಂಸ್ಕೃತಿಕ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳುವುದು. ದಲಿತ ಸ್ತ್ರೀವಾದ ಎನ್ನುವುದು ತಮ್ಮನ್ನು ತಾವು ಅರಿಯಲು, ಬೇರೆ ಯವರನ್ನು ಅರಿತುಕೊಳ್ಳಲು ಹಾಗೂ ತಮ್ಮನ್ನು ತಾವು ರಕ್ಷಿಸಿ ಕೊಳ್ಳುವುದರ ಜೊತೆಗೆ ಬಂಧನದಿಂದ ಬಿಡುಗಡೆಗೊಳಿಸುವಲ್ಲಿ ಸಹಕರಿಸುತ್ತಾ ತಾನು ಬೆಳೆಯುವುದು ಮತ್ತು ಇತರರನ್ನು ಬೆಳೆಸುವಂತದ್ದಾಗಿದೆ[೬೪]**(ಅರವಿಂದ ಮಾಲಗತ್ತಿ, ೨೦೦೪)** ಈ ಪ್ರಬಂಧದ ಒಟ್ಟು ಸಾರಂಶದಲ್ಲಿ ದಲಿತ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಅವರು ಇತರರಿಗಿಂತ ಹೆಚ್ಚಾಗಿ ಶೋಷಣೆಗೆ ಒಳಗಾಗಿದ್ದಾರೆ ಎಂದು ವಾದಿಸಿದ್ದಾರೆ(ಡಾ. ನೇತ್ರಾವತಿ ಕೆ.ವಿ). ದೈಹಿಕ ಅನುಭೋಗ ವಿಜೃಂಭಿಸುತ್ತಾ ಸುಖದ ಕಲ್ಪನೆ ಸ್ಟ್ಯಾಂಡರ್ಡ್ ಪದಾರ್ಥವಾಗಿ ಪಲ್ಲಟಗೊಂಡು ಲಿಂಗಸಮಾನತೆಯ ಭ್ರಮೆಯನ್ನು ಹುಟ್ಟುಹಾಕಿರುವುದು. ಇಲ್ಲಿ ಲೈಂಗಿಕತೆಯ

ಮತ್ತು ಅದರ ಸುತ್ತಮುತ್ತವಿರುವ ಮಡಿವಂತಿಕೆಗಳ ಬಗ್ಗೆ ದೇಹ ಎನ್ನುವುದು ಅಧುನಿಕೋತ್ತರ ಜಗತ್ತಿನಲ್ಲಿ ಕೇಂದ್ರ ಬಿಂದುವಾಗಿರುವ ಸಂಗತಿಗಳನ್ನು ತಮ್ಮ ಅಧ್ಯಯನದಲ್ಲಿ ಚರ್ಚಿಸಿದ್ದಾರೆ. ಇಲ್ಲಿ ದೇವದಾಸಿಯರ ನಿಷೇಧ ಕಾನೂನು ಮಧ್ಯಮ ವರ್ಗದ ಸಮಾಜದವರಿಗೆ ಒಳ್ಳೆಯ ಸಭ್ಯ ಮೌಲ್ಯಗಳಾಗಿವೆ ಮತ್ತು ಮಾನ್ಯತೆ ಪಡೆಯುತ್ತವೆ. ಹಾಗೆಯೇ ಸೆಕ್ಸ್ ವರ್ಕರ್ ಪ್ರಶ್ನೆ ಕೇವಲ ಮಹಿಳೆಯರಿಗೆ ಮಾತ್ರ ಏಕೆ? ಗಂಡಸು ಸೆಕ್ಸ್ ವರ್ಕರ್ಸ್ ಇಲ್ಲವೇ? ಅದನ್ನು ಮಾಧ್ಯಮಗಳೇಕೆ ಬಚ್ಚಿಟ್ಟಿವೆ. ಹಾಗೆಯೇ ಸೆಕ್ಸ್ ವರ್ಕ್, ಬಾರುಗಳಲ್ಲಿ ಕೆಲಸ ಮಾಡುವ ಹುಡುಗಿಯರು ಬಂದಿರುವ ಹಿನ್ನೆಲೆಯನ್ನು ನೋಡಿದರೆ ತಳಸಮುದಾಯ ಮತ್ತು ದಲಿತರೇ ಆಗಿರುತ್ತಾರೆ. ಅದಕ್ಕೆ ವ್ಯತಿರಿಕ್ತವಾಗಿ ಕುಲೀನ ಮನೆತನದವರು ಇಂತಹ ವೃತ್ತಿಗಳನ್ನು ಆಯ್ಕೆ ಮಾಡಿಕೊಳ್ಳಲಾರರು[೩೮]**(ಡೊಮಿನಿಕ್, ೨೦೦೮)** ಇನ್ನೂ ಮುಂದುವರಿದು ಹೇಳಿದರೆ ಇತರೆ ವರ್ಗದವರು ಬಂದರೂ ಸಹ ಬೆರಳೆಣಿಕೆಯಷ್ಟು ಇರಬಹುದು ಎಂಬ ಅನುಮಾನಿತ ಸತ್ಯವನ್ನು ಪ್ರತಿಪಾಧಿಸಬಹುದು. ಅಧುನಿಕ ಕಾಲದಲ್ಲಿಯೂ ಸಹ ದೇವದಾಸಿಯಂತ ಜ್ವಲಂತ ಸಮಸ್ಯೆಗಳನ್ನು ತೀವ್ರವಾಗಿ ಖಂಡಿಸಿದ್ದಾರೆ. ಅದಲ್ಲದೆ ಮಹಿಳೆಯರ ಮೇಲಿನ ಅತ್ಯಾಚಾರ, ಶಿಕ್ಷಣದಿಂದ ವಂಚನೆ, ದುಡಿಮೆಯಲ್ಲಿ ಇವರ ಕಡಗಣನೆ ಇತ್ಯಾದಿ ಸಮಸ್ಯೆಗಳು ಈಗಲೂ ಜೀವಂತವಾಗಿವೆ. ಸಾಮಾನ್ಯ ಮಹಿಳೆಗಿಂತ ದಲಿತ, ಅದಿವಾಸಿ ಹಾಗೂ ಹಿಂದುಳಿದ ಮಹಿಳೆಯರ ಸ್ಥಿತಿ ಚಿಂತಾಜನಕವಾಗಿದೆ[೩೯]**(ನೀರಾ ದೇಸಾಯಿ ಮತ್ತು ಉಷಾ ಠಕ್ಕರ್)** ಮಹಿಳೆಯನ್ನು ತಾಯಿಯಾಗಿ, ತಂಗಿಯಾಗಿ, ಅಕ್ಕನಾಗಿ ಮತ್ತು ಹೆಂಡತಿಯಾಗಿ ಚೌಕಟ್ಟಿನ ಪರಿಮಿತಿಯಲ್ಲಿದ್ದಾಗ ಮಾತ್ರ ಗೌರವಿಸುತ್ತಾರೆ. ದಂಧೆ ಮಾಡುವ ಮಹಿಳೆಯರು ಈ ಮೇಲಿನ ಎಲ್ಲಾ ಪಾತ್ರಗಳನ್ನು ನಿರ್ವಹಿಸಿದರೂ ಇವರಿಗೆ ಸಿಗುವ ಬಹುಮಾನ ದೌರ್ಜನ್ಯ, ಅವಮಾನ ಮತ್ತು ಹಿಂಸೆ[೪೦]**(ಮನೋರಂಜನಿ)** ಹೀಗೆ ಮಹಿಳೆ ಮತ್ತು ದಲಿತ, ಆದಿವಾಸಿ, ಅಲ್ಪಸಂಖ್ಯಾತ ಹಾಗೂ ಧಾರ್ಮಿಕ ಕಟ್ಟುಪಾಡುಗಳಿಗೆ ಸಿಕ್ಕಿಕೊಂಡಿರುವ ಮಹಿಳೆಯರಿಗೆ ಹೆಚ್ಚೆಚ್ಚು ಅವಮಾನಗಳು ಮತ್ತು ಸಮಸ್ಯೆಗಳು ಸಮಾಜದಲ್ಲಿ ಉಲ್ಬಣಗೊಳ್ಳುತ್ತವೆ. ಹೀಗೆ ಮಹಿಳೆ ಮತ್ತು ದಲಿತ ಹಿನ್ನೆಲೆಯಿರುವ ಮಹಿಳೆಯರನ್ನು ಗಮನಿಸಿದಾಗ ಇತರರಿಗಿಂತ ಹೆಚ್ಚು ತೇಜೋವಧೆಗೆ ಗುರಿಯಾಗುತ್ತಾರೆ. ಇನ್ನು ಮುಂದೆ ನೋಡುವುದಾದರೆ ಕುಲೀನ ಮನೆಯಿಂದ ಬಂದವರಿಗೆ ಮತ್ತು ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯು ಕಡಿಮೆಯಲ್ಲಿರುವವರು ಹೆಚ್ಚು ತೊಂದರೆಯನ್ನು ಅನುಭವಿಸುತ್ತಾರೆ ಎಂಬುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ದೇವದಾಸಿ ಸಮುದಾಯವನ್ನು ನೋಡಿದರೆ ಅವರ ಸ್ಥಿತಿಗತಿ ಇನ್ನೂ ಕೆಟ್ಟದಾಗಿದೆ.

### ೨.೩. ದೇವದಾಸಿಯರು ಮತ್ತು ದೇವದಾಸಿ ಪದ್ಧತಿಯ ಕುರಿತ ಸಮಗ್ರ ಚರ್ಚೆಗಳು

ಈ ಅಧ್ಯಯನದ ಸ್ಪಷ್ಟವಾದ ಮತ್ತು ವಿಶಾಲವಾದ ಉದ್ದೇಶವೇನೆಂದರೆ ಅಧುನಿಕತೆಯ ಹಿನ್ನೆಲೆಯಲ್ಲಿ ಮತ್ತು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ದೇವದಾಸಿಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಅಧುನಿಕ ಪ್ರಕ್ರಿಯೆಯ ಸಂಧರ್ಭದಲ್ಲಿ ಅಧುನಿಕ

ಶಿಕ್ಷಣ, ತಂತ್ರಜ್ಞಾನ, ಪಶ್ಚಿಮದ ಅಭಿವೃದ್ಧಿಯ ಅನುಕರಣೆ ಮುಂತಾದವುಗಳ ನಡುವೆ ಭಾರತದಂತಹ ಸಾಮಾಜಿಕ ಅಸಮಾನತೆಯಿರುವ ದೇಶದಲ್ಲಿ ಜಾತಿ, ವರ್ಗ ಮತ್ತು ಲಿಂಗ ಮುಂತಾದವುಗಳ ತಾರತಮ್ಯದ ಬದುಕಿನಲ್ಲಿ ದೇವದಾಸಿ ಸಮುದಾಯದ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಅದ್ದರಿಂದ ದೇವದಾಸಿಯ ಪದ್ಧತಿಯನ್ನು ಜಗತ್ತಿನ ಇತರೆ ದೇಶಗಳಲ್ಲಿನ ಪದ್ಧತಿ ಮತ್ತು ಅದರ ಚರ್ಚೆ, ಭಾರತದಲ್ಲಿ ಮತ್ತು ಇತರೆ ರಾಜ್ಯಗಳಲ್ಲಿರುವ ಪದ್ಧತಿಯ ಬಗ್ಗೆ ಇರುವ ಅಧ್ಯಯನಗಳನ್ನು ಚರ್ಚೆಗೆ ತರಲಾಗಿದೆ. ಕರ್ನಾಟಕ ರಾಜ್ಯದಲ್ಲಿನ ಜಿಲ್ಲೆಗಳಲ್ಲಿ ಇದಕ್ಕೆ ಸಂಬಂಧಿಸಿದ ಸಮಗ್ರ ಚರ್ಚೆಯನ್ನು ಮಾಡಲಾಗಿದೆ ಮತ್ತು ಪ್ರಸ್ತುತ ಅಧ್ಯಯನದ ಶೀರ್ಷಿಕೆಯು **ಅಭಿವೃದ್ಧಿ ಮತ್ತು ದೇವದಾಸಿಯರು: ಸಮಾಜೋ–ಆರ್ಥಿಕ ವಿಶ್ಲೇಷಣೆ ಕೊಪ್ಪಳ ಜಿಲ್ಲೆ ಅನುಲಕ್ಷಿಸಿ** ಎಂಬ **ವಿಷಯವಾಗಿರುವುದರಿಂದ ಹಾಗೂ** ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯರ ಸಂಖ್ಯೆಯು ಅಧಿಕವಾಗಿರುವುದರಿಂದ ಹಾಗೂ ಹೈದರಾಬಾದ್ ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿರುವ ಈ ಜಿಲ್ಲೆಯ ಅಧ್ಯಯನವು ಸಹ ಅಗತ್ಯವಿರುವುದರಿಂದ ಈ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದರಿಂದ ಸ್ಥಳೀಯವಾಗಿರುವ ಪದ್ಧತಿಯ ಕುರಿತು ಈಗಾಗಲೇ ಅಗಿರುವ ಚರ್ಚೆಯನ್ನು ಸಹ ಪ್ರಸ್ತುತ ಅಧ್ಯಯನಕ್ಕೆ ಸೂಕ್ತ ರೀತಿಯಲ್ಲಿ ಮಾಡಲಾಗಿದೆ.

**೨.೩.೧. ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿರುವ ದೇವದಾಸಿ ಪದ್ಧತಿ**

ದೇವದಾಸಿ ಪದ್ಧತಿಯನ್ನು ಮತ್ತು ಇದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಧಾರ್ಮಿಕ ವೇಶ್ಯಾವೃತ್ತಿ ಎಂದು ತಿಳಿಯಲಾಗಿತ್ತು, ಪ್ರತಿನಿಧಿರೂಪವಾದ ದೇವದಾಸಿಯೂ, ಸುಂದರ ಕನ್ಯೆಯೂ ಮತ್ತು ಸಂಗೀತ ನೃತ್ಯಾದಿ ಕಲೆಗಳಲ್ಲಿ ಪರಿಣತಳಾಗಿರುತ್ತಿದ್ದಳು. ಸಾರ್ವಜನಿಕರಲ್ಲಿ ಒಳ್ಳೆಯ ಸಲಿಗೆಯ ಮನೋಭಾವನೆಯಿಂದ ಉಚ್ಛ್ರಾಯ ಸ್ಥಿತಿಯಲ್ಲಿ ಸಾಂಸ್ಕೃತಿಕ ನೆಮ್ಮದಿ ಹಾಗೂ ತೃಪ್ತಿಯಿಂದ ಕೂಡಿದ ಜೀವನ ನಡೆಸುತ್ತಿದ್ದಳು. ಕ್ರಮೇಣ ತನ್ನ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿ ದೇವಸ್ಥಾನದಲ್ಲಿ ಗುಲಾಮಳಂತೆ ಚಾಕರಿ ಮಾಡುತ್ತಾ ಕಾಲ ಸಾಗಿಸುತ್ತಿದ್ದಳು ಎಂದು ಗುರುತಿಸಿದ್ದಾರೆ. ಶುದ್ಧ ಹಾಗೂ ಪವಿತ್ರ ದೇಹದೊಂದಿಗೆ, ದೈವದ ಬಗ್ಗೆ ಸಂಪೂರ್ಣ ನಿಷ್ಠೆಯ ದ್ಯೋತಕವಾಗಿ ತನ್ನನ್ನು ತಾನು ಅರ್ಪಿಸಿಕೊಳ್ಳುವ ಪದ್ಧತಿ ಸ್ತ್ರೀ–ಪುರುಷರಿಬ್ಬರಲ್ಲಿ ಇತ್ತು. ಈ ಪದ್ಧತಿ ಪ್ರಾಚೀನ ಗ್ರೀಸ್ ಮತ್ತು ಈಜಿಪ್ಟಲ್ಲಿ ಕಂಡುಬರುತ್ತದೆ. ಈ ಪದ್ಧತಿ ಸುಮಾರು ೧೭೦೦ ವರ್ಷಗಳಿಗಿಂತಲೂ ಹಿಂದಿನದು ಎಂದು ಗುರುತಿಸಿದ್ದಾರೆ.

ದೇವದಾಸಿಯ ಉಗಮ ಮತ್ತು ಬೆಳವಣಿಗೆಯ ಬಗ್ಗೆ ಹೆಚ್ಚು ಚರ್ಚೆಯನ್ನು ಗಮನಿಸಿದರೆ ಇಲ್ಲಿ ಸಾಮಾಜಿಕ ಸಿದ್ಧಾಂತಗಳಿಂದ ಈ ವ್ಯವಸ್ಥೆ ಹೇಗೆ ಸಂಬಂಧವಿದೆ ಎಂಬುದನ್ನು ತಿಳಿಯಪುದು. ವೃತ್ತಿ ಮತ್ತು ಮಾತೃದೇವತೆಗಳ ಸಿದ್ಧಾಂತ, ಧಾರ್ಮಿಕ ಸಂಪ್ರದಾಯ ಸಿದ್ಧಾಂತ, ಸಂಸ್ಕೃತೀಕರಣ ಸಿದ್ಧಾಂತ, ಜನಾಂಗೀಯ, ರಾಜಕೀಯ ಮತ್ತು ನಿಸ್ವಾರ್ಥ, ಮಾತೃಪ್ರಧಾನತೆಯಿಂದ ಪುರುಷಪ್ರಧಾನತೆಗೆ ಮುಂತಾದ ಸಿದ್ಧಾಂತಗಳಲ್ಲಿ ಇದರ ಉಗಮದ ಬಗ್ಗೆ ಉಲ್ಲೇಖಗಳಿವೆ. ದೇವರ ಹೆಸರಲ್ಲಿ ಮಹಿಳೆಯರನ್ನು

ಅರ್ಪಿಸುವುದು ಸಾರ್ವತ್ರಿಕ ಆಚರಣೆಯಾಗಿತ್ತು. ಈ ರೂಢಿ ಪದ್ಧತಿಯು ಕಾಲ ಮತ್ತು ವಿವಿಧ ಸಂಸ್ಕೃತಿಗಳ ಹಿನ್ನೆಲೆಗಳಿಂದ ಪ್ರಪಂಚದಲ್ಲಿ ಹಲವು ಕಡೆ ಈ ಪದ್ಧತಿಯಿತ್ತು. ಸಾವಿರಾರು ವರ್ಷಗಳ ಹಿಂದೆ ಮೆಸೊಪೊಟೊಮಿಯ, ಗ್ರೀಕ್, ಈಜಿಪ್ಟ್ ಮತ್ತು ಬ್ಯಾಬಿಲೋನಿಯ ಮುಂತಾದ ದೇಶಗಳಲ್ಲಿ ಧಾರ್ಮಿಕ ಹೆಸರಲ್ಲಿ ಮಹಿಳೆಯರನ್ನು ಅರ್ಪಿಸುವ ಪದ್ಧತಿ ಇತ್ತು ಹಾಗೂ ಈ ಪದ್ಧತಿಯು ತುಂಬಾ ಪವಿತ್ರವೆಂದು ನಂಬಲಾಗಿತ್ತು. ಸಂಶೋಧಕ ಜೇಮ್ಸ್ ಫ್ರೇಜರ್ ಅವರ ಪ್ರಕಾರ ಈ ಪದ್ಧತಿಗೆ ಬಹುಮುಖ್ಯ ಕಾರಣಗಳನ್ನು ಎರಡು ರೀತಿಯಲ್ಲಿ ವಿವರಿಸಿದ್ದಾನೆ. ಒಂದು ಈ ಪದ್ಧತಿಯ ಬಗ್ಗೆ ಹೊಸ ಮಿಥ್ಯೆಗಳನ್ನು ಸೃಷ್ಟಿಸಿದ್ದು ಮತ್ತು ಪ್ರಚಾರ ಮಾಡಿದ್ದು, ಇನ್ನೊಂದು ಗಂಡಸರ ಬಲವಂತ ಹಾಗೂ ಅಧಿಕಾರಗಳಿಂದ ಈ ಪದ್ಧತಿಯನ್ನು ಹೊಗಳಿರುವುದು. ಹಾಗೆಯೇ ಈ ಪದ್ಧತಿಯ ಬಗ್ಗೆ ಶುದ್ಧ ಮತ್ತು ಅಶುದ್ಧ ಪರಿಕಲ್ಪನೆಗಳ ಕ್ರಿಯಾವಿಧಿಗಳನ್ನು ಪರಿಚಯಿಸಿದ್ದು. ಇನ್ನೊಂದು ಮುಖ್ಯವಾಗಿ ಮಾತೃಪ್ರಧಾನತೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ಈ ಪದ್ಧತಿಗಳ ಆಚರಣೆಗಳನ್ನು ವರ್ಗಾಯಿಸಿದ್ದು ಈ ಪದ್ಧತಿಯ ಉಗಮಕ್ಕೆ ಕಾರಣವಾಗಿದೆ"(**ಎವಲ್ಯೂಷನ್ ಆಫ್ ದಿ ದೇವದಾಸಿ ಸಿಸ್ಟಮ್, ವೀಕೀ ಜೆಂಡರ್, ಇಂಟರ್ನೆಟ್**)

ದೇವದಾಸಿ ಎಂಬುದನ್ನು ಸಮಾಜೋ-ಧಾರ್ಮಿಕ ಸಂಸ್ಥೆಯಲ್ಲಿ ಐತಿಹಾಸಿಕ ಸನ್ನಿವೇಶದಲ್ಲಿ ನೋಡಿದಾಗ ದೇವದಾಸಿಯರು ದೇವಸ್ಥಾನದ ಮಹಿಳೆಯರಾಗಿದ್ದರು, ಉನ್ನತ ಗೌರವಕ್ಕೆ ಪಾತ್ರ ರಾಗಿದ್ದರು, ಹಾಗೆಯೇ ಶೊಷಣೆಗೆ ಒಳಗಾಗಿದ್ದರು. ಭಾರತಕ್ಕಿಂತ ಮೊದಲೇ ಈ ತರದ ಪದ್ಧತಿ ಅಂದರೆ ವಯಸ್ಸಿನ ಹುಡುಗಿಯರನ್ನು ದೇವರ ಹೆಸರಿನಲ್ಲಿ ಅರ್ಪಿಸಿ ಬಿಡಲಾಗುತ್ತಿತ್ತು. ಅದರಲ್ಲಿ ಪ್ರಾಚೀನ ನಾಗರಿಕತೆಗಳಾದ ಬ್ಯಾಬಿಲೊನಿಯಾ, ಮೆಸೊಪೊಟೋಮಿಯಾ, ಗ್ರೀಕ್, ಈಜಿಪ್ಟ್, ಸೈಪ್ರಸ್ ಮತ್ತು ಸಿರಿಯಾ ಮುಂತಾದ ಪ್ರದೇಶಗಳಲ್ಲಿ ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ಬಿಟ್ಟು ದೇವರ ಕೆಲಸ ಕಾರ್ಯದಲ್ಲಿ ಕೆಲಸ ಮಾಡುತ್ತಿದ್ದರು. ಹಾಗೆಯೇ ಲೈಂಗಿಕ ಸೇವೆಯನ್ನು ದೂರದಿಂದ ಬಂತಹ ಯಾತ್ರಿಗಳಿಗೆ ಮಾಡುತ್ತಿದ್ದರು. ಇದರಿಂದ ಬಂದ ಆದಾಯವು ಪ್ರಮುಖವಾದ ಆದಾಯವಾಗಿತ್ತು, ಹಾಗೆಯೇ ಬಂದಂತಹ ಗಿರಾಕಿಗಳನ್ನು ಲೈಂಗಿಕತೆ ಮತ್ತು ಇತರೆ ಲಲಿತಕಲೆಗಳಿಂದ ತೃಪ್ತಿಪಡಿಸುತ್ತಿದ್ದರು. ಇದನ್ನು ಗಮನಿಸಿದರೆ ಭಾರತವು ಈ ಪದ್ಧತಿಯಿಂದ ಹೊರತಾಗಿರಲಿಲ್ಲ. ಆದರೆ ವೇದ ಮತ್ತು ಉಪನಿಷತ್ತುಗಳಲ್ಲಿಯೂ ಸಹ ದೇವದಾಸಿ ಪದ್ಧತಿಯ ಬಗ್ಗೆ ಹೆಸರಿಸಿಲ್ಲ. ಆದರೆ ಪುರಾಣಗಳಲ್ಲಿ ಹೆಣ್ಣುಮಕ್ಕಳನ್ನು ಸೂರ್ಯ ದೇವನಿಗೆ ಅರ್ಪಿಸುತ್ತಿದ್ದರು ಎಂಬುದನ್ನು ದಾಖಲಿಸಲಾಗಿದೆ. ಅದರಲ್ಲೂ ಆಗಿನ ರಾಜರು ಮತ್ತು ಶ್ರೀಮಂತ ವ್ಯಾಪಾರಸ್ಥರು ತಮ್ಮ ಏಳಿಗೆ ಮತ್ತು ಪುಣ್ಯ ಗಳಿಸುವುದಕ್ಕೆ ಪುರೋಹಿತರ ಮಾರ್ಗದರ್ಶನದಂತೆ ದೇವರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಅರ್ಪಿಸುತ್ತಿದ್ದರು. ಹಾಗೆಯೇ ಭಾರತಕ್ಕೆ ಬಂದಂತಹ ಚೀನಿ ಯಾತ್ರಿಕನಾದ ಹ್ಯೂಯೆನ್ ತ್ಸಾಂಗನ ಬರವಣಿಗೆಯಲ್ಲಿ ಹಿಂದಿನ ಕಾಲದಲ್ಲಿ ಅಂದರೆ ೭ನೆಯ ಶತಮಾನದಲ್ಲಿ ದೇವದಾಸಿ ಪದ್ಧತಿಯು ಸಮೃದ್ಧವಾಗಿ ಮತ್ತು ವಿಶಾಲವಾಗಿ ಸ್ಥಾಪಿತವಾಗಿತ್ತು. ಅದಕ್ಕೆ ಉದಾಹರಣೆಯೆಂದರೆ ಆಗಿನ ಭಾರತದ ಮುಲ್ತಾನ್ ಪ್ರದೇಶದಲ್ಲಿದ್ದ ಸೂರ್ಯ ದೇವಸ್ಥಾನದಲ್ಲಿ(ಈಗಿನ ಪಾಕೀಸ್ತಾನದಲ್ಲಿದೆ)

ಅಧಿಕ ಸಂಖ್ಯೆಯಲ್ಲಿದ್ದರು ಎಂದು ತನ್ನ ಬರಹಗಳಲ್ಲಿ ದಾಖಲಿಸಿದ್ದಾನೆ[೬](**ಜ್ಯೋತ್ಸನಾ ಕಾಮತ್, ೨೦೧೪: ದೇವದಾಸಿ; ಸರ್ವೆಂಟ್ ಆಫ್ ಗಾಡ್**).

**ಬ್ಯಾಬಿಲೋನಿಯಾ:** ಹಮ್ಮುರಬಿ ರಾಜನ ಕಾಲದಲ್ಲಿ ಇಷ್ತಾರ ಎಂಬ ಮಾತೃದೇವತೆಯ ಪೂಜೆ ಜಾರಿಯಲ್ಲಿತ್ತು. ಇದರ ಹೆಸರಿನಲ್ಲಿ ಪವಿತ್ರ ವೇಶ್ಯಾವಾಟಿಕೆ ನಡೆಯುತ್ತಿತ್ತು. ಆ ಕಾಲಘಟ್ಟದಲ್ಲಿ ಇಲ್ಲಿನ ಫಲವತ್ತತೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರುತ್ತಿತ್ತು. ಇಂತಹ ಅನಾನುಕೂಲಗಳನ್ನು ತಪ್ಪಿಸಲು ಕೆಲವು ನಿವಾರಕಗಳನ್ನು ಹುಡುಕಬೇಕಾಯಿತು. ಅಂತಹ ಸಂದರ್ಭದಲ್ಲಿ ಪ್ರಣಯ ದೇವತೆಯಾಗಿ ಮತ್ತು ಫಲವತ್ತತೆಯ ದೇವತೆಯಾಗಿ ಮಹಿಳೆಯರು ತಮ್ಮ ಪಾತ್ರವನ್ನು ನಿರ್ವಹಿಸ ಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು(**ಫ್ರೇಜರ್-೧೯೨೮ ಮತ್ತು ಟಾವ್ನಿ ಹಾಗೂ ಪೆಂಜರ್-೧೯೨೫ ಉಲ್ಲೇಖ; ಜೋಗನ್ ಶಂಕರ್; ದೇವದಾಸಿ ಸಂಪ್ರದಾಯ,೧೯೯೩**). **ಪಶ್ಚಿಮ ಆಫ್ರಿಕಾ** ಮತ್ತು **ಉತ್ತರ ಆಫ್ರಿಕಾದಲ್ಲಿ** ಮಾತೃದೇವತೆಯ ಹೆಸರಿನಲ್ಲಿ ಪವಿತ್ರ ಸೂಳೆಗಾರಿಕೆ ಇತ್ತೆಂದು ಜರ್ಟನ್ ಮತ್ತು ಫ್ರೇಜರ್ ಅವರ ಕೃತಿಗಳಲ್ಲಿ ತಿಳಿಸಿದ್ದಾರೆ. ಗಂಡು ಅಥವಾ ಹೆಣ್ಣು ಯಾರೆಯಾಗಲಿ ಒಮ್ಮೆ ದೇವರಿಗೆ ಅರ್ಪಿಸಿದರೆ ಅವರನ್ನು ಕೋಸಿಯೋ ಎಂದು ಕರೆಯಲಾಗುತ್ತಿತ್ತು. ಅಂದರೆ ಉಪಯೋಗವಿಲ್ಲದವರು ಎಂದು ಕರೆಯಲಾಗುತ್ತಿತ್ತು. ಯಾಕೆಂದರೆ ಒಂದು ದೇವತೆಗೆ ಅರ್ಪಿಸಲ್ಪಟ್ಟರೆ ಅವರು ದೇವರ ಸೇವೆಗೆ ಹೋಗುವುದು ಸಹಜವಾಗುತ್ತದೆ. ಅಂತಹವರು ದೇವರ ಸ್ವತ್ತಾಗುತ್ತಾರೆ. ಸೆಮೆಟಿಕ್ ಅದಿವಾಸಿಗಳಲ್ಲಿ **ಸೆಮೆಟಿಕ್** ಮಾತೃದೇವತೆಯನ್ನು ಆರಾಧಿಸುತ್ತಿದ್ದರು ಮತ್ತು ದೇವರ ಉತ್ಸವಗಳಲ್ಲಿ ಎಲ್ಲಾ ಬಗೆಯ ಅಶ್ಲೀಲ ಚೇಷ್ಟೆಗಳನ್ನು ಪ್ರದರ್ಶಿಸುತ್ತಿದ್ದರು. **ಸಿರಿಯಾ, ಫೋನೆಷಿಯಾ ಮತ್ತು ಕನಾನ್**ಗಳಲ್ಲಿ ಮಾತೃದೇವತೆಯ ಹೆಸರಿನಲ್ಲಿ ಧಾರ್ಮಿಕ ವೇಶ್ಯಾಗಾರಿಕೆ ಪದ್ಧತಿಯಿತ್ತು ಮತ್ತು ಇಲ್ಲಿ ಲೈಂಗಿಕತೆಯ ಕುರಿತ ಚರ್ಚೆ ಮತ್ತು ವಿಚಾರಗಳು ಮುಖ್ಯವಾಗಿದ್ದವು ಎಂದು ಟಾವ್ನಿ ತಮ್ಮ ಅಧ್ಯಯನಗಳಲ್ಲಿ ಗುರುತಿಸಿದ್ದಾರೆ. **ಗ್ರೀಸ್ ದೇಶ:** ಸುಗ್ಗಿ ಪೂಜೆ ವರ್ಷಕ್ಕೊಂದು ಬಾರಿ ನಡೆಯುತ್ತಿತ್ತು ಆ ಸಂದರ್ಭದಲ್ಲಿ ಎಲ್ಲರೂ ವ್ಯಭಿಚಾರ ಮಾಡಬೇಕಿತ್ತು ಹಾಗೆ ಮಾಡದಿದ್ದರೆ ಪಾಪವೆಂದು ಪರಿಗಣಿತವಾಗುತ್ತಿತ್ತು. ಸಂಭೋಗ ಪೂಜೆ, ಲೈಂಗಿಕ ಉತ್ಸವಗಳನ್ನು ನಡೆಸುವುದು, ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಲೈಂಗಿಕ ಕಾರ್ಯ ಮಾಡಬೇಕು, ಊರಿಗೆ ಕ್ಷೇಮ ಮತ್ತು ಮಂಗಳ ವಾಗಲೆಂದು ಈ ಕಾರ್ಯಗಳನ್ನು ಮಾಡುತ್ತಿದ್ದರು. ಹಾಗೆಯೇ ಮಾಡದವರನ್ನು ಪಾಪಿಗಳು ಮತ್ತು ದೇಶದ್ರೋಹಿಗಳೆಂದು ಕರೆಯಲಾಗುತ್ತಿತ್ತು ಅದ್ದರಿಂದ ಪೂಜೆಯನ್ನು ಅತಿ ನಿಷ್ಠೆಯಿಂದ ಮತ್ತು ವೈಭವದಿಂದ ಮಾಡುತ್ತಿದ್ದರು. **ಸ್ವೀಡನ್ ಮತ್ತು ಅಥೆನ್ಸ್ ದೇಶ:** ಪಶು, ಪಕ್ಷಿ ಮತ್ತು ಸಸ್ಯ ಪ್ರಪಂಚದ ಫಲವತ್ತತೆಯ ಸಂಕೇತವಾಗಿ ಮಾತೃದೇವರುಗಳನ್ನು ಪೂಜಿಸುತ್ತಿದ್ದರು. ಪ್ರತಿ ವರ್ಷ ಮಧಿರಾ ದೇವತೆಯೊಂದಿಗೆ ಮದುವೆಗಳು ಅಲ್ಲಿನ ರಾಣಿಯರೊಂದಿಗೆ ನಡೆಯುವ ಸಂಪ್ರದಾಯವಿತ್ತು. ಇದು ದ್ರಾಕ್ಷಿ ಮತ್ತು ಇತರ ಫಲ ವೃಕ್ಷಗಳ ಸಮೃದ್ಧಿ ಇಂತಹ ಪೂಜೆಯ ಗುರಿಯಾಗಿತ್ತು. **ಪ್ರಾಚೀನ ಕಾಲದ ಇಸ್ರೇಲ್:** ಧಾರ್ಮಿಕ ವ್ರತಗಳಲ್ಲಿ ಹೆಣ್ಣು-ಗಂಡು ದೇವರ ದಾಸಿಯರಾಗಿ ಪವಿತ್ರ

ವೇಶ್ಯೆರಾಗುತ್ತಿದ್ದು ತಿಳಿದುಬಂದಿದೆ. ಬರೀ ಸಾಮಾನ್ಯ ಸ್ತ್ರೀಯರು ವೇಶ್ಯಾಗಾರಿಕೆ ಅನುಸರಿಸುತ್ತಿದ್ದರು ಎಂದಲ್ಲ; ಅಲ್ಲಿನ ರಾಜರ ಮತ್ತು ಆರ್ಚಕರು ಕೂಡಾ ಹೆಣ್ಣುಗಳನ್ನು ಧಾರ್ಮಿಕ ವೇಶ್ಯಾಗಾರಿಕೆಗೆ ಆರ್ಪಿಸುತ್ತಿದ್ದರು. **ಜಾವ ದ್ವೀಪ:** ಬೆಳೆಯ ಕಾಲದಲ್ಲಿ ಹೊಲದ ಯಜಮಾನ ಮತ್ತು ಅವನ ಹೆಂಡತಿ ನಗ್ನರಾಗಿ ಹೊಲಕ್ಕೆ ಹೋಗಿ ಭಕ್ತಿ ಭಾವದಿಂದ ಹೊಲಕ್ಕೆ ಪ್ರದಕ್ಷಿಣೆ ಮಾಡಿ ಪೂಜಿಸುತ್ತಿದ್ದರು. ಪೂಜೆಗೆ ಮುಂಚೆ ಉಪವಾಸ ವ್ರತ ಮಾಡಿ ಮತ್ತು ಹೊಲದ ಸುತ್ತ ಪ್ರದಕ್ಷಿಣೆ ಮಾಡಿ ಹೊಲದ ಮಧ್ಯೆ ಗಂಡ ಹೆಂಡತಿಯರು ಸಂಭೋಗಿಸುತ್ತಿದ್ದರು. ಈ ಕಾರ್ಯದಿಂದ ಬೆಳೆ ಚೆನ್ನಾಗಿ ಬರುತ್ತದೆಂದು ಅವರ ನಂಬಿಕೆ. ಇಂತಹ ನಂಬಿಕೆ ಮಧ್ಯ ಅಮೆರಿಕದಲ್ಲೂ ಇತ್ತು. **ಇಟಲಿ:** ಮಾತೃದೇವತಾ ಸಂಪ್ರದಾಯ ಇದ್ದ ಕಡೆಯೆಲ್ಲಾ ದೇವದಾಸಿ ಸಂಪ್ರದಾಯ ವಿಶೇಷವಾಗಿ ಪ್ರಚಾರದಲ್ಲಿರುವುದು ಕಂಡುಬರುತ್ತದೆ. ಇಲ್ಲಿನ ಪ್ರಮುಖ ಬೆಳೆ ದ್ರಾಕ್ಷಿ. ಅದರ ಸಮೃದ್ಧಿಯ ಅಧಿದೇವತೆಯಾದ ಹೀರಾಳ ಹೆಸರಿನಲ್ಲಿಯೂ ದೇವದಾಸಿಯರನ್ನು ಬಿಡಲಾಗುತ್ತಿತ್ತು. **ಲಿಬಿಯಾ ದೇಶ:** ಟಾಲೆಸ್ ಎಂಬ ನಗರದ ಹತ್ತಿರದಲ್ಲಿ ಅಲ್ಲಿನ ಚರಿತ್ರೆ ಸಂಶೋಧಕರು ಅಗೆದ ಒಂದು ಪುರಾತನ ಪಟ್ಟಣದ ದೇವಾಲಯದಲ್ಲಿ ಧಾರ್ಮಿಕ ವ್ಯಭಿಚಾರ ನಡೆಯುತ್ತಿತ್ತು ಮತ್ತು ಅದರಿಂದ ಬಂದ ಹಣವನ್ನು ದೇವಾಲಯಕ್ಕೆ ದಾನ ಮಾಡಲಾಗುತ್ತಿತ್ತು. ಇದನ್ನು ರಾಮೆ ಎಂದು ಇತಿಹಾಸದಲ್ಲಿ ದಾಖಲಿಸಿದ್ದಾರೆ. **ಸಿರಿಯಾ ದೇಶ:** ಹೇಲಿಯೊ ಪೋಲಿಸ್ ಎಂಬ ಊರಿನಲ್ಲಿ ಪ್ರತಿಯೊಬ್ಬ ಮಹಿಳೆ ತನ್ನ ಲೈಂಗಿಕ ಪೂಜೆ ಮಾಡಬೇಕು. ಮಕ್ಕಳ ತಾಯಿಯಾದವರು ಹಾಗೂ ವಿವಾಹವಾಗದ ಹುಡುಗಿಯರು ಶ್ರದ್ಧೆ ಮತ್ತು ಭಕ್ತಿಯಿಂದ ಲೈಂಗಿಕ ಪೂಜೆಯನ್ನು ಮಾಡಿದ ಉಲ್ಲೇಖಗಳು ಇವೆ. **ಉತ್ತರ ಅಮೆರಿಕ:** ಈ ಪದ್ಧತಿಯನ್ನು ಮಾಡುವವರು ಪಾವನರು, ಪುಣ್ಯಾತ್ಮರು ಮತ್ತು ಮಹಾತ್ಮರು ಎಂದು ಗೌರವಿಸುತ್ತಿದ್ದರು. ಸಂತಾನ ಮತ್ತು ಬೆಳೆ ಚೆನ್ನಾಗಿ ಬರಲಿ ಎನ್ನುವ ಭಾವನೆಯಿಂದ ಮಾಡುತ್ತಿದ್ದರು. **ಏಷ್ಯಾದ ಇತರೆ ಭಾಗ ಗಳಲ್ಲಿ:** ಜಪಾನ್ ಮತ್ತು ಪೆರು ಮುಂತಾದ ದೇಶಗಳಲ್ಲಿ ಸಹ ಪವಿತ್ರ ವೇಶ್ಯಾಗಾರಿಕೆಯನ್ನು ಅವಲೋಕಿಸಿದ ಮೇಲೆ ಫಲವತ್ತತೆ, ಸಸ್ಯ, ಪ್ರಾಣಿಸಂಕುಲ ಫಲಕಾರಿಯಾಗುವಂತೆ ಮಾಡಲು ದೇವತೆಯು ವಾರಂಗನೆಯಾಗಿ ಅಥವಾ ನರ್ತಕಿಯಾಗಿ ಅವರು ಮಾಡುವ ದಿವ್ಯ ಕರ್ತವ್ಯಗಳನ್ನು ದೇವರ ಸನ್ನಿದಿಯಲ್ಲಿ ಮಾಡಬೇಕಾಗುತ್ತದೆ. ಕೆಲವು ಹೆಣ್ಣುದೇವತೆಗಳಿಗೆ ಕೆಲವು ಬಲಿಗಳು ಒಪ್ಪಿತ ವಾಗಿದ್ದವು. ಕೆಲವು ದೇವತೆಗಳಿಗೆ ಮಹಿಳೆಯರ ಬಲಿ ಕೇಳುತ್ತಿದ್ದವು. ದೇವಾಯಲದಲ್ಲಿ ಹುಡುಗಿಯ ರನ್ನು ಆರ್ಪಿಸುವುದು ಮತ್ತು ಅಪರಿಚಿತರಿಗೆ ಸೆರಗು ಹಾಸುವುದು ಬಹುಶಃ ಇಂತಹ ಬಲಿಯಿಂದ ಅಸ್ತಿತ್ವಕ್ಕೆ ಬಂದಿತು. ದೇವಾನುದೇವತೆಗಳ ತೃಪ್ತಿಗಾಗಿ ಒಂದು ಹೆಣ್ಣು ಅಥವಾ ಗಂಡನ್ನು ಆರ್ಪಿಸಿ ಅದೇ ದೇವರ ಸೇವೆಗಾಗಿ ಮೀಸಲಿರಿಸುವ ಈ ಪರಂಪರೆಯು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು ಕೇವಲ ಭಾರತಕ್ಕೆ ಮಾತ್ರ ಸೀಮಿತವಾಗದೇ ವಿಶ್ವವ್ಯಾಪ್ತಿಯಾಗಿದೆ. ವಿಶ್ವಮಟ್ಟದಲ್ಲಿ ಇದು ಯಾವ ಕಾರಣಕ್ಕಾಗಿ ಕಾಲ ದೇಶ ಸಂದರ್ಭಗಳಿಗೆ ಅನುಗುಣವಾಗಿ ಹುಟ್ಟಿಬೆಳೆದು ಬಂದಿದೆ. ಹೀಗೆ ಪ್ರಪಂಚದ ಕೆಲವು ಭಾಗಗಳಲ್ಲಿಯೂ ಸಹ ಇಂತಹ ಪದ್ಧತಿಗೆ ಸಾಮೀಪ್ಯವಿರುವ ಪದ್ಧತಿ

ಒಂದಿಲ್ಲೊಂದು ರೀತಿಯಲ್ಲಿ ಚಾಲ್ತಿಯಿತ್ತು ಎಂಬುದನ್ನು ಹಲವು ಅಧ್ಯಯನಕಾರರು ತಮ್ಮ ಅಧ್ಯಯನಗಳಲ್ಲಿ ಗುರುತಿಸಿದ್ದಾರೆ[೪೩](ಪ್ರಸನ್ನಕುಮಾರ್; ೨೦೧೫)

**೨.೩.೨. ಭಾರತದಲ್ಲಿ ದೇವದಾಸಿ ಪದ್ಧತಿಯ ಮೂಲ ಮತ್ತು ಅದರ ಬೆಳವಣಿಗೆಯ ಕುರಿತ ಚರ್ಚೆ**

ದೇವದಾಸಿ ಎಂಬ ಪದದ ಆರ್ಥವನ್ನು ಇನ್ನೂ ಬೇರೆ ಬೇರೆ ಆರ್ಥಗಳಲ್ಲಿ ನೋಡಲಾಗಿದೆ: ದಕ್ಷಿಣ ಭಾರತದಲ್ಲಿ ದೇವದಾಸಿ ಪದ್ಧತಿಯು ಅಥವಾ ದೇವದಾಸಿಯು ಸಂಸ್ಕೃತ ಪದವಾಗಿದೆ. ಅಂದರೆ ದೇವಾ ಅಥವಾ ದೇವತೆಯ ದಾಸಿ ಎಂಬುದಾಗಿದೆ. ದೇವರ ಹೆಸರಲ್ಲಿ ದೇವಸ್ಥಾನಕ್ಕೆ ಮಹಿಳೆಯರನ್ನು ಆರ್ಪಿಸುವುದು, ತನ್ನ ಇಡೀ ಜೀವನವನ್ನು ಮುಡುಪಾಗಿಡಬೇಕಾಗಿತ್ತು. ದೇವದಾಸಿಯು ದೇವಾಲಯದ ಕೆಲಸದ ಜೊತೆಗೆ ಧಾರ್ಮಿಕ ಸಭೆ ಸಮಾರಂಭಗಳಲ್ಲಿ ನೃತ್ಯ, ಸಂಗೀತ ಕಾರ್ಯಗಳಲ್ಲಿ ಪಾಲ್ಗೊಳ್ಳಬೇಕಿತ್ತು. ಆದರೆ ಆಗಿನ ಕಾಲದಲ್ಲಿ ಅವರಿಗೆ ಸಮಾಜದಲ್ಲಿ ಉನ್ನತ ಗೌರವ ಸ್ಥಾನಮಾನ ಗಳಿದ್ದವು. ಭಾರತದಲ್ಲಿ ದೇವದಾಸಿ ಪದ್ಧತಿಯು ಕಾಲ ಮತ್ತು ಪ್ರದೇಶಗಳಿಗೆ ಅನುಗುಣವಾಗಿ ಆರ್ಥ ಮಾಡಿಕೊಳ್ಳುವುದಾಗಿದೆ. ಕರ್ನಾಟಕದಲ್ಲಿ ಬಸವಿ, ದೇವದಾಸಿ, ಮಹರಾಷ್ಟ್ರದಲ್ಲಿ ಮಾತಂಗಿ ಹಾಗೂ ದೇವದಾಸಿ, ಆಂಧ್ರದಲ್ಲಿ ಜೋಗಿನಿ, ಮಾತಂಗಿ ಮತ್ತು ಮಾತಮ್ಮ, ತಮಿಳುನಾಡಿನಲ್ಲಿ ಮಾತಮ್ಮ. ಒಡಿಸ್ಸಾದಲ್ಲಿ ಮತ್ತು ಕೇರಳದಲ್ಲಿ ಮಹರಿ ಪದ್ಧತಿ ಹೀಗೆ ವಿವಿಧ ಹೆಸರುಗಳಿಂದ ಗುರುತಿಸಿದ್ದಾರೆ(**ವೀಕೀಪಿಡೀಯ ಇಂಟರ್ನೆಟ್**).

ದೇವದಾಸಿ ಪದ್ಧತಿಯು ಭಾರತಕ್ಕೆ ಯಾವಾಗ ಬಂತು ಮತ್ತು ಯಾವ ಸಂದರ್ಭದಲ್ಲಿ? ಈ ಪದ್ಧತಿಯ ಪ್ರಸ್ತುತದ ಒಲವುಗಳೇನು ಮತ್ತು ಇನ್ನೂ ಏಕೆ ಮುಂದುವರಿಯುತ್ತಿದೆ? ಈ ತರದ ಪ್ರಶ್ನೆಗಳನ್ನು ಗುರುತಿಸಿದ್ದಾರೆ. ಈ ಅಧ್ಯಯನಕ್ಕೆ ವೈಧಾನಿಕತೆಯಲ್ಲಿ ಅನುಭವಜನ್ಯ(ಎಂಪೆರಿಕಲ್)ದೊಂದಿಗೆ ಐತಿಹಾಸಿಕ ವಿಧಾನ ಮತ್ತು ಎಥ್ನೋಗ್ರಫಿಕ್ ಉಪಕರಣದ ವಿಧಾನದ ಮೂಲಕ ಪ್ರಾಥಮಿಕ ಮತ್ತು ಆನುಷಂಗಿಕ ಆಧಾರಗಳಿಂದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ತೆಲಸಂಗ ಎಂಬ ಹಳ್ಳಿಯಲ್ಲಿ ೧೯೮೬–೮೮ರವರಗೆ ವಿವಿದ ವಿಧಾನಗಳಿಂದ ಅವಲೋಕನ, ಅನುಸೂಚಿ, ಜೀನಿಯಾಲಾಜಿ(ವಂಶಾವಳಿ), ಜೀವನ ಇತಿಹಾಸ, ವಿಷಯ ಅಧ್ಯಯನ, ಔಪಚಾರಿಕ ಮತ್ತು ಅನೌಪಚಾರಿಕ ಸಂದರ್ಶನ ಮಾಹಿತಿಯನ್ನು ಕಲೆಹಾಕಿ ಸರಳ ಅಂಕಿಸಂಖ್ಯೆಗಳನ್ನು ಬಳಸಿ ಮಾಹಿತಿಯನ್ನಿ ವಿಶ್ಲೇಷಿಸಿದ್ದಾರೆ. ಈ ಅಧ್ಯಯನದಲ್ಲಿ ಸಮಾಜದಲ್ಲಿ ಧರ್ಮ ತುಂಬಾ ಸಂಕೀರ್ಣವಾದ ಮತ್ತು ಮನುಷ್ಯನ ಎಲ್ಲಾ ಚಟುವಟಿಕೆಯಲ್ಲಿ ಸಕ್ರಿಯವಾದ ಪಾತ್ರವನ್ನು ರೂಪಿಸಿ ಕೊಂಡಿದೆ. ದೇವದಾಸಿ ಸಂಪ್ರದಾಯದ ವಿಕಾಸವು ಭಾರತಕ್ಕೆ ಅರ್ಯರ ಅಗಮನಕ್ಕಿಂತ ಮುಂಚಿತ ವಾಗಿಯೇ ಇತ್ತು. ದ್ರಾವಿಡರ ಮಾತೃಪ್ರಧಾನ ಸಮಾಜದ ಸ್ಮಾರಕ, ಅವಶೇಷಗಳಲ್ಲಿ ಈ ಪದ್ಧತಿಯನ್ನು ಕಾಣಲಾಗಿದೆ. ದಕ್ಷಿಣದಲ್ಲಿ ಆರ್ಯರ ಆಕ್ರಮಣದಿಂದ ಸಂಸ್ಕೃತಿಯಲ್ಲೆವು ಸಂಸ್ಕೃತೀಕರಣಗೊಂಡು ಮತ್ತು ಬ್ರಾಹ್ಮಣತ್ವದ ತಾತ್ವಿಕತೆಯು ದ್ರಾವಿಡರಲ್ಲಿಯು ಸಹ ಎಲ್ಲ ಕಡೆ ವಿಸ್ತರಿಸಿಕೊಂಡಿತು. ಈ ದೇವದಾಸಿ(ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ

ಅರ್ಪಿಸುವುದು ವಾಡಿಕೆಯಲ್ಲಿತ್ತು. ನಂತರ ಆರ್ಯರ ಮತ್ತು ಜಮೀನುದಾರರ ವಂಚನೆಯಿಂದ ಮತ್ತು ಒತ್ತಾಯದ ನಡುವೆ ಈ ಪದ್ಧತಿಯನ್ನು ವೈಭವೀಕರಿಸಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು[೪೪]**(ಜೋಗನ್‌ಶಂಕರ್; ದೇವದಾಸಿ ಸಂಪ್ರದಾಯ, ೧೯೮೮)** ಕಾಲ ಕ್ರಮೇಣ ದೇವದಾಸಿಯರು ತಮ್ಮ ಸಂಪ್ರದಾಯಿಕ ಪಾತ್ರ, ಕ್ರಿಯಾವಿಧಿಗಳನ್ನು ಬಿಟ್ಟು, ಸಮಾಜ ಮತ್ತು ದೇವಸ್ಥಾನಗಳಿಂದ ಹೊರಬಂದು ವ್ಯಾಪಾರದ ವೇಶ್ಯಾವಾಟಿಕೆಗೆ ರೂಪಾಂತರಗೊಂಡಿದ್ದಾರೆ. ಅಂಧಾನುಕರಣೆ ಮತ್ತು ಬಡತನ ಈ ಪದ್ಧತಿಗೆ ಬಹು ಮುಖ್ಯ ಕಾರಣ. ಇದಲ್ಲದೆ ಸಮಾಜದಲ್ಲಿ ಗಂಡಸಿನ ಅಶ್ರಯದಾತನ ವ್ಯವಸ್ಥೆಯಲ್ಲಿ ಧರ್ಮವು ಸಂಸ್ಕೃತಿಯನ್ನು ತನ್ನಪ್ಪಕ್ಕೆ ತಾನೆ ಅನುರೂಪಗೊಳಿಸಿದೆ. ನಂಬಿಕೆ, ಮೌಲ್ಯಗಳು ಮತ್ತು ಮಾನವನ ನಡವಳಿಕೆಗಳು ಗಂಡಸರಿಂದ ಆಕ್ರಮಣಕ್ಕೊಳಪಟ್ಟಿವೆ. ಭಾರತದಲ್ಲಿ ಹಿಂದುಗಳಲ್ಲದೇ ಜೈನ್, ಬುದ್ಧಿಸಂಗಳಲ್ಲಿಯೂ ಸಹ ಈ ಪದ್ಧತಿಯನ್ನು ನೋಡಬಹುದು ಎಂದು ಚೀನಿಯಾತ್ರಿಕ ಚಾ- ಹು-ಕ್ವಾ ಅಭಿಪ್ರಾಯಪಟ್ಟಿದ್ದಾನೆ[೪೫]**(ತಾರಾಚಂದ್ ಕೆ.ಸಿ., ೧೯೮೭)** ಭಾರತದಲ್ಲಿ ದೇವದಾಸಿಯರ ಆಚರಣೆಯಲ್ಲಿ ಲೈಂಗಿಕವಾಗಿ ಆಕೆಯನ್ನು ಮಾತ್ರ ಶೋಷಿಸದೆ ಇಡೀ ಕುಂಟುಂಬ ವನ್ನು ಸಾಂಸ್ಥಿಕವಾಗಿ ಶೋಷಿಸಿದ್ದಾರೆ. ಅದರಲ್ಲೂ ತಳಸಮುದಾಯದಲ್ಲಿ ಮಾತೃ ಮತ್ತು ದೇವತೆಯ ಭಾವನೆಯಿಂದ ನಂಬಿಸಿ ಇವರ ಮಾನಸಿಕ ಸ್ಥಿತಿಗತಿಯನ್ನು ಅರಿತು, ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅಂತರ್ಗತ ಮಾಡಿದ್ದಾರೆ. ಬದುಕು ಸಾರ್ವಜನಿಕವಾಗಿ ಪ್ರಾರಂಭವಾಗಿ ಸಾರ್ವಜನಿಕ ವಾಗಿ ಕೊನೆಗೊಳ್ಳುತ್ತಿತ್ತು. ಇಲ್ಲಿ ದೇವದಾಸಿಯರ ಸಾಂಸ್ಕೃತಿಕ ಕಲೆಗಳನ್ನು ಗೌರವಿಸಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಮಟ್ಟದ ಜೀವನವನ್ನು ನಡೆಸುವಂತಾಯಿತು[೪೬]**(ಜೋಯಾ ಜೈದಿ)** ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಂಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ. ಮತ್ತು ಸಾಂಸ್ಕೃತಿಕ ಆಚರಣೆಗಳಿಂದ ಕೂಡಿದೆ**(ಲಾರೆನ್ ಬೇತ್ ಜಾಕೋಬ್ಸ್)**. ದೇವದಾಸಿ ಪದ್ಧತಿ ಸ್ವಾತಂತ್ರ್ಯ ಬಂದ ಮೇಲೂ ಕೆಲವು ಪ್ರದೇಶಗಳಲ್ಲಿ ಈ ಪದ್ಧತಿಯು ಜೀವಂತವಾಗಿದೆ ಹಾಗೂ ದಲಿತ ಮಹಿಳೆಯರ ಭಾವನಾತ್ಮಕ, ಆರೋಗ್ಯ ಮತ್ತು ಘನತೆಯ ವಿಚಾರಗಳಲ್ಲಿ ಅಡಚಣೆ ಯುಂಟಾಗಿವೆ[೪೭]**(ಮ್ಯಾಜೀ ಬ್ಲಾಕ್, ೨೦೦೭)**

ದೇವದಾಸಿ ಪದ್ಧತಿಗೆ ಸಿದ್ಧಾಂತಗಳು ಹೇಗೆ ಸಂಬಂಧಿಸಿವೆ ಎಂಬುದನ್ನು ಚರ್ಚಿಸಲಾಗಿದೆ. ಹಲವಾರು ಸಿದ್ಧಾಂತಗಳು ಈ ಪದ್ಧತಿಯ ಉಗಮ ಮತ್ತು ಬೆಳವಣಿಗೆಗೆ ಸಹಕಾರಿಯಾಗಿವೆ. ಅವುಗಳೆಂದರೆ ವೃತ್ತಿ ಮತ್ತು ಮಾತೃದೇವತೆಯ ಸಿದ್ಧಾಂತ, ಧಾರ್ಮಿಕ ಸಾಂಪ್ರದಾಯಿಕ ಸಿದ್ಧಾಂತ, ಸಂಸ್ಕೃತೀಕರಣ ಸಿದ್ಧಾಂತ, ಜನಾಂಗೀಯ ಸಿದ್ಧಾಂತ, ರಾಜಕೀಯ ಅಥವಾ ಸ್ವಾರ್ಥರಹಿತ ನಾಗರಿಕ ಸಿದ್ಧಾಂತ, ಮಾತೃಪ್ರಧಾನದಿಂದ ಪುರುಷಪ್ರಧಾನದ ಸಿದ್ಧಾಂತ, ವಂಶಪರಂಪರೆಯ ಮುಂದುವರಿಕೆಯ ಸಿದ್ಧಾಂತ ಹಾಗೂ ಸಂಪ್ರದಾಯಿಕ ಸಿದ್ಧಾಂತ. ಮಹಿಳೆಯರನ್ನು ಕ್ರಿಯಾವಿಧಿಯ ಸೇವೆಗಳಿಗೆ ದೇವರಿಗೆ ಅರ್ಪಿಸುವುದು ಪುರಾತನವಾದುದು ಮತ್ತು ಸಾರ್ವತ್ರಿಕವಾದುದಾಗಿತ್ತು.

ಸಾಮಾನ್ಯವಾಗಿ ಮಹಿಳೆಯರನ್ನು ದೇವರಿಗೆ ಅರ್ಪಿಸುವುದು ಒಂದು ಮಾತೃದೇವತಾರಾಧನೆಯ ಬಾಗವಾಗಿತ್ತು. ಈ ಪದ್ಧತಿಗೆ ಸಮಾಜವು ಉನ್ನತ ಗೌರವ ಹಾಗೂ ಬೆಲೆ ಬಾಳುವ ಉಡುಗೊರೆಗಳನ್ನು ಕೊಡುಗೆಯಾಗಿ ನೀಡುತ್ತಿದ್ದರು. ಕಾಲಕ್ರಮೇಣ ಮಾತೃದೇವತಾ ಆರಾಧನೆಯು ಸಂಸ್ಕೃತೀಕರಣಗೊಂಡ ಮೇಲೆ ಕವಲುದಾರಿಗೆ ನಾಂದಿಯಾಯಿತು. ಅದರಲ್ಲಿ ಹೊಸ ಮಿಥ್ಯೆಗಳು ಸೃಷ್ಟಿಯಾದವು ಮತ್ತು ಪ್ರಚಾರಗೊಂಡವು. ಮತ್ತೊಂದು ಪ್ರಭಾವ ಮತ್ತು ಅಧಿಕಾರಸ್ಥರ ಪುರುಷರ ಅಧೀನಕ್ಕೊಳಪಡಿಸ ಲಾಯಿತು. ಪುರುಷರ ಅಧಿಕಾರ ಮತ್ತು ಸಾಮರ್ಥ್ಯಗಳನ್ನು ವೈಭವೀಕರಿಸಲಾಯಿತು. ಶುದ್ಧ ಮತ್ತು ಮಲಿನಗಳೆಂಬ ಪರಿಕಲ್ಪನೆಗಳು ಹುಟ್ಟಿಕೊಂಡವು. ಮಾತೃಪ್ರಧಾನ ವ್ಯವಸ್ಥೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ವರ್ಗಾಂತರಗೊಂಡವು ಮತ್ತು ಮೊದಲಿನ ಸ್ಥಾನಮಾನಗಳು ಕಡಿಮೆಯಾಗಿ ಬರೀ ಕೇವಲ ಕ್ರಿಯಾವಿಧಿಗಳನ್ನು ಆಚರಿಸುವ ಕಾರ್ಯಕರ್ತರಾದರು(**ವೀಕೀಪಿಡೀಯ; ಎವಲ್ಯುಷನ್ ಆಫ್ ದೇವದಾಸಿ ಸಿಸ್ಟಮ್**).

ದೇವದಾಸಿ ಪದ್ಧತಿಗೆ ಮುಂಚೆ ಅದರ ಪದರೂಪ ನಿಷ್ಪತ್ತಿಯ ಪ್ರಾದೇಶಿಕ ರೂಪಗಳು: ದೇವದಾಸಿ ಎಂಬ ಪದ ಸಂಸ್ಕೃತ ಮೂಲದಿಂದ ಬಂದದೆ, ಸಾಮಾನ್ಯವಾಗಿ ಈ ಅರ್ಥ ಬಳಕೆ ಯಲ್ಲಿ ಇದೆಯಾದರೂ ಈ ಹೆಸರಿನ ಪದ್ಧತಿ ಹಾಗೂ ಈ ವೃತ್ತಿಯನ್ನು ಕೈಗೊಂಡ ಸ್ತ್ರೀಯರಿಗೆ ಪ್ರಾದೇಶಿಕವಾಗಿ ವಿವಿದ ಹೆಸರುಗಳಿವೆ. ತಮಿಳುನಾಡಿನಲ್ಲಿ ಇವರನ್ನು ದೇವರಡಿಯಾರ್ ಅಥವಾ ದಾಸಿಯರು ಎಂದು, ತಿರುವಾಂಕೂರು ಪ್ರದೇಶಕ್ಕೆ ಸೇರಿದ ಮನೆಗಳಲ್ಲಿ ಕುಡಿಕ್ಕಾರರೆಂಬ ಹೆಸರಿಂದ, ದೊಗಾಮ ಮತ್ತು ಸಾನಿಗಳೆಂಬ ಹೆಸರು ಆಂಧ್ರದಲ್ಲಿ ಮತ್ತು ಕನ್ನಡ ಮಾತನಾಡುವ ಪ್ರದೇಶಗಳಲ್ಲಿ ಬಸವಿ ಮತ್ತು ಜೋಗತಿಯರೆಂಬ ಹೆಸರುಗಳಿವೆ. ಗೋವಾ ಹಾಗೂ ಪಶ್ಚಿಮ ಭಾರತದ ಪ್ರದೇಶಗಳಲ್ಲಿ ಸುಂದರ ವ್ಯಭಿಚಾರಣಿಯರು ಎಂಬ ಅರ್ಥ ಕೊಡುವ ಭವಿನ್ಸ್ ಅಥವಾ ಭವಿನಸ್ ಎಂಬ ಮತ್ತು ಮಹಾರಾಷ್ಟ್ರದಲ್ಲಿ ಮುರುಲಿ, ಜೋಗತಿಸ್ ಎಂದು ಕರೆಯ ಲಾಗುತ್ತದೆ.''(**ಬಿ.ಅರ್. ಪಾಟಿಲ್, ೧೯೯೪**)

ದೇವದಾಸಿಗೆ ಸಂಬಂಧಿಸಿದಂತೆ ಸಾಮಾಜಿಕ ಸಿದ್ಧಾಂತಗಳಿಂದ ಇದರ ಉಗಮಕ್ಕೆ ಕಾರಣಗಳನ್ನು ಹುಡುಕಿದ್ದಾರೆ. ಇವರ ಅಧ್ಯಯನದಲ್ಲಿ ಡಾ. ಜೊಗನ್ ಶಂಕರ ಅವರು ಗುರುತಿಸಿರುವ ಸಿದ್ಧಾಂತಗಳನ್ನು ಹೆಸರಿಸಿದ್ದಾರೆ. ಮಹಿಳೆಯರನ್ನು ದೇವರಿಗೆ ಅರ್ಪಿಸುವ ಸಾಂಪ್ರದಾಯವು ಹಿಂದಿನ ಕಾಲದಲ್ಲಿತ್ತು ದೇವರಿಗೆ ಮಾನವರ ಬಲಿಯನ್ನು ಕೊಡುತಿದ್ದರು. ನಂತರ ಅದರ ಬದಲಿಗೆ ಯುವ ಮಹಿಳೆಯರನ್ನು ದೇವರಿಗೆ ಅರ್ಪಿಸಿ ಇಡೀ ಸಮುದಾಯಕ್ಕೆ ಒಳ್ಳೆಯದಾಗಲೀ ಎಂದು ದೇವರಲ್ಲಿ ಪ್ರಾರ್ಥಿಸುತ್ತಿದ್ದರು. ಇದೊಂದು ಸಂಸ್ಕಾರವಾಗಿದ್ದು ಭೂಮಿಯಲ್ಲಿ ಚೆನ್ನಾಗಿ ಫಸಲು ಬರುವಂತೆ, ಮಾನವ ಸಂಖ್ಯಾ ಅಧಿಕವಾಗುವಂತೆ, ತಮ್ಮ ಸಾಕುಪ್ರಾಣಿಗಳು ಹೆಚ್ಚಲಿ ಎನ್ನುವ ಮನೋಭಾವದಿಂದ, ಭಾರತದಲ್ಲಿ ಪುರಾತನ ದ್ರಾವಿಡರ ಕಾಲದಲ್ಲಿ ಮಾನವನ ಅಂಗ ವಿಶೇಷವಾಗಿ ಲಿಂಗ(ಗಂಡು ಜನನೇಂದ್ರಿಯ)ವನ್ನು ಪೂಜಿಸುವುದು ಕ್ರಿಯಾವಿಧಿಯ ಭಾಗವಾಗಿತ್ತು. ಅಪರಿಚಿತ ವ್ಯಕ್ತಿಗಳಿಗೆ ಲೈಂಗಿಕ ತೃಪ್ತಿ ಪಡಿಸುವುದು

ಒಂದು ರೀತಿಯ ಪವಿತ್ರ ವೇಶ್ಯಾವಾಟಿಕೆಯ ಪದ್ಧತಿಯಾಗಿತ್ತು. ದೇವದಾಸಿ ಸಂಸ್ಕೃತಿ ಒಂದು ಪರವಾನಿಗೆಯ ಕ್ರಿಯಾವಿಧಿಯಾಗಿತ್ತು ಜನರ ಮತ್ತು ಪುರೋಹಿತ ವರ್ಗದವರ ಹಿತಾಸಕ್ತಿಗಳನ್ನು ತೃಪ್ತಿಪಡಿಸುವ ಹುನ್ನಾರವೇ ಈ ಪದ್ಧತಿಗೆ ಕಾರಣವಾಗಿತ್ತು. ಉದ್ದೇಶಪೂರ್ವಕವಾಗಿ ದೇವದಾಸಿ ಪದ್ಧತಿಯು ಕೆಳಜಾತಿಯ ಮಹಿಳೆಯರನ್ನು ಮತ್ತು ಸಮುದಾಯ ವನ್ನು ಹತೋಟಿಯಲ್ಲಿಡಲು ಹಾಗೂ ಶೋಷಣೆಯನ್ನು ಮಾಡಲು ಸ್ಥಳೀಯ ಉನ್ನತ ಜಾತಿ ಮತ್ತು ವರ್ಗದವರು ರೂಢಿ ಸಂಪ್ರದಾಯಗಳನ್ನು ಪಾಲಿಸುವಂತೆ ಮಾಡುತ್ತಿದ್ದರು. ಕೆಳಜಾತಿಯವರ ಸ್ವಗೌರವ ಮತ್ತು ಸ್ವಾಭಿಮಾನವು ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಗಳಿಸುವಂತೆ ಮಾಡುವುದೇ ಇವರ ಉದ್ದೇಶವಾಗಿತ್ತು. ಅದಕ್ಕೆ ಲೇಖಕರು ಮೇಲಿನ ಸಿದ್ಧಾಂತಗಳಲ್ಲಿ ಕೊನೆಯ ಸಿದ್ಧಾಂತವು ಪ್ರಸ್ತುತಕ್ಕೆ ಹತ್ತಿರವಿದೆ ಮತ್ತು ಚರ್ಚೆಗೆ ಅರ್ಹವಾಗಿದೆ ಎಂದು ವಾದಿಸಿದ್ದಾರೆ. ಮೇಲಿನ ಎಲ್ಲಾ ಸಿದ್ಧಾಂತಗಳ ಚರ್ಚೆಗಳು ನನ್ನ ಅಧ್ಯಯನಕ್ಕೆ ಪೂರಕವಾಗಿವೆ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಮತ್ತು ದೇವದಾಸಿಯರು ಯಾರು ಮತ್ತು ಈಗಲೂ ಏಕೆ ಈ ಪದ್ಧತಿ ಇನ್ನೂ ಜೀವಂತವಾಗಿದೆ ಎನ್ನುವುದಕ್ಕೆ ಆಕರಗಳನ್ನು ಒದಗಿಸುತ್ತದೆ.[೪೯](ಜಮನ್ದಾಸ್)

ದೇವದಾಸಿಯ ಪೌರಾಣಿಕ ಚರಿತ್ರೆ, ವಿವಿಧ ರೀತಿಯ ಆಚರಣೆಯ ವಿಧಿವಿಧಾನಗಳು ಅದಕ್ಕೆ ಸಂಬಂಧಿಸಿದಂತೆ ಕತೆಗಳನ್ನು ಮಹಾರಾಷ್ಟ್ರ ಹಾಗೂ ಕರ್ನಾಟಕದ ಗಡಿಭಾಗಗಳಲ್ಲಿ ಮಾತ್ರ ಈ ಪದ್ಧತಿಯಿರದೆ ಇತರೆ ಭಾಗಗಳಲ್ಲಿಯೂ ಸಹ ಇತ್ತು ಎಂದು ಗುರುತಿಸಿದ್ದಾರೆ. ಡಾ.ಬಾಬಾಸಾಹೇಬ ಅಂಬೇಡ್ಕರ್ ಅವರು ಸಹ ೧೯೩೬ ಜೂನ್ ತಿಂಗಳಿನಲ್ಲಿ ಬಾಂಬೆಯಲ್ಲಿ ಹಲವು ಸಭೆಗಳನ್ನು ಉದ್ದೇಶಿಸಿ ಮಾತನಾಡಿದ್ದರು. ಅದರಲ್ಲಿ ಮುಖ್ಯವಾಗಿ ಕಮಾಟಿಪುರದ ವೃತ್ತಿನಿರತವಾಗಿ ಮತ್ತು ದೇವದಾಸಿ ಪದ್ಧತಿಯ ಹಿನ್ನೆಲೆಯಿಂದ ಬಂದು ವೇಶ್ಯಾವೃತ್ತಿಯನ್ನು ಮಾಡುತ್ತಿದ್ದವರು ಮತ್ತು ದೇವದಾಸ/ಜೊಗಯ್ಯ/ಹಿಜಡಾಗಳೂ ಸಹ ಸಭೆಯಲ್ಲಿ ಹಾಜರಿದ್ದರು ಅಂಬೇಡ್ಕರ್ ಅವರು ಈ ಪದ್ಧತಿಯ ಬಗ್ಗೆ ಮತ್ತು ಮಹರ್ ಜಾತಿಯಲ್ಲಿ ಹುಟ್ಟಿ ಇಂತಹ ವೃತ್ತಿಯನ್ನು ಆಯ್ಕೆ ಮಾಡಿಕೊಂಡವರನ್ನು ಕಟುವಾಗಿ ಟೀಕಿಸಿದರು. ಇದಕ್ಕೆ ಪೂರಕವಾಗಿ ಶಾಹುಮಹಾರಾಜರು ೧೯೨೧ರಲ್ಲಿ ಈ ಪದ್ಧತಿಯ ನಿಯಂತ್ರಣಕ್ಕೆ ಕಾಯ್ದೆಯನ್ನು ಹೊರಡಿಸಿದ್ದರು. ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ದೇವತೆ/ದೇವರುಗಳಿಗೆ ಮೀಸಲು ಬಿಡುವ ಪದ್ಧತಿಯನ್ನು ಅನುಸರಿಸಲಾಗುತಿತ್ತು. ಅವುಗಳ ಹೆಸರುಗಳೆಂದರೆ ಖಂಡೋಬ, ಜ್ಯೋತಿಬಾ, ಮುರಳಿ, ಅಂಬಾಬಾಯಿ, ಜೋಗವ್ವ, ತಳನಾಥ ಭಾವಿಣ, ಭೂತನಾಥ ನಾಯಿಕೆ, ಮಹಾಬಲೇಶ್ವರ, ಕಲಾವಂತಿ, ಧಾರೇಶ್ವರ, ಬಸವಿ, ಮಾಯವ್ವ, ದುರ್ಗವ್ವ, ಜೋಗತಿ, ದ್ಯಾಮವ್ವ, ಮಾತಂಗಿ, ಮಾರುತಿ ಶರಣೆ ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ. ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲರನ್ನು ಮತ್ತು ಅಂಗ್ಲಭಾಷೆಯಲ್ಲೂ ಸಹ ದೇವದಾಸಿ ಎಂದೇ ಕರೆಯಲಾಗುತ್ತಿದೆ. ಹಾಗೆ ಹೊಲೆಯ(ಮಹಾರ), ಮಾದಿಗ(ಮಾಂಗ), ತಳವಾರ, ಕಬ್ಬಲಿಗ, ದಾಸ, ಬೇಡ, ಕೋಳಿ, ನಾಯಕ, ಕುರುಬ(ದನಗರ), ಕುಣಬಿ, ಭಂಡಾರಿ

ಮೊದಲಾದ ಜಾತಿ ಜನಾಂಗಗಳಲ್ಲಿ ಈ ಪದ್ಧತಿಯನ್ನು ಪಾಲಿಸಿಕೊಂಡು ಬರಲಾಗಿದೆ.[೩೦]**(ಉತ್ತಮ ಕಾಂಬಳೆ; ೨೦೧೩)**

ಒಡಿಸ್ಸಾದ ಪೂರಿ ಜಗನ್ನಾಥ ದೇವಾಲಯದಲ್ಲಿದ್ದ ಇಬ್ಬರು ದೇವದಾಸಿಯರಾದ ಶಶಿಮಣಿದೇವಿ ಮತ್ತು ಪರಸಾಮಣಿ ದೇವಿ ಇಬ್ಬರನ್ನು ಸಂದರ್ಶಿಸಿದ ಲೇಖನದ ವಿವರಣೆಯಾಗಿದೆ. ಇಬ್ಬರ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ಇವರು ತಮ್ಮ ಚಿಕ್ಕ ವಯಸ್ಸಿನಲ್ಲಿ ತಂದೆ–ತಾಯಿಗಳು ಹಿರಿಯ ದೇವದಾಸಿಯರ ಬಳಿ ಬಿಟ್ಟು ಹೋದ ನೆನಪು ಮಾತ್ರ ಇದೆ. ಚಿಕ್ಕ ವಯಸ್ಸಿನಿಂದಲೂ ದೇವರ ಸೇವೆ ಮತ್ತು ಸಂಗೀತ, ನೃತ್ಯ ಇತ್ಯಾದಿ ಲಲಿತಕಲೆಗಳಲ್ಲಿ ಭಾಗವಹಿಸುತ್ತಿದ್ದರು. ಅಂದಿನಿಂದಲೂ ದೇವಸ್ಥಾನದಲ್ಲಿ ತಮ್ಮ ಜೀವನಕ್ಕೆ ಎಲ್ಲಾ ವ್ಯವಸ್ಥೆಗಳನ್ನು ಮಾಡಿದ್ದರು ಮತ್ತು ಹಿರಿಯ ದೇವದಾಸಿಯರು ಸಹಾಯ ಮಾಡುತ್ತಿದ್ದರು. ಅವರಿಗೆ ಪೂರಿ ಜಗನ್ನಾಥನನ್ನು ಬಿಟ್ಟರೆ ಬೇರೆ ಯಾರು ನಮಗೆ ಬೇಕಾಗಿಲ್ಲ ಎಂದು ಹೇಳುತ್ತಿದ್ದರು. ಆತನಿಗೆ ನಮ್ಮ ತನು ಮನವನ್ನು ಅರ್ಪಿಸಿದ್ದೇವೆ ಮತ್ತು ನಾವಿರುವತನಕ ಅತನ ಸೇವೆ ಮತ್ತು ಧ್ಯಾನಗಳಲ್ಲಿ ಕಾಲ ಕಳೆಯುತ್ತೇವೆ. ಆದರೆ ವಾಸ್ತವ ಬದುಕು ತುಂಬಾ ವ್ಯತಿರಿಕ್ತವಾಗಿದೆ. ಪ್ರಸ್ತುತ ದೇವಸ್ಥಾನದಲ್ಲಿ ಯಾವುದೇ ಸೌಕರ್ಯಗಳು ದೊರಕುತ್ತಿಲ್ಲ ಮತ್ತು ಸರ್ಕಾರದಿಂದ ಶಶಿಮಣಿ ದೇವಿಗೆ ಮತ್ತು ಪರಸಾಮಣಿ ದೇವಿಗೆ ಒಂದಿಷ್ಟು ಮಾಸಾಶನದ ಬೆಂಬಲದಿಂದ ಮಾತ್ರ ತಮ್ಮ ಕೊನೆಯ ಜೀವನವನ್ನು ಕಳೆಯುತ್ತಿದ್ದಾರೆ. ಇಲ್ಲಿ ದೇವದಾಸಿಯರ ಕೆಲಸ ಕಾರ್ಯಗಳು ದೇವಸ್ಥಾನ ಮತ್ತು ಅದರ ಜಗತ್ತಿನೊಳಗೆ ಮಾತ್ರ ನಡೆಯುತ್ತಿದ್ದವು.[೩೧]**(ಶಾರದ ಲಹಂಗಿರ್; ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ೨೦೧೨)**

ತಮಿಳುನಾಡಿನ ಆರಕ್ಕೊಣಂನಲ್ಲಿ ಇತ್ತೀಚೆಗೆ ಸಾವನ್ನಪ್ಪಿದ ಮಾತಮ್ಮ(ಲಕ್ಷ್ಮೀದೇವಿಯ) ಎಂಬ ದೇವದಾಸಿ ಬದುಕಿನ ಕರಾಳ ಕಥೆಯ ವಿಶ್ಲೇಷಣಾತ್ಮಕ ಲೇಖನದಲ್ಲಿ ದಲಿತರಾಗಿರುವ ಅರುಂಧತಿಯಾರ್ ಸಮುದಾಯದಲ್ಲಿ ತಮ್ಮ ಕುಲದೇವತೆಗಳ ಹೆಸರಲ್ಲಿ ಹೆಣ್ಣುಮಕ್ಕಳನ್ನು ಮಾತಮ್ಮನಿಗೆ ಆರ್ಪಿಸುವುದು ವಾಡಿಕೆ. ಇಂತಹ ಸಂದರ್ಭದಲ್ಲಿ ಒಬ್ಬ ದಿಟ್ಟ ದೇವಿ ಎಂಬ ಮಾತಮ್ಮನ ಜೀವನ ದಲ್ಲಿ ನಡೆದ ಘಟನೆಗಳನ್ನು ಲೇಖಕರು ದಾಖಲಿಸಿದ್ದಾರೆ. ಇಲ್ಲಿಯ ದೇವಿಯನ್ನು ತನ್ನ ಅನುಮತಿ ಯಿಲ್ಲದೆ ದೇವರಿಗೆ ಆರ್ಪಿಸಿ ಉನ್ನತ ಜಾತಿಯ ಮತ್ತು ತನ್ನ ಸಮುದಾಯದ ಗಂಡಸರು ತಮ್ಮ ಕಾಮತೃಷೆಯನ್ನು ತೀರಿಸಿಕೊಳ್ಳುತ್ತಿದ್ದರು. ತನ್ನ ಜೀವನವನ್ನು ನಿರ್ವಹಿಸಲು ಗ್ರಾಮದೇವತೆಗಳ ಜಾತ್ರಾ ಸಮಯದಲ್ಲಿ ಡ್ಯಾನ್ಸ್ ಮತ್ತು ಕೂಲಿ ಕೆಲಸ ಮಾಡಿಕೊಂಡು ತನ್ನ ಮೂರು ಜನ ಮಕ್ಕಳೊಂದಿಗೆ ದಿನನಿತ್ಯದ ಬದುಕಿನ ಹೋರಾಟದಲ್ಲಿ ಇರುತ್ತಿದ್ದರು. ಈಕೆಯ ಜೀವನದ ಕೊನೆಯವರೆಗೂ ಬಡತನ ಮತ್ತು ಲೈಂಗಿಕ ಶೋಷಣೆಯ ವಿರುದ್ಧ ತನ್ನ ದನಿ ಮಾಡಿದ್ದಳು. ಒಂದು ದಿನ ತನ್ನ ಹೊಸ ಸಂಗಾತಿಯ ಜೊತೆ ಜಗಳ ಮತ್ತು ತನ್ನ ಮೇಲಾದ ಕೌಟುಂಬಿಕ ದೌರ್ಜನ್ಯದ ಗಂಭೀರತೆಯಿಂದ ಸಾವನ್ನಪ್ಪಿದ್ದಳು. ಇಡೀ ಲೇಖನದಲ್ಲಿ ಆಕೆಯ ಹೋರಾಟದ ಮನೋಭಾವನೆ, ತನ್ನ ವೈಯಕ್ತಿಕ ಆಸ್ಮಿತೆ ಮತ್ತು ದೇವರ ಹೆಸರಿನಲ್ಲಿ ದಲಿತ ಹೆಣ್ಣುಮಕ್ಕಳನ್ನು ಆರ್ಪಿಸುವ/ ಬಿಡುವ ಪದ್ಧತಿಯನ್ನು ಸಂಪೂರ್ಣವಾಗಿ

ತೊಡೆದುಹಾಕಬೇಕು ಎನ್ನುವ ಹೋರಾಟದ ಕಿಚ್ಚನ್ನು ಸಮುದಾಯಕ್ಕೆ ಬಿಟ್ಟು ಮತ್ತು ತಾನು ಕಾರ್ಯಕರ್ತರಾಗಿ ಕೆಲಸ ನಿರ್ವಹಿಸುತ್ತಿದ್ದ ಸ್ವಯಂ ಸೇವಾಸಂಸ್ಥೆಯಾದ ರೂರಲ್ ವುಮೆನ್ ಲಿಬರೇಷನ ಮೂವ್‌ಮೆಂಟ್ ತನ್ನ ಹೋರಾಟವನ್ನು ಮುನ್ನಡೆಸುವಂತೆ ತನ್ನ ಆಶಯಗಳನ್ನು ನಮ್ಮೊಂದಿಗೆ ಬಿಟ್ಟು ಹೋಗಿದ್ದಾರೆ. ಈ ಲೇಖನವು ದೇವದಾಸಿ ಸಮುದಾಯದ ಎಲ್ಲ ಸದಸ್ಯರಿಗೂ ಈ ತರದ ಕಿಚ್ಚು ಮಾರ್ಗಸೂಚಿಯಾಗಿ ಕಂಡು ಬಂದಿದೆ. ಈ ಲೇಖನದಲ್ಲಿ ಬದುಕು, ಹೋರಾಟ, ಜಾತಿ ಮತ್ತು ಲೈಂಗಿಕ ತಾರತಮ್ಯ. ಪದ್ಧತಿಯ ವಿರುದ್ಧ ಚಳುವಳಿ ಮುಂತಾದ ಪರಿಕಲ್ಪನೆಗಳನ್ನು ಚರ್ಚಿಸಿದ್ದಾರೆ(**ಎಸ್. ಆನಂದಿ; ೨೦೧೩**) ತಮಿಳುನಾಡಿನಲ್ಲಿ ದೇವದಾಸಿ ಪದ್ಧತಿಯು ಮಾತಮ್ಮ ಎಂಬ ಹೆಸರಿನಲ್ಲಿ ಪ್ರಚಲಿತದಲ್ಲಿದೆ. ಲಿಂಗತ್ವ, ಜಾತಿ ಮತ್ತು ಲೈಂಗಿಕ ತಾರತಮ್ಯತೆ ಯಾವ ರೀತಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾತಿ ಏಣಿಶ್ರೇಣಿಯಲ್ಲಿ ತಳವರ್ಗದ ಸಮುದಾಯಗಳ ಮೇಲೆ ಸಾಂಸ್ಕೃತಿಕವಾಗಿ ಬಲಿಷ್ಠ ಮತ್ತು ಉನ್ನತ ಜಾತಿಗಳು ಹೇಗೆ ತಮ್ಮ ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿವೆ ಎಂಬುದನ್ನು ವಿವರಿಸಿದ್ದಾರೆ.[೫೨](**ಎಸ್. ಆನಂದಿ, ೨೦೧೩**)

ಪ್ರಸಿದ್ಧ ದೇವಸ್ಥಾನವಾದ ಸೋಮನಾಥ ಗುಡಿಯಲ್ಲಿ ೫೦೦ ಮಂದಿ ದೇವದಾಸಿಯರಿದ್ದರಂತೆ. ದಕ್ಷಿಣ ಭಾರತದ ತಂಜಾವೂರಿನ ಬೃಹತ್ ದೇವಾಲಯದಲ್ಲಿ ೪೦೦ ಮಂದಿ ದೇವದಾಸಿಯರು ಇದ್ದರಂತೆ. ಆಗಿನ ರಾಜ ರಾಜರಾಜ ಚೋಳನ ಕಾಲದಲ್ಲಿ ಸುಮಾರು ೧೦ನೆಯ ಶತಮಾನದಲ್ಲಿ, ನಂತರ ಪ್ರಾಚೀನ ಕಾಲದಲ್ಲಿ ದೇವದಾಸಿಯರಿಗೆ ಒಳ್ಳೆಯ ಸ್ಥಾನಮಾನಗಳಿದ್ದವು. ರಾಜಾಶ್ರಯದ ಮೂಲಕ ದೇವಾಲಯದ ಎಲ್ಲ ಕೆಲಸ ಕಾರ್ಯಗಳಲ್ಲಿ ಮುಂಚೂಣಿಯಲ್ಲಿದ್ದರು. ಅದಲ್ಲದೆ ಇವರು ತಮ್ಮ ದುಡಿಮೆಯಿಂದ ಮತ್ತು ರಾಜರ ಪ್ರೋತ್ಸಾಹದಿಂದ ಗುಡಿಗೋಪುರ ಮತ್ತು ನೀರಾವರಿಗಾಗಿ ಆನೇಕ ಕೆರೆಗಳನ್ನು ಕಟ್ಟಿಸಿದರೆಂಬ ಇತಿಹಾಸವಿದೆ. ಅದಕ್ಕೆ ಈಗಲೂ ಸಹ ಸೂಳೆಕೆರೆ ಎಂಬುದಾಗಿ ಕರೆಯುತ್ತಾರೆ. ಭಾರತದಲ್ಲಿ ೭ ತರದ ದೇವದಾಸಿ ಪ್ರಕಾರಗಳಿದ್ದವಂತೆ. ದೇವದಾಸಿಯರು ಲಲಿತಕಲೆಯ ಆರಾಧಕರಾಗಿದ್ದರು ಮತ್ತು ಅವರ ನಂತರದ ಪೀಳಿಗೆಯು ಸಹ ಈ ಕಲೆಗಳನ್ನು ಮುಂದುವರಿಸಿದರು. ಈಗಲೂ ಸಹ ಕೆಲವು ಹಿರಿಯ ರಂಗಭೂಮಿ ಕಲಾವಿದರು ಈ ಹಿನ್ನೆಲೆಯುಳ್ಳವರಾಗಿದ್ದಾರೆ. ನಂತರದ ದಿನಗಳಲ್ಲಿ ಪ್ರತ್ಯೇಕ ಜಾತಿ ಸಮುದಾಯಗಳು ಮಾತ್ರ ಈ ಪದ್ಧತಿಯನ್ನು ಮುಂದುವರಿಸಿ ಕೊಂಡು ಬಂದಿವೆ. ಆದರೆ ಆಗಿನ ಕಾಲದ ಮಾನ್ಯತೆ ಮತ್ತು ಪ್ರೋತ್ಸಾಹಗಳಿಲ್ಲದ್ದರಿಂದ ಅನ್ಯಮಾರ್ಗ ವಿಲ್ಲದೆ ವೇಶ್ಯಾವೃತ್ತಿಗೆ ಜಾರಿದ್ದಾರೆ. ನಂತರದ ಕಾಲಘಟ್ಟದಲ್ಲಿ ಬ್ರಿಟಿಷರ ಆಗಮನದಿಂದ ಮತ್ತು ಇಂಗ್ಲಿಷ್ ಶಿಕ್ಷಣ ಕಲಿತವರು ಇದರ ಸ್ಥಿತಿಗತಿಗಳ ಬಗ್ಗೆ ಅಕ್ಷೇಪ ವ್ಯಕ್ತಪಡಿಸಿದಾಗ ಕಾಯ್ದೆ-ಕಾನೂನು ಗಳು ಬಂದವು. ಆದರೆ ಇಂದಿಗೂ ಸಹ ಯಾವುದೇ ಕಾಯ್ದೆಗಳಿದ್ದರೂ ಸಹ ಈ ಪದ್ಧತಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಮುಂದುವರಿದಿದೆ. ಇಡೀ ಅಧ್ಯಯನದಲ್ಲಿ ಐತಿಹಾಸಿಕ ದಾಖಲೆಗಳು ಮತ್ತು ವಿವರಣೆಗಳು ಇವೆ. ಆದರೆ ನನ್ನ ಪ್ರಶ್ನೆ ಇಲ್ಲಿ ಯಾವ ಯಾವ ಸಾಮಾಜಿಕ ಹಿನ್ನೆಲೆಯವರು ಇದ್ದರು ಎಂಬುದು ಒಂದು. ಮತ್ತೊಂದು ಸಂಗತಿಯೆಂದರೆ ಪ್ರಾಚೀನ ಕಾಲದಲ್ಲಿ ಐತಿಹಾಸಿಕ ಹಿನ್ನೆಲೆಯ ಪ್ರಕಾರ ಎಲ್ಲಾ ಜಾತಿಯ ಮಹಿಳೆಯರು ದೇವದಾಸಿಯಗಿದ್ದರು ಎಂಬುದು ತಿಳಿದುಬರುತ್ತದೆ.

ಮತ್ತೊಂದು ಹೆಚ್ಚು ಲಲಿತಕಲೆಗಳಲ್ಲಿ ಮಾತ್ರ ಬಾಗವಹಿಸುತ್ತಿದ್ದರು ಎಂದು ಚರ್ಚಿಸಿದ್ದಾರೆ. ಆದರೆ ಇತ್ತೀಚಿನ ಸ್ಥಿತಿಯನ್ನು ನೋಡಿದರೆ ಬೇರೆ ರೀತಿಯಲ್ಲಿದೆ.

ಭಾರತದಲ್ಲಿ ವೇಶ್ಯಾವಾಟಿಕೆಯ ಬಗ್ಗೆ ವಿಶ್ಲೇಷಣಾತ್ಮಕವಾದಂತಹ ಸತ್ಯಗಳನ್ನು ಪ್ರತಿಪಾದಿಸಿದ್ದಾರೆ. ಇದರ ಸಾರಾಂಶದಲ್ಲಿ ವೇಶ್ಯಾವಾಟಿಕೆಯು ಪ್ರಚಲಿತ ಮಾರುಕಟ್ಟೆಯ ಸರಕಿನ ಮಾದರಿಯಾಗಿದೆ. ಮಹಿಳೆಯರ ಮತ್ತು ಮಕ್ಕಳ ದೇಹ ಮತ್ತು ಮನಸ್ಸನ್ನು ಗಂಡಸರ ಕಾಮತೃಷೆಗೆ, ಅಧಿಕ ಸಂಪಾದನೆಗೆ ಒಳ್ಳೆಯ ವ್ಯವಸ್ಥೆಯಾಗಿತ್ತು. ಅಂತರರಾಷ್ಟ್ರೀಯ ಮಟ್ಟದಲ್ಲಿ ವೇಶ್ಯಾವಾಟಿಕೆಯು ಒಂದು ಲಾಭ ತರುವಂತಹ ಉದ್ಯಮವಾಗಿದೆ. ಭಾರತದಲ್ಲಿ ಈ ಪದ್ಧತಿಯು ಗಂಭೀರವಾದ ಸಾಮಾಜಿಕವಾದ ಸಮಸ್ಯೆಯಾಗಿದೆ. ಈ ವೃತ್ತಿಯು ದೇಶದ ದೊಡ್ಡ ಮಹಾನಗರಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತದೆ. ಇದರ ಬಗ್ಗೆ ನಿಖರವಾದ ದಾಖಲೆ ಅಥವಾ ವರದಿಗಳು ಇಲ್ಲವಾಗಿರುವುದರಿಂದ ಇವರ ಅಂಕಿಸಂಖ್ಯೆಗಳನ್ನು ನಿಖರವಾಗಿ ಹೇಳಲು ಸಾದ್ಯವಿಲ್ಲ. ಉಗಮ, ಕಾರಣಗಳು, ಸಮಸ್ಯೆಗಳು, ಪರಿಮಾಣ, ಪ್ರಚಲಿತ ವಿಷಯಗಳು ಮತ್ತು ಒಲವುಗಳ ಬಗ್ಗೆ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ "ಭಾರತದಲ್ಲಿ ವೇಶ್ಯಾವಾಟಿಕೆ; ಸಮಸ್ಯೆಗಳು(ವಿಷಯಗಳು) ಮಾಡಲಾಗಿದೆ. ಇಲ್ಲಿ ದೇವದಾಸಿ ಪದ್ಧತಿಯ ಬಗ್ಗೆ ಚರ್ಚಿಸಿದ್ದಾರೆ. ಈ ಪದ್ಧತಿಗೆ ಮೂಲ ಕಾರಣ ಜಮೀನುದಾರ ಮತ್ತು ಪೂಜಾರಿಗಳ(ಪುರೋಹಿತರ) ದ್ರೋಹ ಮತ್ತು ವಂಚನೆಯಿಂದ, ಮೂಢನಂಬಿಕೆ, ಬಡತನಗಳಿಂದ ಈ ಪದ್ಧತಿ ಹೆಚ್ಚು ಚಾಲ್ತಿಗೆ ಬಂತು ಎಂದು ತಿಳಿಸಿದ್ದಾರೆ[೫೩]**(ಜಯಕುಮಾರ್ ಕೆ ಮತ್ತು ದಿಭಾರತಿ ಹಾಲ್ದಾರ್)**

ದಕ್ಷಿಣ ಭಾರತದಲ್ಲಿ ಜಾತಿಪದ್ಧತಿ ಪ್ರಸ್ತುತದಲ್ಲಿಯೂ ಸಹ ಸಾಂಸ್ಥಿಕ ರೂಪದ ತಾರತಮ್ಯವನ್ನು ಮೇಲ್ವರ್ಗದ ಪುರುಷರಿಂದ ಕೆಳಜಾತಿಯ ಮಹಿಳೆಯರು ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಜಾತಿಯಾಧಾರಿತವಾದ ಕೀಳುಮಟ್ಟದ ವೃತ್ತಿಯಲ್ಲಿ ಹಲವಾರು ಮಹಿಳೆಯರು ಆಚರಣೆಯನ್ನು ಮಾಡುತ್ತಿದ್ದಾರೆ. ದೇವದಾಸಿ ಪದ್ಧತಿಯಲ್ಲಿ ದೇವತೆ/ರಿಗೆ ಅರ್ಪಿಸಿಕೊಂಡರೆ ಇನ್ನಾವುದೇ ಕಾರಣದಿಂದ ಪರಪುರುಷರನ್ನು ಮದುವೆಯಾಗುವಂತಿಲ್ಲ. ಜೊತೆಗೆ ತನ್ನ ವಯಸ್ಸು ಇರುವವರೆಗೂ ಪರಪುರುಷರ ಲೈಂಗಿಕ ತೃಷೆಯನ್ನು ತೀರಿಸುವ ಗುಲಾಮಗಿರಿಯಾಗಿರಬೇಕು. ದೇವಸ್ಥಾನದಲ್ಲಿ ಪೂಜಾರಿಯು ದಲಿತ ಸಮುದಾಯಕ್ಕೆ ಇಲ್ಲಸಲ್ಲದ ಕಥೆಯನ್ನು ಕಟ್ಟಿ ದೇವರಿಗೆ ದಲಿತ ಯುವತಿಯರನ್ನು ಅರ್ಪಿಸಲು ಪರೋಕ್ಷವಾಗಿ ಅಣಿಮಾಡಿ ಅದರ ಆಚರಣೆಯನ್ನು ಮಾಡುತ್ತಿದ್ದರು. ಕರ್ನಾಟಕದಲ್ಲಿ ಸುಮಾರು ಒಂದು ಲಕ್ಷಕ್ಕೂ ಹೆಚ್ಚು ದೇವದಾಸಿಯರಿದ್ದಾರೆಂದು ಅಂದಾಜಿಸಿದ್ದಾರೆ. ಆದರೆ ಎಲ್ಲ ದೇವದಾಸಿಯರು ಲೈಂಗಿಕ ವೃತ್ತಿಯನ್ನು ನಡೆಸುತ್ತಿಲ್ಲ ಆದರೆ ಹೆಚ್ಚಿನ ಲೈಂಗಿಕ ಕಾರ್ಯಕರ್ತರು ದೇವದಾಸಿರಾಗಿದ್ದಾರೆ. ವಯಸ್ಸಾದ ನಂತರ ದೇವಸ್ಥಾನಗಳ ಮುಂದೆ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಭಿಕ್ಷೆಯನ್ನು ಬೇಡುತ್ತಾರೆ, ಇತ್ತೀಚಿನ ದಿನಗಳಲ್ಲಿ ದೇವದಾಸಿ ಪದ್ಧತಿಯ ಕಾರಣಕ್ಕೆ ಮೂಢನಂಬಿಕೆ ಇದ್ದರೂ ಸಹ ಬಡತನ ಕುಟುಂಬದಲ್ಲಿ ಎದ್ದು ಕಾಣುತ್ತಿರುತ್ತದೆ. ಈ ಕಾರಣವು ಸಹ ಪದ್ಧತಿಗೆ ಪ್ರತ್ಯಕ್ಷ ಕಾರಣವಾಗಿದೆ. ಹಾಗೆ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಈ ಪದ್ಧತಿ ಲಗ್ಗೆಯಿಟ್ಟಿದೆ.

ಶೇಕಡ ೯೯ರಷ್ಟು ದಲಿತ, ಅದಿವಾಸಿ ಹಾಗೂ ಹಿಂದುಳಿದ ಜಾತಿಗಳಿಂದ ಬಂದವರಾಗಿದ್ದಾರೆ. ವೇಶ್ಯಾವೃತ್ತಿಯು ಹೊಸ ತೆರನಾದ ಶೋಷಣೆಯ ಪರಂಪರೆಯನ್ನು ತುಂಬಾ ಕಾಲದವರೆಗೂ ಕಾಯ್ದಿಟ್ಟಿದೆ. ಮಧ್ಯಪ್ರದೇಶದಲ್ಲಿಯೂ ಸಹ ಬೇಡಿಯಾ ಸಮುದಾಯವು ಸಭೆ ಸಮಾರಂಭಗಳಲ್ಲಿ ನೃತ್ಯ ಮಾಡುವುದಾಗಿದೆ. ಮತ್ತು ಲೈಂಗಿಕ ವೃತ್ತಿಯನ್ನು ಮಾಡುವುದು ಅವರಿಗೂ ಸಹ ಮದುವೆಯಿಲ್ಲ. ಆದರೆ ದೇವದಾಸಿ ಪದ್ಧತಿಯೆಂದು ಕರೆಯುವುದಿಲ್ಲ. ಇದು ಮುಂದುವರಿದು ಐಷಾರಾಮಿಯ ವೇಶ್ಯಾವೃತ್ತಿಯಲ್ಲಿ ಈ ಹೆಣ್ಣುಮಕ್ಕಳು ತೊಡಗಿ ಕೊಂಡಿದ್ದಾರೆ[೩೪]**(ಕಬೀರ್‌ಶರ್ಮ: ಬಾರನ್ ಟು ಬಿ ಡೂಮ್ಡ್, ೨೦೧೫)**

ರಾಜಸ್ಥಾನಕ್ಕೆ ಕ್ಷೇತ್ರಕಾರ್ಯಕ್ಕೆ ಭೇಟಿ ನೀಡಿದಾಗ ಅಲ್ಲಿ ದಲಿತರ ಸ್ಥಿತಿಗತಿಗಳ ಬಗ್ಗೆ ಚರ್ಚೆ ಮಾಡಲಾಯಿತು. ಅಲ್ಲಿ ಮುಖ್ಯವಾಗಿ ಜಾತಿ ದೌರ್ಜನ್ಯ, ಭೂಮಿ ಸಮಸ್ಯೆ ಮತ್ತು ಪ್ರಕೃತಿ ವೈಪರೀತ್ಯಗಳಿಂದ ದಲಿತರ ಬದುಕಿನ ಮೇಲೆ ಕೆಟ್ಟ ಪರಿಣಾಮ ಬೀರುತ್ತಿದೆ. ಅದೇ ಸಮಯದಲ್ಲಿ ನಾನು ಕೆಲವು ದಲಿತರಲ್ಲಿ ದಲಿತರಾಗಿರುವ ಸಮುದಾಯಗಳನ್ನು ಭೇಟಿ ಮಾಡಿದೆ. ಭೇಮಗರ್ ಜಿಲ್ಲೆಯಲ್ಲಿ ಸಾಟಿಯ ಸಮುದಾಯವು ವಿಭಿನ್ನ ರೀತಿಯಲ್ಲಿದೆ. ಅದೇನೆಂದರೆ ಸಮುದಾಯದ ಯುವತಿಯರು ಮತ್ತು ಸುಂದರವಾಗಿರುವ ಹೆಂಗಸರು ವೇಶ್ಯಾವೃತ್ತಿ ಮಾಡುತ್ತಾರೆ ಅವರ ಗಂಡಸರು ಅವರಿಗೆ ಸಹಾಯಕರಾಗಿ ಇಲ್ಲವೇ ಹೊರಗಿನ ಕೆಲಸಗಳನ್ನು ನಿರ್ವಹಿಸಿಕೊಂಡು ಹೊಗುತ್ತಾರೆ. ಸುರ್ಗಾವ್ ಎಂಬ ಹಳ್ಳಿಯಲ್ಲಿ ಸುಮಾರು ೧೦೦ ಕುಟುಂಬಗಳ ಸಾಟಿಯಾ ಎಂಬ ಜಾತಿಯ ಸಮುದಾಯವಿದೆ. ಅದರಲ್ಲಿ ಸುಮಾರು ೨೦೦ ಜನ ವೇಶ್ಯಾವಾಟಿಕೆಯನ್ನು ನಡೆಸುತ್ತಾರೆ. ಲೈಂಗಿಕ ವೃತ್ತಿ ಮತ್ತು ನೃತ್ಯ ಇವೆರಡು ದೇವದಾಸಿಯ ಸಂಸ್ಕೃತಿಗೆ ಹತ್ತಿರವಿರುವ ಚಟುವಟಿಕೆಗಳು. ಅಂದರೆ ಭಾರತದಲ್ಲಿ ಇಂತಹ ಪದ್ಧತಿಯನ್ನು ಹೋಲುವ ದಲಿತ ಇಲ್ಲವೇ ಅದಿವಾಸಿ ಮತ್ತು ಹಿಂದುಳಿದ ಸಮುದಾಯಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಆಚರಣೆಯಲ್ಲಿದೆ. ಬರೀ ದಕ್ಷಿಣಭಾಗದಲ್ಲಿ ಮಾತ್ರ ಇಲ್ಲ[೩೩]**(ಕ್ಷೇತ್ರ ಅಧ್ಯಯನ ರಾಜಸ್ಥಾನ್; ೨೦೧೬)** ಹೀಗೆ ಭಾರತದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ದೇವದಾಸಿಯ ಪದ್ಧತಿಗೆ ಸಮೀಪವಿರುವ, ತನ್ನದೇ ರೀತಿರಿವಾಜುಗಳನ್ನು ಹೋಲುವ ಸಂಸ್ಕೃತಿ ಮತ್ತು ಆಚರಣೆಗಳನ್ನು ನೋಡಬಹುದು ಮತ್ತು ಪ್ರತಿ ರಾಜ್ಯದ ಮತ್ತು ಕಾಲ-ಸಮಯವೂ ಕೂಡ ಈ ಪದ್ಧತಿಯ ಕತೆಯನ್ನು ಕಟ್ಟಿಕೊಡುತ್ತವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹಲವಾರು ಪ್ರಶ್ನೆಗಳು ಮತ್ತು ಅವುಗಳಿಗೆ ಕೆಲವು ಸಮಾಧಾನದ ಪ್ರತ್ಯುತ್ತರಗಳು ಸಹ ದೊರೆತಿವೆ. ಈ ಅಧ್ಯಯನದ ಉದ್ದೇಶಗಳಲ್ಲಿ ದೇವದಾಸಿಯರೆಂದರೆ ಯಾರು ಮತ್ತು ಇನ್ನೂ ಏಕೆ ಈ ಪದ್ಧತಿ ಮುಂದುವರಿಯುತ್ತಿದೆ ಎಂಬುದಕ್ಕೆ ಹಲವು ಸಮಾಧಾನಕರ ಉತ್ತರಗಳನ್ನು ಸಹ ನೋಡಲಾಗಿದೆ.

### ೨.೩.೩. ಕರ್ನಾಟಕದಲ್ಲಿ ದೇವದಾಸಿ ಪದ್ಧತಿ

ದೇವದಾಸಿ ಶಬ್ದ ಸಂಸ್ಕೃತ ಭಾಷೆಯಿಂದ ಬಂದದ್ದು. ಸ್ಥಳೀಯವಾಗಿ ಇವರನ್ನು ಸೂಳೆ, ಬಸವಿ, ಸಾನಿ, ಕಸಬಿ ಮತ್ತು ಕಟ್ಟಿಕೊಂಡವಳು-ಹೀಗೆ ಇನ್ನೂ ಅನೇಕ ಹೆಸರುಗಳಿಂದ ಕರೆಯಲಾಗಿದೆ.

ಅನೇಕ ವಸ್ತುಗಳಂತೆ ತಮ್ಮ ಸಂಕಷ್ಟಗಳ ಪರಿಹಾರಕ್ಕೆ ಭಕ್ತರು ನೀಡಲ್ಪಟ್ಟ ಕಾಣಿಕೆಗಳೇ ಈ ದೇವದಾಸಿಯರು. ಅವರ ಕರ್ತವ್ಯಗಳ ಅಧಾರದ ಮೇಲೆ ಇವರನ್ನು ಅನೇಕ ಹೆಸರಿನಿಂದ ಕರೆದಿದ್ದರೂ ಎಲ್ಲರೂ ಲೈಂಗಿಕವಾಗಿ ಜಾಗೃತರಾಗಬೇಕು, ಅಂದರೆ ಪುರುಷರ ಸಂಗ ಮಾಡಬೇಕು. ಇದರಿಂದ ಆಕೆಯನ್ನು ದೇವರಿಗೆ ಕಾಣಿಕೆಯಾಗಿ ಕೊಟ್ಟ ವ್ಯಕ್ತಿಗೆ, ಅವನ ಮನೆತನಕ್ಕೆ ಒಳಿತಾಗುತ್ತದೆ. ಈ ಕಾರಣದಿಂದ ಆಕೆ ಹೆಚ್ಚು ಹೆಚ್ಚು ಪುರುಷರೊಡನೆ ಸಂಗ ಮಾಡಿದಷ್ಟು ಈಕೆ ಹೆಚ್ಚು ಜಾಗೃತಳೆಂದು ಪರಿಗಣಿಸುತ್ತಾರೆ. ಇದರಿಂದ ಆಕೆಯನ್ನು ಕಾಣಿಕೆಯಾಗಿ ಇತ್ತ ಆಕೆಯ ತಂದೆಯ, ಅಣ್ಣನ ಮನೆತನಕ್ಕೆ ಹೆಚ್ಚಿನ ಆರ್ಥಿಕ ಆದಾಯ ಬರುತ್ತದೆ. ಇದನ್ನೇ ದೇವತೆ ನೀಡಿದ ಅನುಕೂಲತೆ ಎಂದು ಸಾರಲಾಗಿದೆ. ದೇವದಾಸಿಯನ್ನು ಸೂಳೆ, ಗರತಿ ಹಾಗೂ ಜೋಗತಿ ಎಂದು ಮೂರು ಬಗೆ ಮಾಡಲಾಗಿದೆ. ಇದೇ ರೀತಿ ದೇವರ ಸೇವೆಗೆ ಮುತ್ತಿನ ತಾಳಿಯನ್ನು ಕಟ್ಟಿಸಿಕೊಂಡ ಈಕೆಯನ್ನು ವಯೋಮಾನಕ್ಕೆ ಅನುಗುಣವಾಗಿ ಹಾಲು ಮುತ್ತು, ಸೂಳೆ ಮುತ್ತು ಮತ್ತು ಜೋಗತಿ ಮುತ್ತು ಕಟ್ಟಿಸಿಕೊಂಡವರು ಎಂದು ಮೂರು ಭಾಗ ಮಾಡಲಾಗಿದೆ. ಸಂಸ್ಕೃತ ಧಾರ್ಮಿಕ ಸಂಪ್ರದಾಯದಲ್ಲಿ ದೇವದಾಸಿಯರನ್ನು ರಂಭಾ ಮತ್ತು ರೇಣುಕಾ ಎಂದು ಎರಡು ಸಂಪ್ರದಾಯವಾಗಿ ಮಾಡಲಾಗಿದೆ. ಮೊದಲನೆಯ ಗುಂಪು ಲಲಿತಕಲೆಗೆ, ಎರಡನೆಯ ಗುಂಪು ದೈಹಿಕ ಸುಖದ ಸೇವೆಗೆ ಮೀಸಲಿಟ್ಟವರು. ಅಂದರೆ ದೇವರಿಗೆ ರಂಗ ಮತ್ತು ಅಂಗ ಭೋಗ ನೀಡಲು ಮೀಸಲಾದವರು. ಈ ಸಂಪ್ರದಾಯದ ಹೆಸರೇ ಹೇಳುವಂತೆ ರೇಣುಕಾ ಸಂಪ್ರದಾಯದ ದೇವದಾಸಿ ಪದ್ಧತಿ ಪ್ರಚಾರದಲ್ಲಿದೆ. ಇಂದು ಸಂಪ್ರದಾಯ ಬಿಟ್ಟು ಸೂಳೆಗಾರಿಕೆಗೆ ಮಾಡಲು ಹೋಗುವ ಹುಡುಗಿಯರಿಗೆ ರಹದಾರಿಯಾಗಿ ದೇವದಾಸಿ ದೀಕ್ಷೆ ನೀಡಲಾಗುತ್ತಿದೆ. ಇದರಿಂದ ಪೂಜಾರಿಗೆ, ತಾನಿಕರಿಗೆ, ತಲೆಹಿಡುಕರಿಗೆ ಸೂಳೆಗಾರಿಕೆ ಮನೆಗಳ ಒಡೆಯ/ತಿಯರಿಗೆ – ಹೀಗೆ ಅನೇಕರಿಗೆ ಲಾಭ ಬರುತ್ತದೆ. ಆದರೆ ತನ್ನ ಎಳೆಯ ವಯಸ್ಸಿನಲ್ಲಿ ತಿಳಿಯದೆ, ತಂದೆ–ತಾಯಿಗಳ ಅಜ್ಞಾನದಿಂದ ದೇವದಾಸಿಯಾದ ಹುಡುಗಿ ಸೂಳೆಯಾಗಿ ತನ್ನ ಬಾಳು ಸಾಗಿಸಿ, ವಯಸ್ಸಾದಂತೆ ರೋಗಿಷ್ಠೆಯಾಗಿ ತನ್ನ ಮನೆಗೆ ಹಿಂದಿರುಗುತ್ತಾಳೆ. ಗಂಡ, ಮಕ್ಕಳಿಲ್ಲದ ಈಕೆಗೆ ಮತ್ತೆ ನೆರವಾಗುವುದು ಆಕೆಯ ಧಾರ್ಮಿಕ ಸಂಪ್ರದಾಯ. ಪುಣ್ಯಕ್ಷೇತ್ರ ಇವರನ್ನು ಜೋಗತಿಯರನ್ನಾಗಿ ಮಾಡಿ ಮತ್ತೆ ತಮ್ಮ ಸೇವೆಗೆ ತೆಗೆದುಕೊಂಡು ಆಕೆಯ ಶೋಷಣೆ ಮುಂದುವರಿಯುತ್ತದೆ. ಇದಕ್ಕೆ ಭಕ್ತರ ಅಜ್ಞಾನ, ಬಡತನ, ಶೋಷಣೆ, ಸದಾ ಅನಾವೃಷ್ಟಿ ಹೊಂದಿದ ವಾತಾವರಣಗಳೇ ಈ ಪದ್ಧತಿಗೆ ಕಾರಣ.[೫೨] **(ಕೆ.ಜಿ. ಗುರುಮೂರ್ತಿ, ೧೯೯೬)**

ಬೆಳಗಾವಿ ಜಿಲ್ಲೆಯ ದೇವದಾಸಿ ಪದ್ಧತಿ ನಿರ್ಮೂಲನಾ ಪ್ರಯತ್ನವನ್ನು ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ(ಮಾಸ್)ಯವರು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಹಲವು ರೀತಿಯ ಪ್ರಯತ್ನಗಳು ನಡೆದಿವೆ. ಸರ್ಕಾರದ ಕಾಯ್ದೆ ಕಾರ್ಯಕ್ರಮಗಳು, ಸಂಘಟನೆಯ ತುಡಿತ ಮಿಡಿತಗಳು ಹಾಗೂ ಅನೇಕ ಅಶಾದಾಯಕ ಪ್ರಾಮಾಣಿಕ ಪ್ರಯತ್ನಗಳು ಸಹ ಆಗಿವೆ. ಅದರೆ ಕೆಲವು ಪ್ರಯತ್ನಗಳು ಹೆಚ್ಚು ಸಫಲವಾಗಿಲ್ಲವಾದರೂ ವ್ಯರ್ಥವೂ

ಸಹ ಆಗಿಲ್ಲ. ದೇವದಾಸಿ ಪದ್ಧತಿಯಲ್ಲಿ ಬಲಿಯಾಗಿ ಬದುಕುತಿದ್ದ ನಾವುಗಳು ಬರೀ ಕೇವಲ ಫಲಾನುಭವಿಗಳ ಸ್ಥಾನ ಪಡೆದಿದ್ದು ಒಂದು ದುರಂತವಾಗಿತ್ತು. ಹಾಗೆ ನೋಡಿದರೆ ಪದ್ಧತಿಯ ನಿರ್ಮೂಲನೆ ದೂರದ ದಾರಿಯಾಗಿತ್ತು. ದೇವದಾಸಿ ಪುನರ್ವಸತಿ ಯೋಜನೆಯಲ್ಲಿ ಮಾಸಾಶನ, ವಸತಿ ಮತ್ತು ಕೆಲವು ಸಾಲ ಸೌಲಭ್ಯಗಳನ್ನು ಮಾತ್ರ ಹಾಗೂ ಇವೆಲ್ಲವು ತಾತ್ಕಾಲಿಕವಾದ ಜೀವನೋಪಾಯವನ್ನು ನೀಡಿದ್ದಷ್ಟೇ ಹೊರತು ಈ ಪದ್ಧತಿಯ ಮೇಲಿನ ಜನರ ಮನೋಭಾವನೆ ಮತ್ತು ನಂಬಿಕೆಗಳನ್ನು ಬದಲಾಯಿಸುವಲ್ಲಿ ಯಾವ ಪರಿಣಾಮವನ್ನು ಬೀರಲಿಲ್ಲ. ಅಂದು ಸೃಷ್ಟಿಯಾದ ಜೋಗತಿ ಸಂಪ್ರದಾಯ ಇಂದಿಗೂ ಮುಂದುವರಿದು ನಮ್ಮೆಲ್ಲರ ಮಧ್ಯೆ ದೇವದಾಸಿ ಹೆಸರಿನಲ್ಲಿ ಉಸಿರಾಡುತ್ತಿದೆ. ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅಂಚಿನಲ್ಲಿದ್ದ ಹರಿಜನ ಕುಟುಂಬಗಳು ಈ ವ್ಯವಸ್ಥೆಗೆ ಸುಲಭವಾಗಿ ಬಲಿಯಾಗುತ್ತಿದ್ದರು. ಈ ಕುಟುಂಬಗಳ ಹೆಣ್ಣುಮಗುವನ್ನು ತಿಳಿಯದ ವಯಸಿನಲ್ಲಿ ಎಲ್ಲಮ್ಮ ದೇವಿಗೆ ಹರಕೆ ಬಿಡುವ ಪದ್ಧತಿ ಮುಂದುವರಿದಿತ್ತು. ದೇವದಾಸಿ ಪದ್ಧತಿ ಮುಖ್ಯವಾಗಿ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರದ ದಕ್ಷಿಣದ ಜಿಲ್ಲೆಗಳಲ್ಲಿ ಆಚರಣೆಯಲ್ಲಿತ್ತು. ಸಾಮಾಜಿಕ ಕಳಕಳಿಯುಳ್ಳ ಜನರ ಪ್ರಯತ್ನದಿಂದಾಗಿ ೧೯೮೨ರಲ್ಲಿ ಈ ಪದ್ಧತಿಯ ಆಚರಣೆಯನ್ನು ನಿಷೇಧಿಸಿ ಕರ್ನಾಟಕ ಸರ್ಕಾರವು ಕಾಯ್ದೆಯನ್ನು ರೂಪಿಸಿ, ೧೯೮೪ರಿಂದ ಜಾರಿಗೆ ತಂದಿತು. ಆದರೆ ಧಾರ್ಮಿಕ ನಂಬಿಕೆಯ ಕವಚವಿದ್ದ ಈ ವ್ಯವಸ್ಥೆಯನ್ನು ಕಾಯ್ದೆ ಕಾಯಲಿಲ್ಲ. ಸವದತ್ತಿಯ ಎಲ್ಲಮ್ಮನ ದೇವಸ್ಥಾನವು ದೇವದಾಸಿಯರನ್ನು ಉತ್ಪಾದಿಸುವ ಕಾರ್ಖಾನೆಯಾಗಿತ್ತೆಂದು ಕೆಲವು ಸ್ವಯಂ ಸೇವಾ ಸಂಸ್ಥೆಗಳು ಧ್ವನಿ ಎತ್ತಿದವು. ಮೊದಲು ಏಳು ಜಿಲ್ಲೆಗಳಲ್ಲಿ ಸಮೀಕ್ಷೆ ನಡೆಸಲು ಪ್ರಾರಂಭಿಸಿತು. ಹೀಗೆ ತನ್ನ ಸಂಘಟನೆ ಮತ್ತು ಸರ್ಕಾರದ ಕೆಲವು ದೇವದಾಸಿಗಳು ಪ್ರಯತ್ನಗಳನ್ನು ಹಂಚಿಕೊಂಡಿದ್ದಾರೆ.

**ದೇವದಾಸಿ ಪದ್ಧತಿಯ ಬಗ್ಗೆ ವಿವಿಧ ಆರ್ಥವಿವರಣೆ:** ದಲಿತ ಸಮುದಾಯದಲ್ಲಿ ಹೆಣ್ಣು ಮಗುವನ್ನು ಎಲ್ಲಮ್ಮ ಇಲ್ಲವೇ ಇನ್ನಾವುದೊ ಹೆಣ್ಣುದೇವತೆಗೆ ಹರಕೆ ಬಿಡುತ್ತಾರೆ. ಹರಕೆಯನ್ನು ಕೆಲವೊಮ್ಮೆ ಮಗು ಹುಟ್ಟುವ ಮೊದಲೇ ಅಥವಾ ಹುಟ್ಟಿದ ನಂತರವು ಬಿಡಬಹುದು. ಒಟ್ಟಾರೆ ಮಗುವಿಗೆ ಪ್ರಾಪಂಚಿಕ ತಿಳುವಳಿಕೆ ಬರುವ ಮೊದಲು ಸುಮಾರು ೧೧ ವರ್ಷದೊಳಗಾಗಿ ಹೆಣ್ಣು ಮಗುವನ್ನು ದೇವಿಗೆ ಅರ್ಪಣೆ ಮಾಡುತ್ತಾರೆ. ಹೀಗೆ ಅರ್ಪಣೆಯಾದ ಮೇಲೆ ಅವಳು ಯಾರನ್ನು ಮದುವೆಯಾಗುವ ಹಾಗಿಲ್ಲ. ಅರ್ಪಣೆಯಾದವಳನ್ನು ಸ್ಥಳೀಯರು ಜೋಗತಿ ಎಂದು ಗುರುತಿಸಿದರೆ ಸರಕಾರವು ದೇವದಾಸಿ ಎಂದು ಪರಿಗಣಿಸಿದೆ. ಅಲ್ಲದೆ ದೇವಿಗೆ ಹುಡುಗಿಯನ್ನು ಅರ್ಪಣೆ ಮಾಡುವ ಕಾರ್ಯಕ್ಕೆ ಮುತ್ತು ಕಟ್ಟಿಸುವುದು ಅಥವಾ ದೇವಿಗೆ ಬಿಡುವುದು ಎನ್ನುವುದು ಸ್ಥಾನಿಕ ಹೆಸರುಗಳಾಗಿವೆ. ಮುತ್ತು ಕಟ್ಟುವ ಕಾರ್ಯವನ್ನು ಸಾಮಾನ್ಯವಾಗಿ ಸವದತ್ತಿ ಎಲ್ಲಮ್ಮನ ದೇವಸ್ಥಾನದಲ್ಲಿ ಮಾಡುತ್ತಿದ್ದರು. ಇದಲ್ಲದೆ ಇನ್ನೂ ಅನೇಕ ಶಕ್ತಿ ದೇವತೆಗಳ ಸ್ಥಳಗಳಲ್ಲಿ ಮುತ್ತು ಕಟ್ಟುವ ಕಾರ್ಯವನ್ನು ಮಾಡುತಿದ್ದರು. ಹುಲಗಿ, ಸವದತ್ತಿ, ಚಂದ್ರಗುತ್ತಿ, ತೆಲಸಂಗಾ ಇತ್ಯಾದಿ... ಮೊದಲು ಈ ಕಾರ್ಯವು ಸಮಾಜದಲ್ಲಿ ಬಹಿರಂಗವಾಗಿ ನಡೆಯುತ್ತಿತ್ತು. ಕಾಯ್ದೆ ಬಂದ ನಂತರ ರಾತ್ರಿ, ದೇವಸ್ಥಾನದ ಕೆಲವು ಆವರಣಗಳು

ಇಲ್ಲವೆ ಕದ್ದುಮುಚ್ಚಿ ನಡೆಯತೊಡಗಿತು. ಅದರ ಪ್ರಕ್ರಿಯೆ ಮುತ್ತು ಕಟ್ಟುವ ಕಾರ್ಯವನ್ನು ಈಗಾಗಲೇ ಹರಕೆ ಮಾಡಿಕೊಂಡಿರುವ ಹುಡುಗಿಯು ದೊಡ್ಡವಳಾಗುವ ಮೊದಲು ನೆರವೇರಿಸುತ್ತಾರೆ. ಐದು ಹಿರಿಯ ಜೊಗತಿಯರು ಹುಡುಗಿಗೆ ಹೊಸ ಹಸಿರು ಸೀರೆ, ಹಸಿರು ಬಳೆ ತೊಡಿಸಿ, ಹಸೆ ಹಾಕಿ ದೇವಸ್ಥಾನದ ದೇವಿ ವಿಗ್ರಹ ಅಥವಾ ದೇವಿಯ ಜಗದ ಮುಂದೆ ಕುಳ್ಳಿರಿಸಿ ಅವಳಿಗೆ ಹರಿಸಿನ ಹಚ್ಚಿ, ಚೌಡಿಕೆ ಬಾರಿಸುತ್ತಾ ಎಲ್ಲಮ್ಮ ದೇವಿಯ ಹಾಡು ಹೇಳುತ್ತಾ ಹಸಿನೂಲಿನಲ್ಲಿ ಪೋಣಿಸಿರುವ ಮೂರು ಬಿಳಿ ಹಾಗೂ ಎರಡು ಕೆಂಪು ಗಾಜಿನ ಮಣಿಗಳ(ಮುತ್ತು ಎನ್ನುತ್ತಾರೆ) ಸರವನ್ನು ದೇವಿಯ ಪೂಜಾರಿ ಪೂಜೆ ಮಾಡಿ ಹಿರಿಯ ಜೋಗತಿಯರಿಗೆ ಕೊಡುತ್ತಾನೆ. ಜೋಗತಿಯರು ಹುಡುಗಿಗೆ ಜೋಗತಿ ನಿಯಮಗಳನ್ನು ಹೇಳಿಸಿ, ಬಿಳಿ, ಕೆಂಪು ಮಣಿಗಳ ಸರವನ್ನು ಅವಳ ಕೊರಳಿಗೆ ಕಟ್ಟುತ್ತಾರೆ. ದೇವಿಯ ವಿಗ್ರಹವಿರುವ ಒಂದು ಬುಟ್ಟಿಯನ್ನು ಪೂಜಿಸಿ ಅವಳಿಗೆ ನೀಡುತ್ತಾರೆ. ಈ ಬುಟ್ಟಿಯನ್ನು ಜಗ(ಜಗತ್ತು ಎನ್ನುವ ಆರ್ಥದಲ್ಲಿ) ಎನ್ನುತ್ತಾರೆ. ಮುತ್ತು ಕಟ್ಟುವ ಕಾರ್ಯ ನೆರವೇರಿಸಿದ ಐದು ಹಿರಿಯ ಜೋಗತಿಯರಿಗೆ ಮತ್ತು ಪೂಜಾರಿಗೆ ಹೊಸ ಉಡುಗೆ, ಬೇಳೆ, ಬೆಲ್ಲ, ಸಿಹಿ ತಿಂಡಿ, ಕಾಣಿಕೆಯನ್ನು ಹುಡುಗಿಯ ಮನೆಯವರು ಕೊಡುತ್ತಾರೆ. ಹೀಗೆ ಮುತ್ತು ಕಟ್ಟಿಕೊಂಡು ಗ್ರಾಮಕ್ಕೆ ಹಿಂದಿರುಗಿದ ನಂತರ ಹುಡುಗಿಯ ಮನೆಯವರು ಆ ಊರಿನಲ್ಲಿ ವಾಸವಾಗಿರುವ ಪ್ರತಿ ಬಣದ(ಮನೆತನದ) ಹಿರಿಯ ಜೋಗತಿಯರನ್ನು ಕರೆದು ಹಡಲಿಗೆ ತುಂಬಿ ಕನಿಷ್ಠ ರೂ. ೧೦೧ ಕಾಣಿಕೆ ನೀಡಿದ ನಂತರವೇ ಮುತ್ತು ಕಟ್ಟಿಸಿಕೊಂಡ ಹುಡುಗಿ ಜೋಗತಿ ಸ್ಥಾನ ಪಡೆಯುತ್ತಾಳೆ. ಆ ನಂತರವೇ ಗ್ರಾಮದವರು ಧಾರ್ಮಿಕ ವಿಧಿಗಳನ್ನು ನೆರವೇರಿಸಲು ಕರೆಯುತ್ತಾರೆ. ಇದಲ್ಲದೆ ಕೇರಿಯ ಜನರನ್ನು ಕರೆದು ಸಿಹಿ ಅಥವಾ ಮಾಂಸಾಹಾರಿ ಊಟವನ್ನು ಮನೆಯವರು ನೀಡಬೇಕು. ಈ ಊಟ ನೀಡಿದ ನಂತರವೇ ಜೋಗತಿಯಾದ ಹುಡುಗಿಗೆ ಗಂಡುಮಕ್ಕಳ ಹಕ್ಕು(ಆಸ್ತಿ ಪಾಲು) ಸಿಗುತ್ತದೆ. ಈ ಆಚರಣೆಗಳು ಕರ್ನಾಟಕದ ಹಲವು ಕಡೆಗಳಲ್ಲಿ ವಾಡಿಕೆಯಿತ್ತು. ಜೋಗತಿಯ ಪ್ರಕಾರಗಳು(ಆಚರಣೆಯಲ್ಲಿದ್ದ) ಗರತಿ ಮುತ್ತು ಕಟ್ಟಿದವರು, ಸೂಳೆ ಮುತ್ತು ಕಟ್ಟಿದವರು, ಪುರುಷ ವೇಷ ಧರಿಸಿದ ಜೋಗಮ್ಮಗಳು, ಸ್ತ್ರೀ ವೇಷ ಧರಿಸಿದ ಜೋಗಪ್ಪಗಳು ಇತ್ಯಾದಿ.. ದಲಿತ ಹೆಣ್ಣುಮಕ್ಕಳಿಗೆ ಹೆಚ್ಚಿನದಾಗಿ ಸೂಳೆ ಮುತ್ತನ್ನು ಕಟ್ಟಿ ಅವಳನ್ನು ದೇವಿಗೆ ಬಿಟ್ಟಿರುವುದಾಗಿ ಪರಿಗಣಿಸುತ್ತಾರೆ. ಸೂಳೆ ಮುತ್ತು ಕಟ್ಟಿಕೊಂಡು ಜೋಗತಿಯಾದ ಹುಡುಗಿ ದೊಡ್ಡವಳಾದಾಗ ಯಾವುದೇ ಪುರುಷ ಅವಳ ಪೋಷಕರಲ್ಲಿ ಅವಳೊಂದಿಗೆ ಸಂಬಂಧ ಬೆಳೆಸುವ ಅನೌಪಚಾರಿಕ ಒಪ್ಪಂದ ಮಾಡಿಕೊಳ್ಳುತ್ತಾನೆ. ಸಂಬಂಧಕ್ಕೆ ಬದಲಾಗಿ ಅವಳ ಕುಟುಂಬಕ್ಕೆ ಅವಶ್ಯವಿರುವ ಆಹಾರ ಪದಾರ್ಥ, ಬಟ್ಟೆ ಖರ್ಚುಗಳನ್ನು ಭರಿಸಲು ಒಪ್ಪುತ್ತಾನೆ. ಆತನನ್ನು ದೇವದಾಸಿ ಮಾಲೀಕ ಎಂದು ಕರೆಯುತ್ತಾಳೆ. ಅವನಿಗಿಂತ ಹೆಚ್ಚು ಹಣ ಕೊಡುವವರಿದ್ದಾಗ ಮೊದಲ ಸಂಬಂಧವನ್ನು ಮುರಿದು ಇನ್ನೊಂದು ಸಂಬಂಧವನ್ನು ಮಾಡಿಕೊಳ್ಳುತ್ತಾಳೆ. ಈ ರೀತಿ ಸಂಬಂಧವು ಯಾವುದೇ ಜಾತಿ/ಮತಕ್ಕೆ ಪುರುಷರು ಸೇರಿರಬಹುದು. ಈ ಹುಡುಗಿ ದೇವದಾಸಿಯಾಗಿ ಪುರುಷ ಸಮುದಾಯದ ಲೈಂಗಿಕ ಆಸಕ್ತಿಗಳನ್ನು ತೀರಿಸುವುದಲ್ಲದೆ, ತಮ್ಮ ಸಮುದಾಯದ ಕೆಲವು ಧಾರ್ಮಿಕ ಅವಶ್ಯಕತೆಗಳನ್ನು ಸಹ ಪೂರೈಸುತ್ತಾರೆ. ಹೀಗೆ ಮಾಡುವುದರ

ಮೂಲಕ ತಮ್ಮ ಮನೆಯ ಆರ್ಥಿಕ ಜವಾಬ್ದಾರಿಯ ಹೊರೆ ಹೊತ್ತುಕೊಳ್ಳುತ್ತಾರೆ. ತಮ್ಮ ಮಾಲೀಕರ ಸಂಬಂಧದಿಂದ ಮಕ್ಕಳನ್ನು ಪಡೆಯುತ್ತಾರೆ. ಮಕ್ಕಳು ತಮ್ಮ ತಾಯಿಯ ಜೊತೆ ವಾಸವಿರುತ್ತವೆ. ತಂದೆಯೊಂದಿಗೆ ಯಾವ ಸಂಬಂಧ ಹೊಂದಿರುವುದಿಲ್ಲ. ಸಮುದಾಯದಲ್ಲಿ ಇತರ ಮಕ್ಕಳಂತೆ ಸ್ಥಾನವಿದ್ದರೂ ತಂದೆಯ ಆಸ್ತಿಯ ಹಕ್ಕು ಇರುವುದಿಲ್ಲ ಮತ್ತು ತಂದೆಯನ್ನು ಬಹಿರಂಗವಾಗಿ ಗುರುತಿಸುವಂತಿಲ್ಲ. ತಂದೆಗೆ ಯಾವುದೇ ರೀತಿಯ ನೈತಿಕ ಹೊಣೆ ಇರುವುದಿಲ್ಲ. ಇದಲ್ಲದೆ ಕೆಲವು ದೇವದಾಸಿಯರು ಕಾಲಾನಂತರ ವೇಶ್ಯಾವಾಟಿಕೆಗೆ ಬಲಿಯಾಗಿದ್ದಾರೆ. ಇದರ ಪರಿಣಾಮವಾಗಿ ಶೇಕಡ ೨೦ಕ್ಕೂ ಹೆಚ್ಚು ದೇವದಾಸಿಯರು ಲೈಂಗಿಕ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ. ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಇವರ ಪ್ರಕಾರ ವಂಶಪಾರಂಪರ್ಯವಾಗಿ ೨೬.೪೧%, ಗಂಡುಮಕ್ಕಳಿಲ್ಲ ವೆಂದು ೨೬.೬೪%, ಅನಾರೋಗ್ಯದ ಕಾರಣ, ೧೩.೯೧%, ಕುಟುಂಬಕ್ಕೆ ದೇವರ ಕಾಟವೆಂದು ೧೧.೨೧%, ತಂದೆ-ತಾಯಿ ನೋಡಿಕೊಳ್ಳಲು, ೩.೦೫%, ಜಡೆ ಬಂದಿದೆಯೆಂದು, ೨.೯%, ಜಗ ಪೂಜಿಸುವ ಸಲುವಾಗಿ, ೨.೫೨%, ಬಡತನ ೧೦.೨೭% ಹಾಗೂ ಇತರೆ ಕಾರಣಗಳು ೨.೭% ಕಂಡುಬಂದಿವೆ. ದೇವದಾಸಿ ಮಾಡಲು ಕಂಡುಬಂದ ಮೇಲಿನ ಕಾರಣಗಳು ಕೇವಲ ಬಾಹ್ಯ ಕಾರಣಗಳಾಗಿದ್ದು, ನಿಜವಾದ ಕಾರಣ ಬಡತನವಾಗಿದೆ. ಅವಳಿಗೆ ಹಾಗೂ ಅವಳ ಕುಟುಂಬಕ್ಕೆ ಈ ಪದ್ಧತಿಯು ಜೀವನೋಪಾಯವಾದರೆ, ಅವಳ ಸಮುದಾಯಕ್ಕೆ ಲೈಂಗಿಕ ಹಾಗೂ ಧಾರ್ಮಿಕ ಅವಶ್ಯಕತೆಗಳನ್ನು ಪೂರೈಸುವ ವ್ಯವಸ್ಥೆಯಾಗಿದೆ. ಇದೊಂದು ಶೋಷಣೆಯ ಬಲೆಯೆಂದು ಅರಿವಾಗುವ ವಯಸ್ಸು ತಲುಪುವ ಮೊದಲೇ ದೇವದಾಸಿ ಜೀವನಕ್ಕೆ ಒಗ್ಗಿಹೋಗಿದ್ದಾಳೆ. ಶೋಷಣೆಯನ್ನು ಪ್ರಶ್ನಿಸುವ ಧ್ವನಿಗಳನ್ನು ದೇವಿಯ ಮೇಲಿರುವ ನಂಬಿಕೆ ಮತ್ತು ಭಯಗಳು ಅದುಮುತ್ತವೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಈ ವ್ಯವಸ್ಥೆಯೊಳಗಿರುವ ಶೋಷಣೆಯನ್ನು ಗುರುತಿಸುವ ತಿಳುವಳಿಕೆ, ಅದನ್ನು ಪ್ರಶ್ನಿಸುವ ಆತ್ಮಸ್ಥೈರ್ಯ ಹಾಗೂ ಇವುಗಳನ್ನು ಪೋಷಿಸುವ ಅವಕಾಶಗಳ ಕೊರತೆ ಮೂಲಕಾರಣಗಳಾಗಿವೆ.[೫೭]**(ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ)** ಹೀಗೆ ಮಾಸ್ ಸಂಸ್ಥೆಯ ಕಾರ್ಯಕರ್ತರು ತಮ್ಮ ಅನುಭವಗಳನ್ನು ಸಮಾಜೋ-ಆರ್ಥಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಈ ಅಧ್ಯಯನವನ್ನು ಗಮನಿಸಿದರೆ ದೇವದಾಸಿ ಪದ್ಧತಿ ಕುರಿತು, ಅರ್ಥ ವಿವರಣೆ ಮತ್ತು ಪ್ರಸ್ತುತದ ಚಿತ್ರಣಗಳನ್ನು ತಮ್ಮ ಲೇಖನಗಳಲ್ಲಿ ಹಿಡಿದಿಟ್ಟಿದ್ದಾರೆ.

ದಲಿತ ಮಹಿಳೆಯರ ಶೋಷಣೆಯು ಜಾತಿಯ ಮತ್ತು ಪುರುಷಪ್ರಧಾನ ವ್ಯವಸ್ಥೆಯ ಪರಿಕಲ್ಪನೆ ಮತ್ತು ಸಿದ್ಧಾಂತ ಹೇಗೆ ದೇವದಾಸಿ ಪದ್ಧತಿಗೆ ಮೇಲಿನ ಎರಡು ಅಂಶಗಳು ಕಾರಣವಾಗಿವೆ ಎಂಬುದನ್ನು ವಿಭಿನ್ನ ಆಧಾರಗಳ ಸಮೇತ ವ್ಯಾಖ್ಯಾನಿಸಲಾಗಿದೆ. ದೇವದಾಸಿ ಪದ್ಧತಿಯ ಉಗಮ, ಅರ್ಪಣೆಯ ಪ್ರಕ್ರಿಯೆಗಳು, ಅರ್ಪಣೆಯ ನಂತರದ ಜೀವನದ ಸ್ಥಿತಿಗಳನ್ನು ವಿಶ್ಲೇಷಿಸಿದ್ದಾರೆ. ದೇವದಾಸಿ ಸಂಸ್ಕೃತಿ ಧೀರ್ಘವಾಗಿ ಮತ್ತು ನಿರಂತರವಾಗಿರುವುದಕ್ಕೆ ಬಹುಮುಖ್ಯ ಅಂಶಗಳೆಂದರೆ ಧಾರ್ಮಿಕತೆ, ಸಾಮಾಜಿಕ ಮತ್ತು ಆರ್ಥಿಕತೆಗಳಾದ ಈ ಮೂರು ಅಂಶಗಳು ಕಾರಣವಾಗಿವೆ.

ಇವು ಒಂದಕ್ಕೊಂದು ಅಂತರ್ ಸಂಬಂಧವನ್ನು ಹೊಂದಿವೆ. ಈ ಅಧ್ಯಯನವನ್ನು ಬೆಳಗಾವಿ ಜಿಲ್ಲೆಯ ಚಿಂಚಲಿ(ಳಿ) ಎಂಬ ಹಳ್ಳಿಯಲ್ಲಿ ಕೈಗೊಂಡಿದ್ದು, ಇಲ್ಲಿ ದಲಿತರಲ್ಲಿ ಹೊಲೆಯರು, ಮಾದಿಗರು, ಸಮಗಾರ ಮತ್ತು ಭೋವಿ ಸಮುದಾಯದವರು ಈ ಪದ್ಧತಿಗೆ ಬಲಿಯಾಗಿದ್ದಾರೆ ಎಂಬುದನ್ನು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಈ ಅಧ್ಯಯನದಲ್ಲಿ ಕೆಲವು ದೇವದಾಸಿ ಪದ್ಧತಿಗೆ ಬಲಿಯಾದ ನಂತರ ಉದ್ಭವಿಸಬಹುದಾದ ಕೆಟ್ಟ ಪರಿಣಾಮಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಅಂದರೆ ಈ ಪದ್ಧತಿಗೆ ಬಲಿಯಾದ ನಂತರ ವೇಶ್ಯಾವೃತ್ತಿಗೆ ಪರವಾನಿಗೆ ಮತ್ತು ಸಾಮಾಜಿಕ ಮನ್ನಣೆ ಸಿಕ್ಕಿದಂತಾಗುತ್ತದೆ. ದೇವದಾಸಿಯು ಕೆಳಮಟ್ಟದ ಜೀವನವನ್ನು ನಡೆಸಿಕೊಂಡು ಹೊಸರೋಗಗಳಿಗೆ ತುತ್ತಾಗಿ ತಮ್ಮ ಮಕ್ಕಳಿಗೆ ಕಾನೂನಾತ್ಮಕವಾಗಿ ತಂದೆಯಿಲ್ಲದೆ ಜೈವಿಕವಾಗಿ ತಂದೆಯಿದ್ದರೂ ಯಾವುದೇ ಜವಾಬ್ದಾರಿಯನ್ನು ತೆಗೆದುಕೊಳ್ಳದೆ ಇಡೀ ಬದುಕು ಈ ಮಹಿಳೆಯ ಮೇಲೆ ಬೀಳುವುದರಿಂದ ನಿಕೃಷ್ಟವಾಗಿ ಜೀವನವನ್ನು ನಡೆಸುವ ಸ್ಥಿತಿಗೆ ಬರುತ್ತಾರೆ ಎಂಬುದನ್ನು ಉದಾಹರಣೆ ಗಳಾಗಿ ತಮ್ಮ ಅಧ್ಯಯನದಲ್ಲಿ ದಾಖಲಿಸಿದ್ದಾರೆ, ಅಂತಿಮವಾಗಿ ದೇವದಾಸಿ ಪದ್ಧತಿಗೆ ನೇರವಾಗಿ ಜಾತಿ ಮತ್ತು ಪುರುಷಪ್ರಾಧಾನ್ಯತೆಗಳು ಕಾರಣವಾಗಿವೆ. ಅದರಲ್ಲೂ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಬಾಗದ ಜಿಲ್ಲೆಗಳಲ್ಲಿ ಈ ಪದ್ಧತಿ ಹೆಚ್ಚು ಚಾಲ್ತಿಯಲ್ಲಿದೆ ಎಂದು ಗಂಭೀರವಾದ ವಿಶ್ಲೇಷಣೆಯನ್ನು ಮಾಡಿದ್ದಾರೆ.[೫೮] **(ಪ್ರತಿಭಾ ಬಿ. ದೇಸಾಯಿ, ೨೦೧೨)**

ದೇವದಾಸಿಯರ ಚಾರಿತ್ರಿಕ ಹಿನ್ನೆಲೆ, ಸಾಮಾಜಿಕ ಒತ್ತಡಗಳು, ಆರ್ಥಿಕ ಸ್ಥಿತಿಗತಿ ಮತ್ತು ಭವಿಷ್ಯದ ಪರಿಸ್ಥಿತಿಯನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಣೆ ಮಾಡಿರುವುದರೊಂದಿಗೆ ದೇವದಾಸಿ ಪದ್ಧತಿ ಬಹು ಪ್ರಾಚೀನವಾದುದು, ಎಲ್ಲ ಸಮಾಜದಲ್ಲಿಯೂ ಸ್ತ್ರೀಯರನ್ನು ದೇವರ ಕಾರ್ಯಕ್ಕೆ ನೇಮಿಸಿಕೊಳ್ಳುತ್ತಿದ್ದುದನ್ನು ಹಲವಾರು ಅಧ್ಯಯನಗಳಿಂದ ತಿಳಿಯಬಹುದು. ದೇವರ ದಾಸಿಯಾದ ಹೆಣ್ಣು ಲೈಂಗಿಕಕಾರ್ಯಕ್ಕೆ ಸಿಮೀತವಾಗಬೇಕೇ ಅಥವಾ ಬ್ರಹ್ಮಚಾರಿಣಿಯಾಗಿರಬೇಕೆ ಎಂಬ ವಿಚಾರದಲ್ಲಿ ಭಿನ್ನತೆಯಿದೆ. ಹಿಂದೂ, ಭೌದ್ಧ ಮತ್ತು ಜೈನ ಹಾಗೇ ಕ್ರೈಸ್ತರಲ್ಲಿಯೂ ಸಹ ಯೋಗಿನಿಯರನ್ನು ದೇವರ ಕಾರ್ಯಕ್ಕೆ ಬಿಡುತ್ತಿದ್ದರು. ಆದರೆ ಬ್ರಹ್ಮಚರ್ಯೆಗೆ ಹೆಚ್ಚು ಮಹತ್ವ ಕೊಡದೆ ಜನಪದ ಧರ್ಮಗಳಲ್ಲಿ ದೇವರ ಸೇವೆಗೆ ನೇಮಕಗೊಂಡ ಸ್ತ್ರೀಯು ಲೈಂಗಿಕವಾಗಿ ಜಾಗೃತಗೊಂಡರೆ ಮಾತ್ರ ಆಕೆ ಪವಿತ್ರಳು ಎಂಬ ಆರ್ಥದಲ್ಲಿ ಒಬ್ಬ ದೇವತೆಗೆ ದಾಸಿಯನ್ನು ನೇಮಿಸಿ ಆಕೆಯನ್ನು ದೇವರ ಪ್ರತಿರೂಪವೆಂದು ತಿಳಿದು ಈ ಪ್ರತಿರೂಪ ನಿಜವಾಗಿ ಲೈಂಗಿಕವಾಗಿ ಜಾಗೃತಳಾಗಬೇಕು. ಆಗ ತಮ್ಮ ಬೇಡಿಕೆ ಈಡೇರುತ್ತದೆಂದು ನಂಬಿದರು. ಇದರಿಂದಾಗಿ ದೇವತೆಯ ರಕ್ಷಣೆ ಬೇಡಿ ಬಂದ ಭಕ್ತರು ಹಿಂದಿನ ಕಾಲದಲ್ಲಿ ಪ್ರತಿರೂಪವಾದ ದೇವದಾಸಿಯೊಡನೆ ದೇವಸ್ಥಾನದಲ್ಲೇ ಲೈಂಗಿಕ ಸಂಬಂಧ ಹೊಂದಬೇಕಿತ್ತು. ಆಗ ಜನರಿಗೆ ಒಳಿತಾಗುತ್ತಿತ್ತು ಎಂಬ ನಂಬಿಕೆಯಿತ್ತು. ಕಾಲಾ ನಂತರ ಸಂಸ್ಕೃತಿ ಮತ್ತು ಪುರುಷಪ್ರಧಾನ ದೇವರುಗಳ ಪ್ರಭಾವದಿಂದ ದಾಸಿಯರನ್ನು ದೇವಸ್ಥಾನದಿಂದ ಹೊರಗೆ ಹಾಕಿದರು. ಹಾಗೆಯೇ ಇದು ಸೂಳೆಯರ ಸ್ಥಾನಕ್ಕೆ ಇಳಿಯಿತು(**ಕೆ.ಈ. ಗುರುಮೂರ್ತಿ,** ೧೯೯೬). ಈ ವಿಶ್ಲೇಷಣೆಯು ಪ್ರಸ್ತುತ ಅಧ್ಯಯನಕ್ಕೆ ತುಂಬಾ ಹತ್ತಿರವಿದೆ.

ದೇವದಾಸಿಯರು ಕ್ರಮೇಣ ಹೇಗೆ ಕಲಾವಿದರಾದರು, "ನಾವು ದೇವದಾಸಿಯರಲ್ಲ: ಕಲಾವಿದರು" ಎನ್ನುವ ಸ್ವಾಭಿಮಾನದ ಮಾತು ಬರೀ ಸುಮ್ಮನೆ ಬರುವುದಿಲ್ಲ ಏಕೆಂದರೆ ಅದರೊಳಗೆ ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಯಾಜಮಾನಿಕೆಯಿಂದ ನೊಂದು-ಬೆಂದು ತಮ್ಮ ಐಡೆಂಟಿಟಿಯನ್ನು ಕಲಾವಿದರನ್ನಾಗಿ ಮಾರ್ಪಡಿಸಿದ ಹಿನ್ನೆಲೆ ಮತ್ತು ಮಹಿಳೆ ಯಾವಾಗಲೂ ಎರಡನೇ ದರ್ಜೆಯ ವ್ಯಕ್ತಿಯಾಗಿ ನೋಡುವ ಸಮಾಜ ಅದರಲ್ಲಿ ವಿಶೇಷವಾಗಿ ಕಲೆಯನ್ನು ಕಲಿಸುವಲ್ಲಿನ ತಾರತಮ್ಯ ಮತ್ತು ಕಲಿತ ಮೇಲೆ ಅದರ ನಿರ್ವಹಣೆಯಲ್ಲಿನ ರಾಜಕಾರಣ ಎಲ್ಲವನ್ನು ಪ್ರತ್ಯಕ್ಷವಾಗಿ ಕಾಣಬಹುದು. ಇತ್ತ ಕಲಾವಿದರೂ ಅಲ್ಲದೇ ಅತ್ತ ಸಾಂಪ್ರದಾಯಕ ವೃತ್ತಿಯನ್ನು ನಿರ್ವಹಿಸದೇ ತ್ರಿಶಂಕು ಸ್ಥಿತಿಯಲ್ಲಿ ಬೇರೆ ನಗರಗಳಿಗೆ ಹೋಗಿ ಮೈಮಾರಿಕೊಳ್ಳುವ ದುಸ್ಥಿತಿ ಕೆಲವರಿಗೆ ಒದಗಿ ಬಂದಿರುವ ಸಂಗತಿಗಳನ್ನು ಸಹ ನೋಡಬಹುದು. ಈ ಕಲಾವಿದರು ಒಂದು ಕಡೆ ಇದ್ದು ಸಂಘವನ್ನು ಸಹ ಸರಿಯಾಗಿ ಮಾಡಿಕೊಂಡಿಲ್ಲ. ಈಗಿನ ಕಲಾವಿದರು ತಮ್ಮ ಮುಂದಿನ ಪೀಳಿಗೆಯನ್ನು ಸಹ ಸಿದ್ಧಮಾಡುತ್ತಿದ್ದಾರೆ. ಏಕೆಂದರೆ ಹರದೇಶಿ-ನಾಗೇಶಿ ಹಾಡು, ನಾಟಕ ಮತ್ತು ನೃತ್ಯ ಇವೆಲ್ಲವನ್ನು ಇವರು ಜ್ಞಾನವೆಂದೇ ತಿಳಿದಿದ್ದಾರೆ. ಈ ಜ್ಞಾನದಿಂದ ವಿದ್ಯೆ, ಹಣ ಮತ್ತು ಸಾಮಾಜಿಕ ಸ್ಥಾನಮಾನಗಳು ಬರುತ್ತವೆ ಎಂಬುದು ಇವರ ನಂಬಿಕೆ. ಗ್ರಾಮೀಣ ಪ್ರದೇಶದಲ್ಲಿ ನಡೆಯುವ ನಾಟಕಗಳಲ್ಲಿ ಹೆಣ್ಣುಪಾತ್ರಕ್ಕೆ ದೇವದಾಸಿ ಹೆಂಗಸರೇ ಬೇಕಾಗಿತ್ತು. ಆದರೆ ಇವರ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿರುವುದರಿಂದ ಇಂತಹ ನಾಟಕಗಳೇ ಕಡಿಮೆಯಾಗಿವೆ ಎನ್ನುವುದು ಕಲಾವಿದರ ವಾದ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಜಾತಿ ಶ್ರೇಣೀಕರಣಕ್ಕೆ ಅನುಗುಣವಾಗಿರುವ ಲಿಂಗ ಶ್ರೇಣೀಕರಣ ಇವುಗಳಿಗೆ ಪೂರಕವಾಗಿ ಹೊಂದಿಕೊಂಡಿರುವಂತಹ ಹಳೆಯ ಸಾಮಾಜಿಕ ಅಂದಾನು ಕರಣೆಯ ಆಚರಣೆಗಳು ಚಾಲ್ತಿಯಲ್ಲಿರುತ್ತವೆ. ಆದರೆ ಇವುಗಳ ಕೆಲಸಕ್ಕೆ ತಕ್ಕಂತೆ ಸಂಭಾವನೆ ಸರಿಯಾಗಿ ಸಿಗುವುದಿಲ್ಲ. ಆದರೂ ಸಹ ಹಳ್ಳಿಗಳ ನಾಟಕಗಳಲ್ಲಿ ತಳಸಮುದಾಯಗಳಿಂದ ಬಂದಂತಹ ಮಹಿಳೆಯರೇ ಈಗಲೂ ಸಹ ನಿರ್ವಹಿಸುತ್ತಿದ್ದಾರೆ.[೫೯] **(ಶೈಲಜ ಹಿರೇಮಠ)**

ಮೂಗೂರು ಜೇಜಮ್ಮ ಎಂಬ ದೇವದಾಸಿಯರ ಬಗ್ಗೆ ಲೇಖನದಲ್ಲಿ ದೇವದಾಸಿ ಬಗ್ಗೆ ಯಾವುದೇ ಸ್ಪಷ್ಟವಾದ ಮತ್ತು ನಿಖರವಾದ ವಿಚಾರಗಳ ಚರ್ಚೆಯಾಗಿಲ್ಲ. ಅದರೂ ಕೆಲವು ಪ್ರಮುಖ ವಿಚಾರಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳೆಂದರೆ ಇಲ್ಲಿಯವರೆಗೂ ನಾವು ದೇವದಾಸಿ ಪದ್ಧತಿ ಹೆಚ್ಚಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಮಾತ್ರ ಇತ್ತು ಎಂದು ಗ್ರಹಿಸಿದ್ದೆವು ಹಾಗೆ ದಕ್ಷಿಣ ಕರ್ನಾಟಕದಲ್ಲೂ ಅದರಲ್ಲೂ ಹಳೆಯ ಮೈಸೂರು ಪ್ರಾಂತ್ಯದಲ್ಲಿಯೂ ಸಹ ಇತ್ತು ಎಂದು ತಮ್ಮ ಲೇಖನದಲ್ಲಿ ತೋರಿಸಿದ್ದಾರೆ.[೬೦] **(ಕೆ.ಬಿ. ಮಾಧವರಾವ್)** ಮತ್ತೊಂದು ವಿಚಾರವೆಂದರೆ ಅವರ ಜಾತಿಯ ಬಗ್ಗೆ ನಿಖರವಾದ ಮಾಹಿತಿ ಇಲ್ಲ. ಆದರೆ ಇಡೀ ಲೇಖನದಲ್ಲಿ ಲಿಂಗಧಾರಣೆ, ಶಿವದೀಕ್ಷೆ ಮತ್ತು ಶಿವನ ಮಂದಿರ ಎಂಬ ಪದಗಳನ್ನು ಪದೇ ಪದೇ ಬಳಸಿದ್ದಾರೆ. ಇದನ್ನು ಗಮನಿಸಿದರೆ ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಈ ಮೇಲಿನ ಪದಗಳು ಲಿಂಗಾಯತ ಮತ್ತು ವೀರಶೈವ ಸಮುದಾಯಕ್ಕೆ ಸಂಬಂಧಪಟ್ಟಂತೆ ಕಾಣುತ್ತದೆ. ದೇವದಾಸಿಯರಲ್ಲಿ ದಲಿತ ಮತ್ತು ಹಿಂದುಳಿದವರಲ್ಲದೇ ಇತರರೂ

ಕೂಡ ಇದ್ದರು ಎಂಬುದು ತೋರುತ್ತಿದೆ. ಅಂದರೆ ದೇವದಾಸಿ ಪದ್ಧತಿಯು ಧಾರ್ಮಿಕ ನಂಬಿಕೆಯ ಅಧಾರದಲ್ಲಿ ಜಾತಿಯ ಚೌಕಟ್ಟಿನೊಳಗೆ ಹೆಣ್ಣುಮಕ್ಕಳನ್ನು ಮಾನಸಿಕ, ದೈಹಿಕ ಮತ್ತು ಲೈಂಗಿಕವಾಗಿ ಶೋಷಣೆ ಮಾಡುವ ಹುನ್ನಾರವೇ ಆಗಿದೆ ಮೇಲ್ನೋಟಕ್ಕೆ ಬಡತನ ಇದ್ದರೂ ಧಾರ್ಮಿಕ ಮತ್ತು ಜಾತಿ ರಾಜಕಾರಣದ ಬಲೆಗೆ ಸಿಲುಕಿ ತನ್ನ ಸ್ಥಾನವನ್ನು ಗಟ್ಟಿಮಾಡಿಕೊಂಡಿದೆ. ದೇವದಾಸಿ ಪದ್ಧತಿಯು ಹೆಚ್ಚು ದಲಿತರಲ್ಲಿ ದಲಿತರಾದ ಮಾದಿಗ ಸಮುದಾಯದವರು, ಈ ಪದ್ಧತಿಗೆ ಬಡತನ, ಮೂಢನಂಬಿಕೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ ಎಂದು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.[೬೧] (**ನಡೋಣಿ ವಿವೇಕಾನಂದ**) ಹಲವು ವರ್ಷಗಳಿಂದ ಔಪಚಾರಿಕವಾಗಿ ಮತ್ತು ಕಾನೂನಾತ್ಮಕವಾಗಿ ನಿಷಿದ್ಧಗೊಳಿಸಿದ್ದರೂ ಸಹ ಈ ಪದ್ಧತಿಯು ತನ್ನದೇ ಆದ ಪಳೆಯುಳಿಕೆಗಳನ್ನು ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಇನ್ನೂ ಜೀವಂತವಾಗಿ ನೋಡಬಹುದು(**ತಾರಾದೇವಿ ಪಿ.ಆರ್. ೨೦೦೬**). ಬುಡಕಟ್ಟಿನ ದೇವದಾಸಿಯರ ಬದುಕು ಗತಕಾಲದಲ್ಲಿ ಚೆನ್ನಾಗಿತ್ತು ಎಂದು ವೈಭವೀಕರಿಸಿದ್ದಾರೆ(**ಶ್ರೀಮತಿ ಟಿ. ಕೊತ್ಲಮ್ಮ, ೨೦೦೭**). ದೇವದಾಸಿ ಪದ್ಧತಿಯು ಹೆಚ್ಚು ದಲಿತರಲ್ಲಿ ದಲಿತ ಸಮುದಾಯದವರು. ಬಡತನ ಮತ್ತು ಮೂಢನಂಬಿಕೆಯೇ ಈ ಪದ್ಧತಿಗೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ(**ಸಂಜೀವ್ ಕುಮಾರ್ ನಿರ್ಮಲ್ಕಾರ್, ೨೦೦೮**).

ದೇವದಾಸಿ ಪದ್ಧತಿಯ ಮೇಲೆ ಧರ್ಮದ ಕರಾಳ ಹಸ್ತ ಮತ್ತು ಪ್ರಭಾವವನ್ನು ಬೀರಿದೆ. ದೇವದಾಸಿ ಪದ್ಧತಿಯ ಸೂಳೆಗಾರಿಕೆಗೆ ಧರ್ಮದ ಮಾನ್ಯತೆಯನ್ನು ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಗುರುತಿಸಿದ್ದಾರೆ. ಈ ಆಚರಣೆಯು ಭಾರತದ ಕೆಲವು ಭಾಗಗಳಾದ ಮಧ್ಯಭಾರತ, ಪೂರ್ವದ ಪೂರಿಯಲ್ಲಿ, ದಕ್ಷಿಣ ಭಾರತದಲ್ಲಿ ಬಹು ಮುಖ್ಯವಾಗಿ ಆಂಧ್ರಪ್ರದೇಶ, ಕರ್ನಾಟಕದಲ್ಲಿ ಗುರುತಿಸ ಬಹುದು. ಕೆಳಜಾತಿಯ ಜನರನ್ನು ಶೋಷಣೆ ಮಾಡುತ್ತಾ ಹೆಣ್ಣುಮಕ್ಕಳನ್ನು ಶೋಷಣೆ ಮಾಡಲೆಂದೇ ಧರ್ಮದ ಹೆಸರಿನಲ್ಲಿ ಈ ವ್ಯವಸ್ಥೆಯನ್ನು ರೂಪಿಸಲಾಗಿದೆ. ಈ ಪದ್ಧತಿ ದ್ರಾವಿಡ ಸಂಸ್ಕೃತಿ ಹಿನ್ನೆಲೆಯಲ್ಲಿ ಹುಟ್ಟಿದುದು, ಮಾತೃಪೂಜೆ ಜನಪ್ರಿಯತೆಯ ಹಿನ್ನೆಲೆಯಲ್ಲಿ ಈ ದೇವದಾಸಿ ಪದ್ಧತಿ ಬೆಳೆದು ಬಂದಿರಬಹುದು. ಈ ಪದ್ಧತಿ ದೇವಾಲಯಗಳಲ್ಲಿ ಹೆಚ್ಚಾಗಿ ಇದ್ದುದರಿಂದ ಇವರ ಸಂಖ್ಯೆ ದ್ವಿಗುಣಗೊಂಡಿತು. ಪೂಜಾ ಪದ್ಧತಿಯಲ್ಲಿ ಲೈಂಗಿಕ ಸಂಪರ್ಕ ಹೊಂದುವುದು ಪೂಜಾವಿಧಿಯ ಒಂದು ಭಾಗವಾಗಿದ್ದರಿಂದ ಹೆಣ್ಣು ದೇವತೆಗಳ ದೇವಾಲಯಗಳಲ್ಲಿ ಸಂಖ್ಯೆ ಹೆಚ್ಚಾಯಿತು. ಬ್ರಿಟಿಷರ ಕಾಲದಲ್ಲಿ ಪವಿತ್ರವಾದ ದೇವದಾಸಿ ಪದ್ಧತಿ ಬ್ರಿಟಿಷ್ ಹಾಗೂ ನಗರದ ಜನರ ಕಾಮಪೂರೈಕೆಯ ವ್ಯವಸ್ಥೆಯಾಯಿತು. ಉದಾ: ಪೂನಾ ಹಾಗೂ ಬೆಳಗಾವಿಗಳ ಕಂಟೋನ್ಮೆಂಟುಗಳ ಕಾಲೋನಿಗಳ ಪಕ್ಕದಲ್ಲಿ ವೇಶ್ಯರ ಕಾಲೋನಿಗಳನ್ನು ನಿರ್ಮಾಣ ಮಾಡಲಾಯಿತು. ಈ ತರಹದ ಕಾಲೋನಿಗಳು ನಿರ್ಮಾಣವಾಗಿ ದೇವದಾಸಿಯರು ನಗರದ ಸೂಳೆಯರಾದರು ಹಾಗೂ ರೆಡ್ ಲೈಟ್ ಏರಿಯಾಗಳು

ಹುಟ್ಟಿಕೊಂಡವು. ಈ ಪದ್ಧತಿಯಲ್ಲಿ ದಲಿತ ಸಮುದಾಯದ ಹೆಣ್ಣುಮಕ್ಕಳು ಹೆಚ್ಚಾಗಿ ಬಲಿಯಾಗಿದ್ದಾರೆ. ಇವರ ಸಾಮಾಜಿಕ ಆರ್ಥಿಕ ಸ್ಥಿತಿಗತಿಯು ತುಂಬಾ ಚಿಂತಾಜನಕ ವಾಗಿದೆ.[೬೨](ಎನ್. ಗಾಯತ್ರಿ; ೧೯೯೬)

ವೇಶ್ಯಾವಾಟಿಕೆಯನ್ನು ಅತ್ಯಂತ ಪ್ರಾಚೀನ ವೃತ್ತಿ ಎಂದು ಹೇಳುವಾಗಲೇ ಈ ಸಾಮಾಜಿಕ ವ್ಯವಸ್ಥೆಯ ದ್ವಿಮುಖ ಧೋರಣೆ ಬಯಲಾಗುತ್ತದೆ. ವೇಶ್ಯಾವಾಟಿಕೆ ಪ್ರಾಚೀನದಿಂದಲೂ ಮೆರೆದಿರುವ ದೌರ್ಜನ್ಯದ ಪ್ರತೀಕ. ವೇಶ್ಯಾವಾಟಿಕೆ ಎನ್ನುವಾಗಲೇ ಮಡಿವಂತಿಕೆಯ ಸಮಾಜಕ್ಕೆ ಪ್ರಾಚೀನ ವೃತ್ತಿ ಎಂಬ ಗರಿಮೆಯು ಕಣ್ಣಿಗೆ ರಾಚುತ್ತದೆ. ಧರ್ಮ, ಪರಂಪರೆಯ ಪ್ರಾಚೀನತೆಯ ಐತಿಹಾಸಿಕ ಮಜಲುಗಳ ಸಿದ್ಧಾಂತಗಳ ಬೇರುಗಳಲ್ಲಿಯ ಅಗತ್ಯ ಅನಿವಾರ್ಯತೆಗಳ ನೆಲೆಗಟ್ಟಿನಲ್ಲಿ ನೋಡ ಬೇಕಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ಪಾತಿವ್ರತ್ಯದ ಕೋಟೆ ನಿರ್ಮಿಸುತ್ತಲೇ ಗಂಡು ಸ್ವೇಚ್ಛಾಚಾರಿಯಾಗಿಯೂ ಬದುಕನ್ನು ತನ್ನ ಬಯಕೆಗಳಿಗನುಸಾರವಾಗಿ ರೂಪಿಸಿಕೊಳ್ಳುತ್ತಾ ಹೋಗಿದ್ದರ ಪ್ರತಿಫಲವೇ ವೇಶ್ಯಾವಾಟಿಕೆಯ ಉಗಮಕ್ಕೆ ಕಾರಣವಾಗಿದೆ. ಇಲ್ಲಿ ಲೈಂಗಿಕ ಕ್ರಿಯೆಯ ಸಮಪಾಲಿನ ಸರದಾರ ಪುರುಷನಾದರೂ ತಾನು ಮಾತ್ರ ಮರ್ಯದಾ ಪುರುಷನಾಗಿ ಲೈಂಗಿಕ ವೃತ್ತಿ ಮಹಿಳೆಯರನ್ನು ತುಚ್ಛವಾಗಿ ಅನೈತಿಕವಾಗಿ ಚಿತ್ರಿಸುತ್ತಾ ಬಂದಿದ್ದಾರೆ. "ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಟ್ಟು ಸೇವೆ ಸಲ್ಲಿಸುವ ಅವಿವಾಹಿತ ಮಹಿಳೆ ದೇವದಾಸಿ" ಎಂದು ಗುರುತಿಸಿದ್ದಾರೆ. ಹಾಗೆಯೇ ವೇಶ್ಯಾವೃತ್ತಿಯು ಧಾರ್ಮಿಕ ಹಿತಾಸಕ್ತಿಯ, ಕಟ್ಟುಪಾಡುಗಳ ಮೂಢನಂಬಿಕೆ, ದೈವಭಕ್ತಿ, ಪರಂಪರೆ ಹೀಗೆ ಮುಂತಾದ ಮನೋಸಾಮಾಜಿಕವಾದಂತಹ ಕಟ್ಟಲೆಗಳಿಗೆ ಮಹಿಳೆ ತನ್ನನ್ನು ತಾನು ಬೆತ್ತಲೆಯಾಗಿಸುವ ಪ್ರಕ್ರಿಯೆ. ಬೂದಿ ಮತ್ತು ಪೊಡ್ಡಿ ಎಂಬ ಇಬ್ಬರು ದೇವದಾಸಿಯರು ಕರ್ನಾಟಕದ ದೇವಾಲಯದ ಸೂಳೆಯರಲ್ಲಿ ಮೊದಲಿಗರು. ಲೈಂಗಿಕ ವೃತ್ತಿ ಮಹಿಳೆಯ ಸಮುದಾಯ ವನ್ನು ಒಗ್ಗೂಡಿಸುವ ಮತ್ತು ನಾಯಕತ್ವ ರೂಪಿಸುವ ಒಳಸುಳಿಗಳ ಸೂತ್ರಗಳನ್ನು ಕಂಡುಕೊಳ್ಳುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಬಹಳ ವೈಜ್ಞಾನಿಕವಾದ ಮತ್ತು ಮಾನವೀಯ ನೆಲೆಗಟ್ಟಿನಲ್ಲಿ ಸಮಾನತಾ ದೃಷ್ಟಿಯಿಂದ ಮಹಿಳೆಯ ಬಗ್ಗೆ ಹಿಂದೆಯೇ ರೂಪಿಸಿರುವ ಬುದ್ಧನ ಸಬಲೀಕರಣದ ಸೂತ್ರಗಳನ್ನು ಸ್ಪಷ್ಟವಾಗಿ ಆರ್ಥ ಮಾಡಿಕೊಳ್ಳಬೇಕಾಗಿದೆ. ಇಲ್ಲಿ ಲೈಂಗಿಕ ಕಾರ್ಯಕರ್ತರಿಗೂ ಮತ್ತು ದೇವದಾಸಿ ಯರಿಗೂ ನಿಕಟ ಸಂಬಂಧವಿದೆ.[೬೩](ಲೀಲಾ ಸಂಪಿಗೆ) ವೇಶ್ಯಾಜಗತ್ತಿನ ಅನಾವರಣ ಕೆಂಗುಲಾಬಿ ಎಂಬ ಕಾದಂಬರಿಯಲ್ಲಿ ಲೈಂಗಿಕ ವೃತ್ತಿ ಜಗತ್ತಿನ ತುತ್ತು ಅನ್ನಕ್ಕಾಗಿ ಈ ಕಾರ್ಯಕರ್ತೆಯರು ನಡೆಸುವ ನಿರಂತರ ಹೋರಾಟದ ಬದುಕನ್ನು ಹಾಗೂ ಅವರು ಅನಿವಾರ್ಯವಾಗಿ ಬೀದಿಗಿಳಿಯಬೇಕಾಗಿ ಬಂದ ದುರಂತವನ್ನು ಹೃದಯಕ್ಕೆ ತಟ್ಟುವಂತಹ ಸನ್ನಿವೇಶಗಳನ್ನು ಈ ಕಾದಂಬರಿಯಲ್ಲಿ ನಿರೂಪಿಸಲಾಗಿದೆ. ಉತ್ತರಕರ್ನಾಟಕದ ದೇವದಾಸಿ ಪದ್ಧತಿಯಿಂದ ಹಿಡಿದು ಬೆಂಗಳೂರಿನ ಫ್ಲೈಓವರ್ ಕೆಳಗೆ, ಬೀದಿ ಬೀದಿಯ ಬದಿಗಳಲ್ಲಿ ಮೈಮಾರಿಕೊಂಡು ಬದುಕು ಸಾಗಿಸುವ ಇವರು ಈ ಸಮಾಜದಲ್ಲಿ ಬಲಿಪಶುಗಳಾಗಿ ಅನುಭವಿಸುತ್ತಿರುವ ರೋಗರುಜಿನಗಳ ತಾಕಲಾಟಗಳನ್ನು ಅನುಭವಿ ಸುತ್ತಿದ್ದಾರೆ.[೬೪](ಹನುಂಮತ ಹಾಲಿಗೇರಿ)

ದೇವದಾಸಿಯರೆಂದರೆ ಯಾರು? ಅವರ ಹಿನ್ನೆಲೆ ಏನು? ಎಂಬ ಪ್ರಶ್ನೆಗೆ ಮೂಲತಃ ಎಲ್ಲ ಜನಾಂಗದಲ್ಲೂ ಸಹ ಈ ಪದ್ಧತಿ ಬಹು ಹಿಂದೆ ಪ್ರಚಲಿತದಲ್ಲಿತ್ತು. ಕಾಲಾನಂತರ ಕೇವಲ ಅಸ್ಪೃಶ್ಯ ದಲಿತರಿಗೆ ಮಾತ್ರ ಸೀಮಿತಗೊಂಡಿದೆ. ಅದರಲ್ಲೂ ಮಾದಿಗ ಸಮುದಾಯದವರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಮುಧೋಳದ ಸಂದರ್ಭದಲ್ಲಿ ಕೆಲವು ಭಾಗದ ದಲಿತ ಹುಡುಗಿಯರು ಹೆಚ್ಚು ಈ ಪದ್ಧತಿಗೆ ತುತ್ತಾಗಿದ್ದಾರೆ. ಪ್ರಸ್ತುತದಲ್ಲಿ ಇವರೆಲ್ಲರೂ ಸಂಪೂರ್ಣವಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿದ್ದಾರೆ ಇವರೆಲ್ಲರೂ ಪೂನಾ, ಸಾಂಗ್ಲಿ, ಮೀರಜ್ ಮುಂತಾದ ಕಡೆ ಗರವಾಲಿಗಳು ನಡೆಸುವ ವೇಶ್ಯಾವಾಟಿಕೆಯ ಗೃಹಗಳಲ್ಲಿದ್ದಾರೆ. ಈ ಎಲ್ಲಾ ಚಟುವಟಿಕೆಗಳಿಗೆ ದೇವದಾಸಿ ಪದ್ಧತಿಯು ರಹದಾರಿಯಾಗಿದೆ. ಏಕೆಂದರೆ ಸಾಮಾಜಿಕ ಮನ್ನಣೆಯಿರುವ ಈ ಪದ್ಧತಿಯ ಮೂಲಕ ಈ ವ್ಯವಸ್ಥೆಗೆ ಬಲಿಯಾಗಿದ್ದಾರೆ. ನಂತರ ಅವರ ಆರ್ಥಿಕ ಸ್ಥಿತಿಗತಿಯಲ್ಲಿ ಅತ್ಯಂತ ಶೋಚನೀಯ ಸ್ಥಿತಿಯಿದೆ. ಪ್ರಸ್ತುತದಲ್ಲಿ ಹಳ್ಳಿಯಲ್ಲಿ ಸಾಮಾಜಿಕ ಸಮೀಕ್ಷೆ ನಡೆಸುವುದರ ಮೂಲಕ ಈ ಪದ್ಧತಿಯ ತಡೆಗಟ್ಟುವ ಒಂದು ತಂತ್ರ, ಹಾಗೆಯೇ ಕಾನೂನು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸರ್ಕಾರದ ಪಾತ್ರವು ಕಡಿಮೆಯೆಂದೇ ಹೇಳಬಹುದು. ಇವರ ಮಕ್ಕಳೊಟ್ಟಿಗೆ ಸಹ ಕೆಲಸ ಮಾಡುವ ತುರ್ತು ಅಗತ್ಯವಿದೆ.[೬೫]**(ಆಂಟೋನಿ, ಅಂತ್ಯೋದಯ ಸೇವಾ ಸಂಸ್ಥೆ ಮುಧೋಳ)** ಇವರು ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಹಾಗೆಯೇ ಈ ಭಾಗವನ್ನು ಗಮನಿಸಿದರೆ ಕರ್ನಾಟಕದ ಇತರೆ ಜಿಲ್ಲೆಗಳಿಗಿಂತ ಈ ಪದ್ಧತಿ ಇನ್ನೂ ಉಚ್ರಾಯದ ಸ್ಥಿತಿಯಲ್ಲಿದೆ ಎಂದೇ ಹೇಳಬಹುದು.

ದೇವದಾಸಿಯಂತಹ ಅನಿಷ್ಟ ಪದ್ಧತಿ ಕರ್ನಾಟಕದಲ್ಲಿ ಇನ್ನೂ ಜೀವಂತ ಇರುವುದನ್ನು ಸುಪ್ರೀಂಕೋರ್ಟ್ ಇತ್ತೀಚೆಗೆ ರಾಷ್ಟ್ರೀಯ ಅವಮಾನ ಎಂದು ಟೀಕಿಸಿರುವುದು ಸರಿಯಾಗಿಯೇ ಇದೆ. ರಾಜ್ಯದಲ್ಲಿ ಕಳೆದ ಮೂರು ದಶಕಗಳಿಂದ ಈ ಪದ್ಧತಿ ನಿಷಿದ್ಧವಿದ್ದರೂ ಅದನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುವಲ್ಲಿ ರಾಜ್ಯ ಸರ್ಕಾರ ವಿಫಲವಾಗಿರುವುದು ನಿಜವಾಗಿಯೂ ನಾಚಿಕೆಗೇಡಿನ ವಿಚಾರ. ದೇವದಾಸಿ ಮಹಿಳಾ ವಿಮೋಚನಾ ಸಂಘದ ಪ್ರಕಾರ ರಾಜ್ಯದಲ್ಲಿ ೮೦ ಸಾವಿರಕ್ಕೂ ಹೆಚ್ಚು ಮಂದಿ ದೇವದಾಸಿಯರಿದ್ದಾರೆ. ಆದರೆ ರಾಜ್ಯ ಸರ್ಕಾರ ೧೯೯೩-೯೪ ಹಾಗೂ ೨೦೦೯-೧೦ರಲ್ಲಿ ೪೬,೬೬೦ ಮಹಿಳೆಯರನ್ನು ದೇವದಾಸಿಯರೆಂದು ಗುರುತಿಸಿದೆ. ಈ ಪೈಕಿ ಅರ್ಧಕ್ಕಿಂತ ಕಡಿಮೆ ಸಂಖ್ಯೆಯಷ್ಟು ರೂ. ೪೦೦ರಂತೆ ಮಾಸಿಕ ಧನ ಸಹಾಯ ನೀಡಲು ಸರ್ಕಾರ ನಿರ್ಧರಿಸಿತ್ತು. ಆದರೆ ಅದು ಸರಿಯಾಗಿ ಸಿಗುತ್ತಿಲ್ಲ ಎಂಬ ದೂರುಗಳಿವೆ. ಈ ಲೇಖನದ ಪ್ರಕಾರ ದೇವದಾಸಿಯರಿಗೆ ಸಿಗುವಂತಹ ಸರ್ಕಾರಿ ಸೌಲಭ್ಯಗಳು ಸರಿಯಾಗಿ ಸಿಗುತ್ತಿಲ್ಲ ಎಂಬುದು ಸ್ಪಷ್ಟವಾಗಿ ಕಾಣುತ್ತಿದೆ.[೬೬] **(ದೇವದಾಸಿ ಪದ್ಧತಿ: ಸಂಪಾದಕೀಯ ಲೇಖನ, ವಿಜಯ ಕರ್ನಾಟಕ, ೨೦೧೪)** ಈ ಅಧ್ಯಯನದ ವಿಚಾರವೇ ಪ್ರಸ್ತುತದಲ್ಲಿಯೂ ಸಹ ಇದೆ. ದೇವದಾಸಿ ಪದ್ಧತಿಯೆಂಬುದು ಇಡೀ ಮಾನವಹಕ್ಕುಗಳ ಉಲ್ಲಂಘನೆಯಾಗಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಡಿಯಿರುವ ದೇವದಾಸಿ ನಿರ್ಮೂಲನ ಕಾಯ್ದೆಗಳು ಕೆಲವು ಸಣ್ಣ ಪುಟ್ಟ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾಗಿದೆ. ಬಳ್ಳಾರಿಯ ಕುಡತಿನಿ

ಹಳ್ಳಿಯಲ್ಲಿ ದೇವದಾಸಿ ಪದ್ಧತಿಯ ಕ್ರೂರತೆಯನ್ನು ಗಮನದಲ್ಲಿಟ್ಟುಕೊಂಡು, ಈ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಆರ್ಥಿಕ ದುಸ್ಥಿತಿ ಮತ್ತು ಹಳೆಯ ಸಂಪ್ರದಾಯಗಳ ಅನುಕರಣೆ ಮತ್ತು ಆಚರಣೆಗಳಾಗಿವೆ. ದೇವದಾಸಿಯರ ಆರೋಗ್ಯದ ಸ್ಥಿತಿ ಚಿಂತಾಜನಕವಾಗಿದೆ. ಲೈಂಗಿಕ ಮತ್ತು ಸಂತಾನೋತ್ಪತ್ತಿಗೆ ಸಂಬಂಧಿಸಿದಂತೆ ರೋಗಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ಹಾಗೆಯೇ ಈ ರೋಗಗಳ ಕಿರಿ ವಯಸ್ಸಿನ ದೇವದಾಸಿಯರಿಗೂ ಸಹ ಅಂಟಿಕೊಂಡಿವೆ(ಅಂತರ್ಜಾಲ). ಹೀಗೆ ದೇವದಾಸಿಯರ ಬದುಕನ್ನು ಹಲವಾರು ರೀತಿಯಲ್ಲಿ ನೋಡಬಹುದು. ಈ ಅಧ್ಯಯನದಲ್ಲಿ ವಸ್ತುನಿಷ್ಠತೆಯನ್ನು ಕಾಯ್ದಿರಿಸಿಕೊಳ್ಳುವ ದೃಷ್ಟಿಯಲ್ಲಿ ವಾಸ್ತವ ವಿಚಾರಗಳನ್ನು ಮತ್ತು ಈಗಾಗಲೇ ಇರುವ ಕೆಲವು ಸಂಗತಿಗಳನ್ನು ತಾಳೆ ನೊಡುವುದರ ಮೂಲಕ ಅಧ್ಯಯನದ ಪ್ರಬಂಧಕ್ಕೆ ತೂಕ ಬಂದಂತಾಗಿದೆ.

**ಕೋಷ್ಟಕ ೨.೧. ಕರ್ನಾಟಕದಲ್ಲಿರುವ ಒಟ್ಟು ದೇವದಾಸಿಯರು ಜಿಲ್ಲಾವಾರು ಮತ್ತು ಎರಡು ಸಮೀಕ್ಷೆಯ ಪ್ರಕಾರ**

| ಕ್ರ ಸಂ | ಜಿಲ್ಲೆಗಳು | ೧೯೯೩-೯೪ರ ಸಮೀಕ್ಷೆ | ೨೦೦೮-೧೦ರ ಸಮೀಕ್ಷೆ | ಒಟ್ಟು ದೇವದಾಸಿಯರು ಜಿಲ್ಲಾವಾರು |
|---|---|---|---|---|
| ೧ | ಬೆಳಗಾವಿ | ೩೬೦೦ | ೧೧೨೪ | ೪೭೨೪ |
| ೨ | ಬಿಜಾಪುರ/ವಿಜಯಪುರ | ೧೯೬೪ | ೨೧೩೯ | ೪೧೦೩ |
| ೩ | ಬಾಗಲಕೋಟೆ | ೪೮೦೪ | ೩೦೨೩ | ೭೮೨೭ |
| ೪ | ರಾಯಚೂರು | ೨೪೯೪ | ೧೪೫೫ | ೩೯೪೯ |
| ೫ | ಕೊಪ್ಪಳ | ೪೮೮೦ | ೧೧೫೫ | ೬೦೩೫ |
| ೬ | ಧಾರವಾಡ | ೪೮೧ | ೨೮೨ | ೭೬೩ |
| ೭ | ಹಾವೇರಿ | ೬೧೭ | ೩೭೩ | ೯೯೦ |
| ೮ | ಗದಗ | ೧೪೦೭ | ೧೪೯೩ | ೨೯೦೦ |
| ೯ | ಬಳ್ಳಾರಿ | ೧೬೩೫ | ೮೦೯೮ | ೯೭೩೩ |
| ೧೦ | ಕಲಬುರಗಿ/ಗುಲ್ಬರ್ಗ (ಯಾದಗಿರಿ ಒಳಗೊಂಡಂತೆ) | ೯೯೧ | ೧೬೨೩ | ೨೬೧೪ |
| ೧೧ | ಚಿತ್ರದುರ್ಗ | | ೪೦೬ | ೪೦೬ |
| ೧೨ | ಶಿವಮೊಗ್ಗ | | ೨೪ | ೨೪ |
| ೧೩ | ದಾವಣಗೆರೆ | | ೨೫೯೨ | ೨೫೯೨ |
| | | | ಒಟ್ಟು | ೪೬,೬೬೦ |

**ಮೂಲ:** ದೇವದಾಸಿ ಪುನರ್ವಸತಿ ಕಾರ್ಯಕ್ರಮ, ಕೆ ಎಸ್ ಡಬ್ಲ್ಯು,ಡಿ ಸಿ, ಬೆಂಗಳೂರು[೬೭]

### ೨.೩.೪. ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯ ಪದ್ಧತಿ

ಕೊಪ್ಪಳ ಜಿಲ್ಲೆಯು ತುಂಬಾ ಹಿಂದುಳಿದ್ದಿದ್ದು ಮತ್ತು ಕಷ್ಟಕರವಾದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಹೊಂದಿದೆ. ಇಲ್ಲಿ ನಾಲ್ಕು ತಾಲೂಕುಗಳಿವೆ ಅವು– ಕೊಪ್ಪಳ, ಕುಷ್ಟಗಿ, ಯಲಬುರ್ಗ ಮತ್ತು ಗಂಗಾವತಿ. ೨೦೧೧ರ ಜನಗಣತಿಯ ಪ್ರಕಾರ ಇಲ್ಲಿಯ ಒಟ್ಟು ಜನಸಂಖ್ಯೆ ೧೩,೯೧,೨೯೨. ಅದರಲ್ಲಿ ೭೦೧೪೭೯ ಗಂಡಸರು ಮತ್ತು ೬೮೯೮೧೩ ಹೆಂಗಸರು ಇದ್ದಾರೆ. ಲಿಂಗಾನುಪಾತ ೧೦೦೦ಕ್ಕೆ ೯೮೩ರಷ್ಟಿದೆ. ಸಾಕ್ಷರತಾ ಪ್ರಮಾಣ ಶೇ. ೬೭.೨೮ ರಷ್ಟಿದೆ. ಈ ಭಾಗವು ಒಣಭೂಮಿಯನ್ನು ಹೊಂದಿದ್ದು, ಗಂಗಾವತಿಯ ಕೆಲವು ಪ್ರದೇಶವನ್ನು ಬಿಟ್ಟರೆ ಉಳಿದೆಲ್ಲಾ ಭೂಮಿಯು ಮಳೆಯ ನೀರನ್ನು ಆಶ್ರಯಿಸಿ ವ್ಯವಸಾಯ ಮಾಡಬೇಕು. ಇಲ್ಲಿ ಕೃಷಿ ಮತ್ತು ಅಸಂಘಟಿತ ವಲಯದ ಕಾರ್ಮಿಕರ ದುಡಿಮೆಯೇ ಇಲ್ಲಿನ ಜೀವನದ ಪ್ರಮುಖ ಆಧಾರ. ಇತ್ತೀಚೆಗೆ ಕೈಗಾರಿಕಾ ಅಭಿವೃದ್ಧಿಯು ಸಹ ಆಗುತ್ತಿದೆ. ಆದರೆ ಅದರಲ್ಲಿ ಇಲ್ಲಿನ ಸ್ಥಳೀಯರು ಕೆಲಸವನ್ನು ಗಿಟ್ಟಿಸಿಕೊಳ್ಳುವುದರಲ್ಲಿ ವಿಫಲರಾಗಿದ್ದಾರೆ. ಇಲ್ಲಿ ಗುಳೆ ಹೋಗುವವರ ಪ್ರಮಾಣವು ಸಹ ಜಾಸ್ತಿಯಿದೆ. ಇನ್ನು ಇಲ್ಲಿನ ಸಾಮಾಜಿಕ ಚಿತ್ರಣವನ್ನು ನೋಡಿದರೆ ಭಾರತೀಯ ಜಾತಿವ್ಯವಸ್ಥೆಯಿಂದ ಮಡುಗಟ್ಟಿದೆ. ಅದೇ ಮೇಲು–ಕೀಳು, ಬಡವ–ಬಲ್ಲಿದ ಮತ್ತು ಪರಿಶಿಷ್ಟ ಜಾತಿಯಲ್ಲಿ ಅಸ್ಪೃಶ್ಯರು ಮತ್ತು ಸ್ಪೃಶ್ಯರು ಇದ್ದಾರೆ. ಅದರಲ್ಲಿ ಮಾದಿಗ ಸಮುದಾಯದ ಜನಸಂಖ್ಯೆ ಅಧಿಕವಿದೆ. ಹಳ್ಳಿಗಳಲ್ಲಿ ಯಥಾ ಪ್ರಕಾರ ಜಾತಿತಾರತಮ್ಯ ಮತ್ತು ಒಡೆದು ಆಳುವ ನೀತಿ ಮತ್ತು ಸ್ಥಳೀಯ ರಾಜಕಾರಣವು ಸಹ ಮೇಲ್ಜಾತಿ ಮತ್ತು ಮೇಲ್ವರ್ಗದ ಜನರ ಕೈಯಲ್ಲಿದೆ. ಇಲ್ಲಿ ದಲಿತರ ಸಂಪತ್ತೆಂದರೆ ಅವರ ದೈಹಿಕ ಶ್ರಮವೇ ಅವರಿಗೆ ಪ್ರಮುಖ ಆಧಾರ. ಇಂತಹ ಸಂದರ್ಭದಲ್ಲಿ ದೇವದಾಸಿಯರ ಸ್ಥಿತಿಗತಿಯಂತೂ ಚಿಂತಾಜನಕವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಸಮಗ್ರ ವಿಚಾರವನ್ನು ಅಭಿವೃದ್ಧಿ ಪರಿಕಲ್ಪನೆಯ ಪ್ರಕ್ರಿಯೆಯಲ್ಲಿ ಯಾವ ಯಾವ ಸ್ಥಾನ ಮಾನಗಳನ್ನು ಪಡೆದಿದ್ದಾರೆ ಎಂಬುದನ್ನು ಅದ್ಯಯನಕ್ಕೆ ಒಳಪಡಿಸಿ ವಾಸ್ತವದ ವಿಚಾರಗಳನ್ನು ಸಮಾಜಕ್ಕೆ ಮುಖಾಮುಖಿಯಾಗಿಸುವ ಪ್ರಯತ್ನವಾಗಿದೆ.

ಕೊಪ್ಪಳ ತಾಲೂಕಿನ ಹಿರೆಸಿಂಧೋಗಿ, ಅಳವಂಡಿ, ಬೋಚನಹಳ್ಳಿ ಮತ್ತು ವದಗನಾಳ ಮುಂತಾದ ಗ್ರಾಮಗಳಲ್ಲಿ ಹಿರಿಯ ಮತ್ತು ಕಿರಿಯ ದೇವದಾಸಿಯರೊಟ್ಟಿಗೆ ಗುಂಪುಚರ್ಚೆ ಮಾಡಲಾಗಿದೆ. ಇಲ್ಲಿ ಬಹು ಮುಖ್ಯವಾಗಿ ಅವರ ಆರ್ಥಿಕ ಮತ್ತು ಪ್ರಸ್ತುತದ ಸಮಸ್ಯೆಗಳ ಬಗ್ಗೆ ಮಾತನಾಡಲಾಯಿತು. ಒಟ್ಟಾರೆ ಸಾರಾಂಶವೆಂದರೆ ಆರ್ಥಿಕ ವಿಚಾರದಲ್ಲಿ ದೇವದಾಸಿಯರ ಮನೆ ಮತ್ತು ಜಮೀನುಗಳ ಸ್ಥಿತಿಗತಿಯನ್ನು ಇಲ್ಲಿ ನೋಡಬಹುದು. ೮೭%ರಷ್ಟು ಯಾವುದೇ ತರದ ಜಮೀನು ಅಥವಾ ಭೂಮಿ ಇರುವುದಿಲ್ಲ. ೧೩%ರಷ್ಟು ಮಾತ್ರ ಭೂಮಿಯನ್ನು ಹೊಂದಿದ್ದಾರೆ. ಇವರು ಸರ್ಕಾರಿ ಸೌಲಭ್ಯದಿಂದ ಮತ್ತು ತಮ್ಮ ತಂದೆ ತಾಯಿಗಳ ಕೊಡುಗೆಯಿಂದ ಈ ಭೂಮಿಯನ್ನು ಪಡೆದಿದ್ದಾರೆ. ಮನೆಯ ವಿಚಾರದಲ್ಲಿ ೯೦%ರಷ್ಟು ದೇವದಾಸಿಯರಿಗೆ ಮನೆಗಳಿವೆ. ಆದರೆ ಉಳಿದ ೧೦%ರಷ್ಟು

ಜನಕ್ಕೆ ಯಾವುದೇ ತರದ ಸ್ವಂತ ಜಾಗ ಮತ್ತು ಮನೆಗಳು ಇಲ್ಲ, ಇವರೆಲ್ಲರೂ ಪಕ್ಕದ ಮನೆಯಲ್ಲಿ ಮತ್ತು ಸಂಬಂಧಿಕರ ಮನೆಗಳಲ್ಲಿ ವಾಸವಾಗಿದ್ದಾರೆ. ಈ ವಿಷಯದಲ್ಲಿ ಇವರ ಸ್ಥಿತಿಗತಿ ಹೇಳತೀರದು. ಆದ್ದರಿಂದ ಪ್ರತಿಯೊಬ್ಬರಿಗೂ ಯಾವುದೇ ಆಧಾರವಿಲ್ಲದೇ ದೇವದಾಸಿಯರಿಗೆ ಭೂಮಿ ಮತ್ತು ಮನೆಯ ಸೌಲಭ್ಯಗಳು ಕಡ್ಡಾಯವಾಗಿ ದೊರಕುವಂತೆ ಸರ್ಕಾರವು ಕಾರ್ಯಕ್ರಮವನ್ನು ರೂಪಿಸಬೇಕು. ಏಕೆಂದರೆ ಮಹಿಳೆಯರಿಗೆ ಪ್ರಾಥಮಿಕ ಮೂಲ ಅವಶ್ಯಕತೆಗಳಲ್ಲಿ ಒಂದಾಗಿರುವ ಭೂಮಿ ಮತ್ತು ಮನೆಗಳು ಕಡ್ಡಾಯವಾಗಿ ದೇವದಾಸಿಯರ ಹೆಸರಲ್ಲಿ ಹಂಚಬೇಕು ಎನ್ನುವ ಚರ್ಚೆಗಳು ಹೆಚ್ಚಾಗಿ ನಡೆಯಿತು. ಹಾಗೆಯೇ ಆರೋಗ್ಯದ ಮೇಲೆ ತುಂಬಾ ಪರಿಣಾಮಗಳಾಗಿವೆ. ಅನೇಕ ದೇವದಾಸಿಯರು ಸೋಂಕುಗಳಿಗೆ ತುತ್ತಾಗಿದ್ದಾರೆ. ಕೊಪ್ಪಳ ತಾಲೂಕಿನ ಕೌಲೂರು, ಬೇಳೂರು, ಘಟ್ಟಿರೆಡ್ಡಿಹಾಳ, ರಘುನಾಥನಹಳ್ಳಿ ಮುಂತಾದ ಗ್ರಾಮಗಳಲ್ಲಿ ಹಿರಿಯ ದೇವದಾಸಿಯರೊಟ್ಟಿಗೆ ಗುಂಪುಚರ್ಚೆ ಮಾಡಲಾಗಿದೆ. ಇಲ್ಲಿ ಬಹುಮುಖ್ಯವಾಗಿ ಅವರ ಆರ್ಥಿಕ ಮತ್ತು ಪ್ರಸ್ತುತದ ಸಮಸ್ಯೆಗಳ ಬಗ್ಗೆ ಮಾತನಾಡಲಾಯಿತು. ಒಟ್ಟಾರೆ ಸಾರಾಂಶವೆಂದರೆ ಆರ್ಥಿಕ ವಿಚಾರದಲ್ಲಿ ದೇವದಾಸಿಯರ ಮನೆ ಮತ್ತು ಜಮೀನುಗಳ ಸ್ಥಿತಿಗತಿಯನ್ನು ಇಲ್ಲಿ ನೋಡಬಹುದು. ೮೭%ರಷ್ಟು ಯಾವುದೇ ತರದ ಜಮೀನು ಅಥವಾ ಭೂಮಿ ಇರುವುದಿಲ್ಲ. ೧೩%ರಷ್ಟು ಮಾತ್ರ ಭೂಮಿಯನ್ನು ಹೊಂದಿದ್ದಾರೆ. ಇವರು ಸರ್ಕಾರಿ ಸೌಲಭ್ಯದಿಂದ ಮತ್ತು ತಮ್ಮ ತಂದೆ ತಾಯಿಗಳ ಕೊಡುಗೆಯಿಂದ ಈ ಭೂಮಿಯನ್ನು ಪಡೆದಿದ್ದಾರೆ. ಹಾಗೆಯೇ ಮನೆಯ ವಿಚಾರದಲ್ಲಿ ೯೦%ರಷ್ಟು ದೇವದಾಸಿಯರಿಗೆ ಮನೆಗಳಿವೆ. ಆದರೆ ಉಳಿದ ೧೦%ರಷ್ಟು ಜನಕ್ಕೆ ಯಾವುದೇ ತರದ ಸ್ವಂತ ಜಾಗ ಮತ್ತು ಮನೆಗಳು ಇರುವುದಿಲ್ಲ, ಇವರೆಲ್ಲರೂ ಪಕ್ಕದ ಮನೆಯಲ್ಲಿ ಮತ್ತು ಸಂಬಂಧಿಕರ ಮನೆಗಳಲ್ಲಿ ವಾಸವಾಗಿದ್ದಾರೆ ಈ ವಿಷಯದಲ್ಲಿ ಇವರ ಸ್ಥಿತಿಗತಿ ಹೇಳತೀರದು. ಆದ್ದರಿಂದ ಪ್ರತಿಯೊಬ್ಬರಿಗೂ ಯಾವುದೇ ಆಧಾರವಿಲ್ಲದೇ ದೇವದಾಸಿಯರಿಗೆ ಭೂಮಿ ಮತ್ತು ಮನೆಯ ಸೌಲಭ್ಯಗಳು ಕಡ್ಡಾಯವಾಗಿ ದೊರಕುವಂತೆ ಸರ್ಕಾರವು ಕಾರ್ಯಕ್ರಮವನ್ನು ರೂಪಿಸಬೇಕು. ಏಕೆಂದರೆ ಮಹಿಳೆಯರಿಗೆ ಪ್ರಾಥಮಿಕ ಮೂಲ ಅವಶ್ಯಕತೆಗಳಲ್ಲಿ ಒಂದಾಗಿರುವ ಭೂಮಿ ಮತ್ತು ಮನೆಗಳು ಕಡ್ಡಾಯವಾಗಿ ದೇವದಾಸಿಯರ ಹೆಸರಲ್ಲಿ ಹಂಚಬೇಕು ಎನ್ನುವ ಚರ್ಚೆಗಳು ಹೆಚ್ಚಾಗಿ ನಡೆಯಿತು. ಹಾಗೆಯೇ ಆರೋಗ್ಯದ ಮೇಲೆ ತುಂಬಾ ಪರಿಣಾಮಗಳಾಗಿವೆ ಅನೇಕ ದೇವದಾಸಿಯರು ಸೋಂಕುಗಳಿಗೆ ತುತ್ತಾಗಿದ್ದಾರೆ.

ಕರ್ನಾಟಕದ ಉತ್ತರ ಭಾಗದ ಬಾಗಲಕೋಟೆ, ಬೆಳಗಾಂ, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚಾಗಿ ಗುರುತಿಸಬಹುದು. ಈ ಪದ್ಧತಿಯಲ್ಲಿ ದಲಿತ ಹೆಣ್ಣುಮಕ್ಕಳಿಗೆ ದೇವರ ಹೆಸರಲ್ಲಿ ಮುತ್ತು ಕಟ್ಟುವುದು, ತಾಳಿ ಕಟ್ಟುವುದು ಮತ್ತು ಇತರೆ ಸಾಂಪ್ರದಾಯಿಕವಾಗಿ ಗುರುತಿಸಿಕೊಳ್ಳುವ ಆಚರಣೆಯಿದೆ. ಒಂದು ಸಲ ಈ ವ್ಯವಸ್ಥೆಗೆ ಬಲಿಯಾದರೆ ಆಕೆಯು ಇನ್ನಾವುದೇ ರೀತಿಯಲ್ಲಿ ಮದುವೆಯಾಗುವಂತಿಲ್ಲ. ಆದರೆ ಆಕೆಯು ಬೇರೆ ಜಾತಿಯ ಅಥವಾ ತಮ್ಮದೇ ಜಾತಿಯ ಗಂಡಸರೊಟ್ಟಿಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಂಬಂಧವನ್ನು ಇಟ್ಟುಕೊಳ್ಳಬಹುದು. ಇಲ್ಲಿ ತಮಗೆ ಹುಟ್ಟಿದ ಮಕ್ಕಳು ತಂದೆಯ ಹೆಸರನ್ನು ಹೇಳುವ ಬದಲು ತಾಯಿಯ ಹೆಸರನ್ನು ಹೇಳುತ್ತಾರೆ. ಕಾನೂನಾತ್ಮಕವಾಗಿ ಸರ್ಕಾರಿ

ದಾಖಲೆಗಳಲ್ಲಿ ತಂದೆ ಹೆಸರಿಗೆ ಬದಲಾಗಿ ತಾಯಿಯ ಹೆಸರು ಮಾತ್ರ ದಾಖಲೆಯಾಗುತ್ತದೆ. ಪ್ರಮುಖ ವಿಚಾರವೆಂದರೆ ಶೋಷಣೆಯು ಲೈಂಗಿಕ ದೌರ್ಜನ್ಯ, ಜಾತಿ ಮತ್ತು ಲಿಂಗದ ಆಧಾರದಲ್ಲಿ ಆಗುವುದನ್ನು ಗಮನಿಸಬಹುದು. ಕರ್ನಾಟಕ ಸರ್ಕಾರವು ೧೯೮೨ರಲ್ಲಿ ಈ ಪದ್ಧತಿಯ ನಿಷಿದ್ಧ ಕಾಯ್ದೆಯನ್ನು ತರಲಾಗಿದೆ. ಆದರೆ ಈ ಕಾಯ್ದೆಯಿಂದ ಹೆಚ್ಚೇನು ಪರಿಣಾಮಕಾರಿಯಾಗಿ ಕೆಲಸವಾಗಿಲ್ಲ ಎಂದು ಹೇಳಬಹುದು. ಏಕೆಂದರೆ ೧೯೮೨ರ ನಂತರ ಸಾವಿರಾರು ಮಹಿಳೆಯರು ಈ ಪದ್ಧತಿಗೆ ಬಲಿಯಾಗಿರುವುದನ್ನು ಕಾಣಬಹುದು ಹೇಗೆಂದರೆ ಈಗೀರುವ ಕೆಲವು ದೇವದಾಸಿಯರ ವಯಸ್ಸನ್ನು ನೋಡಿದರೆ ನಮಗೆ ತಿಳಿದುಬರುತ್ತದೆ. ಈ ಪದ್ಧತಿಯು ಕಾಲ ಕ್ರಮೇಣ ವೇಶ್ಯಾವಾಟಿಕೆಗೆ ದಾರಿ ಮಾಡಿಕೊಡುತ್ತದೆ. ಏಕೆಂದರೆ ಒಂದು ಹೆಂಗಸಿಗೆ ಯಾರ ಆಶ್ರಯವಿಲ್ಲಾದಾಗ ಮತ್ತು ತನ್ನ ಜೀವನ ನಡೆಸಲು ಕಷ್ಟವಾದಾಗ ಮತ್ತು ಬೇರೆ ಕೆಲಸ ಕಾರ್ಯಗಳು ಸಿಗದ್ದಿದ್ದಾಗ ಅನ್ಯಮಾರ್ಗವಿಲ್ಲದೆ ತಮ್ಮ ಜೀವನ ಮತ್ತು ಮಕ್ಕಳ ಪೋಷಣೆಗೋಸ್ಕರ ವ್ಯವಹಾರಿಕವಾಗಿ ವೇಶ್ಯಾವಾಟಿಕೆಯ ದಂಧೆಗೆ ಇಳಿಯುತ್ತಾರೆ. ಹೀಗೆ ಈ ಪದ್ಧತಿಯಲ್ಲಿ ಒಮ್ಮೆ ದಲಿತ ಮಹಿಳೆಯು ಸಿಕ್ಕಿಕೊಂಡರೆ ಮತ್ತೆ ಮೇಲೇಳಲಾಗುವುದಿಲ್ಲ. ಇಲ್ಲಿಯವರೆಗಿನ ದೇವದಾಸಿಯರ ಅಧ್ಯಯನಗಳೆಲ್ಲವೂ ಸಹ ಅನುಕಂಪದಿಂದ, ಸಹಾನುಭೂತಿಯಿಂದ ಮಾತ್ರ ನೋಡುತ್ತಿವೆ. ಇವರ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಆರೋಗ್ಯದ ವಿಚಾರದಲ್ಲಿ ಮತ್ತು ಸಾಮಾಜಿಕ ಸ್ಥಿತಿಗತಿಗಳಂತೂ ಹೇಳತೀರದು. ಕೊಪ್ಪಳ ಜಿಲ್ಲೆ ಮತ್ತು ತಾಲೂಕಿನ ಹಾಗೂ ಕೊಪ್ಪಳ ನಗರದಿಂದ ಕೇವಲ ೧೦ ಕಿ.ಮೀ. ದೂರದಲ್ಲಿರುವ ಹಿರೆಸಿಂಧೋಗಿ ಎಂಬ ಗ್ರಾಮವಿದ್ದು ಇಲ್ಲಿ ದೇವದಾಸಿ ಪದ್ಧತಿ ಇನ್ನೂ ಜೀವಂತವಾಗಿರುವುದು ಇಡೀ ಕರ್ನಾಟಕ ಮತ್ತು ಅಕ್ಕಪಕ್ಕದ ರಾಜ್ಯಗಳಿಗೂ ಗೊತ್ತಿರುವ ವಿಚಾರ. ಈ ಪದ್ಧತಿಯ ಮೂಲವನ್ನು ಕೆದಕಿದಾಗ ಇಲ್ಲಿನ ಮರುಳಸಿದ್ಧೇಶ್ವರ ಮಠಕ್ಕೂ ಮತ್ತು ದೇವದಾಸಿ ಪದ್ಧತಿಗೂ ನಿಕಟ ಸಂಬಂಧವಿರುವುದು ಕಂಡುಬಂದಿದೆ. ಈ ಮಠಕ್ಕೆ ಮಾದಿಗ ಸಮುದಾಯದವರು ಪೂಜಾರಿಗಳಾಗಿದ್ದಾರೆ ಮತ್ತು ಇವರ ಮನೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಯಾವುದೇ ಕ್ರಿಯಾವಿಧಿ ಮತ್ತು ಆರ್ಪಣೆಯಿಲ್ಲದೆ ದೇವದಾಸಿಯಾರಾಗುತ್ತಾರೆ. ಇಂದಿಗೂ ಸಹ ಯಾವ ಹೆಣ್ಣು ಈ ಪದ್ಧತಿಯಿಂದ ಹೊರಬರಲು ಸಾಧ್ಯವಿಲ್ಲ. ಇವರಿಗೆ ದೇವರ ಮತ್ತು ಊರಿನವರ ಭಯ ಏಕೆಂದರೆ ಸುಮಾರು ನೂರು ವರ್ಷಗಳಿಗಿಂತಲೂ ಹಿಂದೆ ಬೇರೆ ಊರಿಗೆ ಇಲ್ಲಿನ ಕನ್ಯೆಯನ್ನು ಮದುವೆ ಮಾಡಿಕೊಟ್ಟಿದ್ದ ಸಂದರ್ಭದಲ್ಲಿ ವರ ಮತ್ತು ವಧು ಇಬ್ಬರು ಸಹ ಸಾವನ್ನಪ್ಪಿದರು ಆ ತಕ್ಷಣವೇ ಊರಿನ ಹಿರಿಯರು ಮರುಳಸಿದ್ಧೇಶ್ವರನ ಸೇವೆಗೆ ಇರುವ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡು ವಂತಿಲ್ಲವೆಂದು ತೀರ್ಮಾನಿಸಿದರು. ಅಂದಿನಿಂದ ಈ ಊರಿನ ಹೆಣ್ಣುಮಕ್ಕಳೆಲ್ಲಾ ದೇವದಾಸಿಯಾಗಿದ್ದಾರೆ. ಆದರೆ ಗಂಡುಮಕ್ಕಳು ಮಾತ್ರ ಮದುವೆಯಾಗಿ ಸುಖ ಜೀವನ ನಡೆಸುತ್ತಿದ್ದಾರೆ. ಆದರೆ ಅವರ ಅಕ್ಕ–ತಂಗಿಯರಿಗೆ ಮಾತ್ರ ಆ ಭಾಗ್ಯವಿಲ್ಲ. ಸುಮಾರು ೧೧೫ಕ್ಕಿಂತ ಹೆಚ್ಚು ದೇವದಾಸಿಯರಿದ್ದಾರೆ ಮತ್ತು ೨೦ರಿಂದ ೩೦ ವರ್ಷದೊಳಗಿನ ಯುವತಿಯರು ಹೆಚ್ಚಾಗಿದ್ದಾರೆ. ೧೦ನೆಯ, ಪಿ.ಯು.ಸಿ ಮತ್ತು ಪದವಿ ಶಿಕ್ಷಣ ಪಡೆದಿರುವ ಹುಡುಗಿಯರು ಸಹ ದೇವದಾಸಿಯರಾಗಿದ್ದಾರೆ. ಇಲ್ಲಿಂದ ಹೆಚ್ಚು ಹುಡುಗಿಯರು ಬೇರೆ ಕಡೆ ಹೋಗಿದ್ದಾರೆ. ಅವರು ಸಹ

ತಮ್ಮನ್ನು ಪರಿವರ್ತಿಸಿಕೊಳ್ಳಲು ಪ್ರಯತ್ನಿಸಿಲ್ಲ ಮತ್ತು ಅಲ್ಲಿಯೂ ಸಹ ಇದೇ ಪದ್ಧತಿಯನ್ನು ಮುಂದುವರಿಸಿದ್ದಾರೆ. ಕೊಪ್ಪಳ ಜಿಲ್ಲೆಯ ಹಿರಿಯ ಅಧಿಕಾರಿಗಳಾದ ಪೊಲೀಸ್ ವರಿಷ್ಠಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು ನಿರಂತರ ಭೇಟಿ ನೀಡಿದರೂ ಸಹ ಯಾವುದೇ ಬದಲಾವಣೆಯಾಗಿಲ್ಲ ಮತ್ತು ದಲಿತ, ಮಹಿಳಾ ಮತ್ತು ಸ್ವಯಂ ಸೇವಾ ಸಂಸ್ಥೆಗಳೂ ಸಹ ತಮ್ಮ ಪ್ರಯತ್ನವನ್ನು ಮಾಡಿವೆ. ಒಮ್ಮೆ ಕರ್ನಾಟಕದ ಮುಖ್ಯಮಂತ್ರಿಯವರು ಸಹ ಭೇಟಿ ಮಾಡಿದ್ದರು ಮತ್ತು ೪೦೦ ರೂ. ಮಾಸಾಶನವನ್ನು ಹೆಚ್ಚಿಗೆ ಮಾಡಿದ್ದರು ಮತ್ತು ಪರಿವರ್ತನೆಯಾಗಲು ಬುದ್ಧಿ ಮಾತು ಹೇಳಿದ್ದರು. ಅದರೂ ಸಹ ಪದ್ಧತಿ ನಿಂತಿಲ್ಲ. ನಂತರ ಮುಖ್ಯವಾಹಿನಿಯಲ್ಲಿರುವ ಮಾಧ್ಯಮಗಳು ಸಹ ಈ ಪದ್ಧತಿಯ ಕುರಿತಂತೆ ಬರೆದರು. ಆದರೂ ಸಹ ಏನೂ ಬದಲಾವಣೆಯಾಗಲಿಲ್ಲ. ತದನಂತರ ಕರ್ನಾಟಕದ ಎಲ್ಲಾ ಕಡೆಯಿಂದ ಪ್ರಗತಿಪರರಾದ ಸ್ವಾಮೀಜಿಯವರೆಲ್ಲರೂ ಸಹ ಒಂದು ದಿನ ಕಾಲ್ನಡಿಗೆ ಮಾಡಿ ಮನೆ ಮನೆ ಭೇಟಿ ಮಾಡಿ ಈ ಪದ್ಧತಿಯನ್ನು ಬಿಡಬೇಕೆಂದು ಬುದ್ಧಿ ಹೇಳಿದರೂ ಕೂಡ ಯಾವುದೇ ಬದಲಾವಣೆಯಾಗಲಿಲ್ಲ. ಆದರೆ ಈ ತರದ ಪರಿವರ್ತನೆಯ ಪ್ರಯತ್ನಗಳು ಮಾತ್ರ ನಿಂತಿಲ್ಲ. ಹೀಗೆ ಕೊಪ್ಪಳ ಜಿಲ್ಲೆಯಲ್ಲಿ ಕಣ್ಣುಮುಂದೆ ಈ ಪದ್ಧತಿಯು ನಡೆಯುತ್ತಿದೆ"(ವರದಿಯ ನಿರೂಪಣೆ: **ಮೈಲಪ್ಪ ಬಿಸರಹಳ್ಳಿ ಮತ್ತು ಸೌಭಾಗ್ಯ ದೇವದಾಸಿ ವಿಮೋಚನಾ ವೇದಿಕೆಯ ಕಾರ್ಯಕರ್ತರು, ಕೊಪ್ಪಳ**). ಹೀಗೆ ಕೊಪ್ಪಳ ಜಿಲ್ಲೆಯು ೧೯೯೩-೯೪ರ ಸಮೀಕ್ಷೆಯ ಪ್ರಕಾರ ೪೮೮೦ ದೇವದಾಸಿಯರು ಮತ್ತು ಇತ್ತೀಚಿನ ೨೦೦೯-೧೦ರ ಸಮೀಕ್ಷೆಯ ಪ್ರಕಾರ ೧೧೫೫ ದೇವದಾಸಿಯರು ಹೆಚ್ಚಾಗಿರುವುದು ಕಂಡುಬಂದಿದೆ. ಒಟ್ಟು ೬೦೩೫ ದೇವದಾಸಿಯರು ಕೊಪ್ಪಳ ಜಿಲ್ಲೆಯಲ್ಲಿ ಸರ್ಕಾರಿ ಲೆಕ್ಕದಲ್ಲಿದ್ದಾರೆ. ಆದರೆ ೨೮೮೫ರಿಂದ ೨೯೨೫ ದೇವದಾಸಿಯರಿಗೆ ಮಾತ್ರ ತಿಂಗಳ ಮಾಸಾಶನ ಪಡೆಯುತ್ತಿದ್ದಾರೆ(ಇದರ ಅಧಿಕೃತ ಮಾಹಿತಿಯನ್ನು ಅಧ್ಯಾಯ ೪ರಲ್ಲಿ ವಿವರವಾಗಿ ಚರ್ಚಿಸಲಾಗಿದೆ).

## ಕೋಷ್ಟಕ ೨.೨. ಕೊಪ್ಪಳ ಜಿಲ್ಲೆಯ ಮಾಜಿ ದೇವದಾಸಿಯರ ಗ್ರಾಮಪಂಚಾಯಿತಿವಾರು ಸಂಖ್ಯೆಗಳ ಪಟ್ಟಿ

| ಕ್ರಸಂ | ಕೊಪ್ಪಳ ತಾಲೂಕು | ಗ್ರಾಮ ಪಂ. ಹೆಸರು ದೇವದಾಸಿಯರ ಸಂಖ್ಯೆ | ಕ್ರಸಂ | ಗಂಗಾವತಿ ತಾಲೂಕು | ಗ್ರಾಮ ಪಂ. ಹೆಸರು ದೇವದಾಸಿಯರ ಸಂಖ್ಯೆ |
|---|---|---|---|---|---|
| ೧ | ೨ | ೩ | ೪ | ೫ | ೬ |
| ೧ | ಅಗಳಕೇರಾ | ೩೮ | ೧ | ಗಂಗಾವತಿ ನಗರ | ೫೦೦ |
| ೨ | ಅಳವಂಡಿ | ೪೧ | ೨ | ಆನೆಗೊಂದಿ | ೪೦ |
| ೩ | ಬಹದ್ದೂರ ಬಂಡಿ | ೫೮ | ೩ | ಸಾಣಾಪುರ | ೧೦ |
| ೪ | ಹೊಸಹಳ್ಳಿ (ಹುಲಗಿ) | ೪೧ | ೪ | ಮಲ್ಲಾಪೂರ | ೨೭ |
| ೫ | ಹೊಸ ಬಂಡಿಹರ್ಲಾಪುರ | ೨೯ | ೫ | ಸಂಗಾಪೂರ | ೧೭ |
| ೬ | ಬೇಟಗೇರಿ | ೧೨೫ | ೬ | ವೆಂಕಟಗಿರಿ | ೬೩ |
| ೭ | ಬಿಸರಹಳ್ಳಿ | ೮೦ | ೭ | ಆಗೋಲಿ | ೧೩ |
| ೮ | ಬೋಚನಹಳ್ಳಿ | ೫೪ | ೮ | ಕೆಸರಟ್ಟಿ | ೨೮ |
| ೯ | ಬೂದಗುಂಪಾ | ೧೧ | ೯ | ಹಣವಾಳ | ೭೨ |
| ೧೦ | ಚಿಕ್ಕಬೊಮ್ಮನಾಳ | ೧೨ | ೧೦ | ಚಿಕ್ಕಬೆಣಕಲ್ | ೮ |
| ೧೧ | ಹಾಲವರ್ತಿ | ೩೨ | ೧೧ | ಬಸಾಪಟ್ಟಣ | ೨೩ |
| ೧೨ | ಗಿಣಿಗೇರಾ | ೬೬ | ೧೨ | ವಡ್ಡರಹಟ್ಟಿ | ೨೮ |
| ೧೩ | ಗೊಂಡಬಾಳ | ೩೮ | ೧೩ | ಮರಳಿ | ೩೯ |
| ೧೪ | ಗುಳ್ಳದಳ್ಳಿ | ೨೩ | ೧೪ | ಚಿಕ್ಕಜಂತಕಲ್ | ೨೪೬ |
| ೧೫ | ಕಲತಾವರಗೆರಾ | ೧೭ | ೧೫ | ಡಾಣಾಪೂರ | ೮೪ |
| ೧೬ | ಬೇವಿನಹಳ್ಳಿ | ೧೦ | ೧೬ | ಜಂಗಮರ ಕಲ್ಗುಡಿ | ೧೨ |
| ೧೭ | ಹಲಗೇರಿ | ೨೦ | ೧೭ | ಶ್ರೀರಾಮನಗರ | ೧೯ |
| ೧೮ | ಹಾಸಗಲ್ | ೧೦ | ೧೮ | ಹೆರೂರ | ೩೩ |
| ೧೯ | ಹಟ್ಟಿ(ಅಳವಂಡಿ) | ೩೧ | ೧೯ | ಹೊಸಕೇರಾ | ೧೯ |

| ೧ | ೨ | ೩ | ೪ | ೫ | ೬ |
|---|---|---|---|---|---|
| ೨೦ | ಹಿರೇಬಗನಾಳ | ೮೨ | ೨೦ | ಸಿದ್ದಾಪೂರ | ೨೪ |
| ೨೧ | ಹಿರೇಸಿಂದೋಗಿ | ೧೪೧ | ೨೧ | ಬರಗೂರ | ೬೬ |
| ೨೨ | ಹಿಟ್ನಾಳ | ೬೯ | ೨೨ | ಗುಂಡೂರ | ೬೧ |
| ೨೩ | ಹುಲಗಿ | ೭೨ | ೨೩ | ಬೆನ್ನೂರ | ೧೭ |
| ೨೪ | ಇಂದರಗಿ | ೧೭ | ೨೪ | ನಂದಿಹಳ್ಳಿ | ೧೧ |
| ೨೫ | ಇರಕಲಗಡಾ | ೧೭ | ೨೫ | ಮುಷ್ಟೂರ | ೨೨ |
| ೨೬ | ಹಾಸಗಲ್ | ೩ | ೨೬ | ಕನಕಗಿರಿ | ೬೩ |
| ೨೭ | ಕಾತರಕಿ-ಗುಡ್ಲಾನೂರು | ೧೦೯ | ೨೭ | ಮುಸ್ಲಾಪೂರ | ೮ |
| ೨೮ | ಕವಲೂರ | ೯೭ | ೨೮ | ಹರೇಖೇಡ | ೪ |
| ೨೯ | ಕಿನ್ನಾಳ | ೧೪ | ೨೯ | ಹುಲಿಹೈದರ್ | ೩೧ |
| ೩೦ | ಕೋಳುರು | ೧೪ | ೩೦ | ಚಿಕ್ಕಮಾದಿನಾಳ | ೬ |
| ೩೧ | ಕುಣಕೇರಿ | ೧೫ | ೩೧ | ಸುಲೇಕಲ್ | ೫೧ |
| ೩೨ | ಮುಂಡರಗಿ | ೧೮ | ೩೨ | ನವಲಿ | ೮ |
| ೩೩ | ಲೇಬಗೇರಿ | ೧೭ | ೩೩ | ಕರಡೋಣ | ೧೪ |
| ೩೪ | ಕಲಕೇರಿ | ೨೬ | ೩೪ | ಚಿಕ್ಕಡೆಂಕನಕಲ್ | ೩೭ |
| ೩೫ | ಮಾದಿನೂರ | ೨೩ | ೩೫ | ಜೀರಾಳ | ೧೨ |
| ೩೬ | ಮತ್ತೂರ | ೩೬ | ೩೬ | ಕಾರಟಗಿ | ೮೬ |
| ೩೭ | ಮುನಿರಾಬಾದ್ ಡ್ಯಾಂ | ೧೯ | ೩೭ | ಮೈಲಾಪೂರ | ೨೭ |
| ೩೮ | ಓಜನಹಳ್ಳಿ | ೫೧ | ೩೮ | ಬೂದಗುಂಪಾ | ೪೨ |
| ೩೯ | ಶಿವಪುರ | ೬೫ | ೩೯ | ಬೇವಿನಾಳ | ೧೬ |
| ೪೦ | ಕೊಪ್ಪಳ | ೭೫ | ೪೦ | ಮರ್ಲಾನಹಳ್ಳಿ | ೨೯ |
| | | | ೪೧ | ಹುಳ್ಕಿಹಾಳ | ೨೧ |
| | | | ೪೨ | ಯರಡೋಣಿ | ೫ |
| | | | ೪೩ | ಗೌರಿಪೂರ | ೧೧ |
| | | | ೪೪ | ಉಳೇನೂರು | ೫೪ |
| | ಒಟ್ಟು | ೧೭೩೩ | | ಒಟ್ಟು | ೨೦೦೯ |

| ಕ್ರಸಂ | ಯಲಬುರ್ಗಾ ತಾಲೂಕು | ಗ್ರಾಮ ಪಂ. ಹೆಸರು ದೇವದಾಸಿಯರ ಸಂಖ್ಯೆ | ಕ್ರಸಂ | ಕುಷ್ಟಗಿ ತಾಲೂಕು | ಗ್ರಾಮ ಪಂ. ಹೆಸರು ದೇವದಾಸಿಯರ ಸಂಖ್ಯೆ |
|---|---|---|---|---|---|
| ೧ | ೨ | ೩ | ೪ | ೫ | ೬ |
| ೧ | ಯಲಬುರ್ಗಾ | ೬೩ | ೧ | ಹಿರೇಮನ್ನಾಪೂರ | ೪೫ |
| ೨ | ಹಿರೇಮ್ಯಾಗೇರಿ | ೧೯ | ೨ | ಜಮಲಾಪೂರ | ೨೩ |
| ೩ | ಹಿರೇಬಿಡನಾಳ | ೧ | ೩ | ಬಿಜಕಲ್ | ೩೭ |
| ೪ | ಸಂಕನೂರ | ೧೬ | ೪ | ಮುದೇನೂರು | ೨ |
| ೫ | ಮುದೋಳ | ೪೩ | ೫ | ಕೇಸೂರು | ೧ |
| ೬ | ತುಮ್ಮರಗುದ್ದಿ | ೧೩ | ೬ | ಕೊರಡಕೇರಾ | ೧೨ |
| ೭ | ಗೆದಗೇರಿ | ೨೧ | ೭ | ತುಳುವಗೇರಾ | ೪೧ |
| ೮ | ವಜ್ರಬಂಡಿ | ೧೭ | ೮ | ದೊಟಿಹಾಳ | ೨೭ |
| ೯ | ಬಳೂಟಗಿ | ೧೮ | ೯ | ಗುಮಗೇರಾ | ೩೩ |
| ೧೦ | ಬಂಡಿ | ೨೧ | ೧೦ | ಶಿರುಗುಂಪಿ | ೩ |
| ೧೧ | ಕರಮುಡಿ | ೧೭ | ೧೧ | ಕಂದಕೂರು | ೧೫ |
| ೧೨ | ಸಂಗನಾಳ | ೪ | ೧೨ | ನಿಲೂಗಲ್ಲ | ೧೮ |
| ೧೩ | ಕಲ್ಲೂರ | ೨೧ | ೧೩ | ಹಿರೇಗೊಣ್ಣಾಗರಾ | ೯ |
| ೧೪ | ಮುರಡಿ | ೧೦ | ೧೪ | ತುಮರಿಕೊಪ್ಪ | ೬ |
| ೧೫ | ಮಂಡಲಗಿರಿ | ೨೫ | ೧೫ | ಬಾದಿಮನಾಳ | ೪ |
| ೧೬ | ಚಿಕ್ಕಮ್ಯಾಗೇರಿ | ೧೬ | ೧೬ | ಹಬಲಕಟ್ಟಿ | ೧ |
| ೧೭ | ಕುಕನೂರ | ೭೩ | ೧೭ | ಜಾ. ಗುಡೊದುರ | ೧ |
| ೧೮ | ಯರೇಹಂಚಿನಾಳ | ೨೧ | ೧೮ | ಯರಗೇರಾ | ೫ |
| ೧೯ | ಬನ್ನಿಕೊಪ್ಪ | ೩೨ | ೧೯ | ಬೇನಕನಾಳ | ೬ |

| ೧ | ೨ | ೩ | ೪ | ೫ | ೬ |
|---|---|---|---|---|---|
| ೨೦ | ಇಟಗಿ | ೧೫ | ೨೦ | ಕುಂಬಳಾವತಿ | ೨ |
| ೨೧ | ತಳಕಲ್ | ೪೪ | ೨೧ | ಹನುಮಸಾಗರ | ೧೭ |
| ೨೨ | ಬಾನಾಪೂರ | ೧೩ | ೨೨ | ಬಾದಮಿನಾಳ | ೩ |
| ೨೩ | ಬೆಣಕಲ್ | ೨೬ | ೨೩ | ಕೊಡತಗೇರಿ | ೪ |
| ೨೪ | ಮಸಬಹಂಚಿನಾಳ | ೧೮ | ೨೪ | ಮಾಲಗತ್ತಿ | ೨ |
| ೨೫ | ರಾಜೂರ | ೩೬ | ೨೫ | ಬಿಳೆಕಲ್ | ೫ |
| ೨೬ | ಬಳಗೇರ | ೨೨ | ೨೬ | ಹನುಮನಾಳ | ೧೨ |
| ೨೭ | ಶಿರೂರ | ೩೭ | ೨೭ | ಪಟ್ಟಲಚಿಂತಿ | ೪ |
| ೨೮ | ಹಿರೇವಂಕಲಕುಂಟಾ | ೩೩ | ೨೮ | ತಾವರಗೇರಾ | ೫೩ |
| ೨೯ | ಗುನ್ನಾಳ | ೧೨ | ೨೯ | ಬಳಿಗೇರಿ | ೧ |
| ೩೦ | ಬೇವೂರ | ೯ | ೩೦ | ಕಿಲಾರಹಟ್ಟಿ | ೧೧ |
| ೩೧ | ನೆಲಜೇರಿ | ೫ | ೩೧ | ಮೇಣದಾಳ | ೩೫ |
| ೩೨ | ಹಿರೇಅರಳಿಹಳ್ಳಿ | ೯ | ೩೨ | ಲಿಂಗದಹಳ್ಳಿ | ೨೫ |
| ೩೩ | ಕಲಕಬಂಡಿ | ೫ | ೩೩ | ಸಂಗನಾಳ | ೧೯ |
| ೩೪ | ತಾಳಕೇರಿ | ೧೩ | ೩೪ | ಮುದೇನೂರು | ೩ |
| ೩೫ | ಬೇದೂರ | ೧೧ | ೩೫ | ಚಳಗೇರಿ | ೨೨ |
| ೩೬ | ಮಾಟಲದಿನ್ನಿ | ೧೨ | ೩೬ | ಹೊಲಗೇರಾ | ೪ |
| ೩೭ | ಗಾಣದಾಳ | ೯ | ೩೭ | ಅಡವಿಬಾವಿ | ೧೬ |
| ೩೮ | ಹಿರೇಬಿಡನಾಳ | ೨೫ | ೩೮ | ಅಂತರಠಾಣೆ | ೧೧ |
| ೩೯ | ವಣಗೇರಿ | ೨೬ | ೩೯ | ಕಾಟಾಪೂರ | ೨೧ |
| ೪೦ | ಮಂಗಳೂರ | ೩೫ | ೪೦ | ಕ್ಯಾದಿಗುಪ್ಪ | ೨೩ |
| ೪೧ | ಕುದ್ರಿಮೋತಿ | ೫೨ | ೪೧ | ಮನ್ನೇರಾಳ | ೫ |
| | | | ೪೨ | ಬಂಡರಗಲ್ | ೮ |

| ೧ | ೨ | ೩ | ೪ | ೫ | ೬ |
|---|---|---|---|---|---|
| | | | ೪೩ | ಹಿರೇನಂದಿಹಾಳ | ೧೨ |
| | | | ೪೪ | ಹಿರೇಬನ್ನಿಗೋಳ | ೬ |
| | | | ೪೫ | ಡೊಣ್ಣಿಗುಡ್ಡ | ೬ |
| | | | ೪೬ | ಕೊರಡಕೇರಾ | ೮ |
| | | | ೪೭ | ಕುಷ್ಟಗಿ | ೪೧ |
| | | | ೪೮ | ಕ್ಯಾದಗುಂಪಾ | ೧೨ |
| | ಒಟ್ಟು | ೯೨೯ | | ಒಟ್ಟು | ೬೭೫ |

ಮೂಲ: ಗೋಪಾಲ ನಾಯ್ಕ, ದಾದ ಸಾಬ್, ಕೊಪ್ಪಳ ಜಿಲ್ಲಾ ದೇವದಾಸಿ ಪುನರ್ವಸತಿ ಯೋಜನೆ ಕಛೇರಿ

## ಮುಕ್ತಾಯ

ಹೀಗೆ ಅಭಿವೃದ್ಧಿ, ಮಹಿಳೆ ಮತ್ತು ದಲಿತ/ಅದಿವಾಸಿ ಮಹಿಳೆ ಮತ್ತು ದೇವದಾಸಿಯರ ಬದುಕನ್ನು ಹಲವಾರು ರೀತಿಯಲ್ಲಿ ನೋಡಲಾಗಿದೆ. ಈ ಅಧ್ಯಯನದಲ್ಲಿ ವಸ್ತುನಿಷ್ಠತೆಯನ್ನು ಕಾಯ್ದಿರಿಸಿಕೊಳ್ಳುವ ದೃಷ್ಟಿಯಲ್ಲಿ ವಾಸ್ತವ ವಿಚಾರಗಳನ್ನು ಮತ್ತು ಈಗಾಗಲೇ ಇರುವ ಕೆಲವು ಸಂಗತಿಗಳನ್ನು ತಾಳೆ ನೊಡುವುದರ ಮೂಲಕ ಅಧ್ಯಯನದ ಪ್ರಬಂಧಕ್ಕೆ ತೂಕ ಬಂದಂತಾಗಿದೆ.

## ಕೊನೆಟಿಪ್ಪಣಿಗಳು


೧. ಯಲ್ಲಪ್ಪ ತಾಯಪ್ಪ, ೨೦೧೬, ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು, ಅಪ್ರಕಟಿತ ಪಿಎಚ್.ಡಿ, ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಚಂದ್ರಶೇಖರ ಟಿ.ಆರ್., ೧೯೯೯, ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜು, ಬೆಂಗಳೂರು.

೩. ಹರೀಶ್ ರಾಮಸ್ವಾಮಿ, ೨೦೦೩, ಖಾಸಗಿಕರಣದಲ್ಲಿ ಮಿಸಾಲಾತಿ ಒಂದು ಚರ್ಚೆ ಸಮಾಜ ವಿಜ್ಞಾನ ಪತ್ರಿಕೆ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

4. Globalization and its impact on Human Rights –Mathews George Chunakara, Institute of human Rights,Vigil India Movement, August 1999.

೫. ಹರೀಶ್ ರಾಮಸ್ವಾಮಿ, ೨೦೦೩, ಖಾಸಗಿಕರಣದಲ್ಲಿ ಮಿಸಾಲಾತಿ ಒಂದು ಚರ್ಚೆ ಸಮಾಜ ವಿಜ್ಞಾನ ಪತ್ರಿಕೆ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬ ಚಂದ್ರಶೇಖರ ಟಿ.ಆರ್., ೧೯೯೩, ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

7. Ananda, Sudhir, 1994, Population, well being and freedom, Harvard, Centre, Boston.

8. UNDP,1990-99, Human Development Report , OUP, Newyork

9. Ibed

10. Haq,Ul-Mahbub, 1996, Reflections on Human Development ,OUP, Delhi.

11. UNDP,1990-99, Human Development Report , OUP, Newyork

12. Population Foundation of India,1998, State of India's Population, New Delhi

13. Rajshekar V.T., 2002, Hypocrisy on Caste, taken from Caste: a Nation within the Nation, Books for Change, Bangalore.

14. Vani B.P., Vinod and Vyasulu, 1997, Development and Deprivation in Karnataka: A District level study, EPW, Vol.32, No.46.

15. Karnataka Human Development Report,1999, Planning Department,Govt of Karnataka, Bangalore.

೧೬. ಕೃಷ್ಣ ಜೆ., ೨೦೦೦, "ಮಾನವ ಅಭಿವೃದ್ಧಿಯ ಪ್ರಾದೇಶಿಕ ಅಯಾಮಗಳ ಅಧ್ಯಯನ" ಪಿಎಚ್.ಡಿ. ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಚಂದ್ರಶೇಖರ ಟಿ.ಆರ್., (ಲೇ) ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಭಿವೃದ್ಧಿ, ತಲಪರಿಗೆ– ಸಂಪಾದಕತ್ವ– ಕೆ. ರಾಮಯ್ಯ.

೧೮. ವಿಕಿಪೀಡಿಯಾ, ಇಂಟರ್‌ನೆಟ್, ಗೂಗ್ಲಿ

೧೯. ಚಂದ್ರ ಪೂಜಾರಿ, ೨೦೧೪, ಅಭಿವೃದ್ಧಿ ಮತ್ತು ರಾಜಕೀಯ, ಯೋಜನಾ ಸಂಚಿಕೆ ೯, ಸಂಪುಟ ೨೯, ಏಪ್ರಿಲ್, ಕೇಂದ್ರೀಯ ಸಧನ, ಬೆಂಗಳೂರು.

೨೦. ಸುಧಾ ಸೀತಾರಾಮನ್, ೨೦೧೦, ಮಹಿಳಾ ಅಧ್ಯಯನ, ವಿಮೋಚನಾ ಪ್ರಕಾಶನ, ಬೆಂಗಳೂರು.

೨೧. ಮಲ್ಲಿಕಾ ಘಂಟಿ, ೨೦೧೦, "ಅಂಬೇಡ್ಕರ್ ಮತ್ತು ಮಹಿಳೆ" ಚಿನ್ನಸ್ವಾಮಿ ಸೊಸಲೆರವರ ಸಂಪಾದಕತ್ವದಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಸಮಕಾಲಿನ ದಲಿತರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ನೀಲಾ ಕೆ, ೨೦೦೧, ಮಹಿಳೆ–ಶೋಷಣೆಯ ನೆಲೆಗಳು. ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ.

೨೩. ಮೀನಾಕ್ಷಿ, ೨೦೧೦, ನಿರ್ಣಯ ಪ್ರಕ್ರಿಯೆಯಲ್ಲಿ ಚುನಾಯಿತ ಮಹಿಳೆಯರ ಪಾತ್ರ, ಮಂಟಪ ಮಾಲೆ-೧೭೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಛಾಯಾ ದೇಗಾಂವಕರ್, ೨೦೦೮, ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ಮಹಿಳೆ.

೨೫. ಅರ್ಚನಾ ಹಿರೇಮಠ, ೨೦೧೭, ನಗರ ಸಂಸ್ಥೆಗಳಲ್ಲಿ ಮಹಿಳಾ ಪ್ರಾತಿನಿಧ್ಯ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಸಂಗೀತ ಗಾಂವಕರ, ೨೦೦೯, ಹಾಲಕ್ಕಿ ಮಹಿಳೆಯರ ಸಾಮಾಜಿಕ, ಆರ್ಥಿಕ ಪರಿವರ್ತನೆಯ ನೆಲೆಗಳು ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಅಭಿವೃದ್ಧಿ ಅದ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ವೀಣಾ ಸಂಕನಗೌಡರ, ೧೯೯೪, ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೮. ನಳಿನಿ ವಿಶ್ವನಾಥನ್, ೧೯೯೭, ದಿ ವುಮೆನ್; ಜೆಂಡರ್ ಅಂಡ್ ಡೆವಲಪ್‌ಮೆಂಟ್, ಇಂಟರ್ನೆಟ್.

೨೯. ಕಲಾವತಿ ಬಿ.ಜಿ., ೨೦೧೦, ಮಾಧ್ಯಮ ಮತ್ತು ಮಹಿಳೆ ಮೇಲಿನ ಲೇಖನದಲ್ಲಿ ಮಹಿಳೆ ಮತ್ತು ಮಾಧ್ಯಮ. ಕ,ವಿ,ವಿ, ಹಂಪಿ.

೩೦. ಅರವಿಂದ ಚೊಕ್ಕಾಡಿ, ೨೦೦೯, ಮಹಿಳಾ ಸಬಲೀಕರಣದ ನೆಲೆಗಳು, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಯಮನೂರಪ್ಪ ಅಣ್ಣಿಗೇರಿ, ೨೦೧೦, ಮಹಿಳೆ ಮತ್ತು ಸಮೃದ್ಧಿ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಶೆಟ್ಟರ ಎಸ್.ಸಿ., ಕರ್ನಾಟಕದಲ್ಲಿನ ಮಹಿಳೆಯರ ಆರೋಗ್ಯದ ಸ್ಥಿತಿಗತಿ, ಸಮಸ್ಯೆಗಳು ಹಾಗೂ ಭವಿಷ್ಯದ ಅಗತ್ಯಗಳು, ಸಂಪಾದನೆ- ಸಮಾಜ ಸಂಸ್ಕೃತಿ, ಸಾಹಿತ್ಯ ಪ್ರಕಾಶನ, ಹುಬ್ಬಳಿ, ೨೦೦೬.

೩೩. ಚನ್ನಕ್ಕ ಪಾವಟೆ, ಶಾಸನಗಳಲ್ಲಿ ಬೃಹತ್ ಕರ್ನಾಟಕದ ಮಹಿಳೆಯರ ಆರ್ಥಿಕ, ಸಾಮಾಜಿಕ ಆಯಾಮಗಳು, ಸಂಪಾದನೆ- ಸಮಾಜ ಸಂಸ್ಕೃತಿ, ಸಾಹಿತ್ಯ ಪ್ರಕಾಶನ, ಹುಬ್ಬಳಿ, ೨೦೦೬.

೩೪. Naseem Banu Khalasi, 2008, "Muslim women in Slum" a sociological Study, Ph,D. theses, Karnataka University, Darwad.

35. Impact on right to health, Dalits and globalisation, NCDHR.

೩೬. ಅನುಸೂಯ ಕಾಂಬಳೆ, ೨೦೧೨, ದಲಿತ ಮಹಿಳೆ ಸಮಸ್ಯೆಗಳು ಸವಾಲುಗಳು, ಸಂವಾದ ಪತ್ರಿಕೆ, ಏಪ್ರಿಲ್, ಬೆಂಗಳೂರು.

೩೭. ಅರವಿಂದ ಮಾಲಗತ್ತಿ, (ಉಲ್ಲೇಖ; ನೇತ್ರಾವತಿ ಕೆ.ವಿ. ೨೦೧೦, ದಲಿತ ಮಹಿಳಾ ಸಂಕಥನ, ಪಿಎಚ್.ಡಿ. ಮಹಾಪ್ರಬಂಧ.

೩೮. ಡೊಮಿನಿಕ್,೨೦೦೮,ಕನ್ನಡ ಸಾಹಿತ್ಯ-ಸಂಸ್ಕೃತಿ ಏಕರೂಪಿತನದ ಅಪಕಲ್ಪನೆಗಳು (ಲೇ), ಭಿನ್ನತೆಯ ಜಾಡು ಹಿಡಿದು.., ಪ್ರಗತಿ ಪುಸ್ತಕ ಮಾಲೆ-೩೧, ಬೆಂಗಳೂರು.

೩೯. ನೀರಾ ದೇಸಾಯಿ ಮತ್ತು ಉಷಾ ಠಕ್ಕರ್, ೨೦೦೧ ವುಮೆನ್ ಇನ್ ಇಂಡಿಯನ್ ಸೊಸೈಟಿ, ನಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ.

೪೦. ಮನೋರಂಜನಿ, ೨೦೦೯, ದಂಧೆ ಮಾಡುವ ಮಹಿಳೆಯರ ಹೋರಾಟ, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಎವೆಲ್ಯೂಷನ್ ಆಫ್ ದಿ ದೇವದಾಸಿ ಸಿಸ್ಟಮ್, ವೀಕೀ ಜೆಂಡರ್, ಇಂಟರ್ನೆಟ್. ಈ ಅಂತರ್ಜಾಲದ ಲೇಖನ.

೪೨. ಜೋತ್ಸ್ನಾ ಕಾಮತ್, ೨೦೧೪, ದೇವದಾಸಿ: ಸರ್ವೆಂಟ್ ಆಫ್ ಗಾಡ್, ಅಂತರ್ಜಾಲ.

೪೩. ಪ್ರಸನ್ನ ಕುಮಾರ್, ೨೦೧೪, ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು; ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಬೆಳಗಾವಿ ಜಿಲ್ಲೆ ಅನುಲಕ್ಷಿಸಿ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೪೪. Shankar Jogan,1988, Determinants of persistence and continuity of Devadasi cult: A sociological study PhD. theses, Karnataka university, Darawad.

೪೫. Tarachand K C ,1987, Women in sacred prostitution: A study of Devadasi custom, Ph,D these of Anthropology , Karnataka university, Darawad.

೪೬. Zoya Zaidi,2005, Devadasis system in Indian temples, Aligarh UP.

೪೭. Maggie Black,2007, Ritual Slavery, Anti Slavery International.

೪೮. ಪಾಟೀಲ್ ಬಿ.ಆರ್., ೧೯೯೪, ದೇವದಾಸಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೯. ಜಮನ್ದಾಸ್, ದೇವದಾಸಿ ವರ್ ಡೀಗ್ರೇಡೆಡ್ ಬುದ್ಧಿಸ್ಟ್ ನನ್ಸ್, ಅಂತರ್ಜಾಲ, ಡಾ. ಅಂಬೇಡ್ಕರ್. ಕಾಮ್

೫೦. ಉತ್ತಮ ಕಾಂಬಳೆ, ೨೦೧೩, (ಮರಾಠಿ) ಕನ್ನಡಕ್ಕೆ ಡಾ. ಸಿದ್ರಾಮ ಕಾರಣಿಕ, ದೇವದಾಸಿ ಮತ್ತು ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ.

೫೧. ಶಾರದ ಲಹಂಗಿರ್, ೨೦೧೨, ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ಡೆಕ್ಕನ್ ಹೆರಾಲ್ಡ್, ಆಗಸ್ಟ್ ೪ನೇ ತಾರೀಕು, ಶನಿವಾರ.

೫೨. ಆನಂದಿ ಎಸ್., ಮೇ, ೪, ೨೦೧೩, ಮಾತಮ್ಮ, ಜೆಂಡರ್, ಕ್ಯಾಸ್ಟ್, ಅಂಡ್ ಪಾಲಿಟೆಕ್ಸ್ ಆಫ್ ಇಂಟರ್‌ಸೆಕ್ಷುವಾನಾಲಿಟಿ ಇನ್ ರೂರಲ್ ತಮಿಳುನಾಡು, ಇ.ಪಿ.ಡಬ್ಲ್ಯು, ವ್ಯಾಲ್ಯುಂ XLVIII No 18.

೫೩. Jayakumar K. and Debharati Haldar,2005, "Prostitution in India; issues and trends" website.

೫೪. ಕಬೀರ್ ಶರ್ಮ, ೨೦೧೫, ಬಾರ್ನ್ ಟು ಬಿ ಡೂಮ್ಡ್ ದಲಿತ್ ಕ್ರೈ, ದಲಿತ್ ನ್ಯೂಸ್, ಜುಲೈ.

೫೫. ರಾಜಸ್ಥಾನಕ್ಕೆ ಅಧ್ಯಯನದ ಪ್ರವಾಸ ದಲಿತ್ ಫೌಂಡೇಷನ್ ಅವರ ಕಾರ್ಯಕರ್ತರೊಂದಿಗೆ ಫೆಬ್ರವರಿ ೨೦೧೬.

೫೬. ಗುರುಮೂರ್ತಿ ಕೆ.ಜಿ., ೧೯೯೬, ಧರ್ಮ ಮತ್ತು ರಾಜಕೀಯ, ವಿಮೋಚನಾ ಪ್ರಕಾಶನ, ಅಥಣಿ.

೫೭. ಲೇಖಕರು ಮತ್ತು ಪ್ರಕಾಶಕರು, ೨೦೦೮, ಹೀಗೊಂದು ಪಯಣ, ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ(ಮಾಸ್) ಬೆಳಗಾವಿ.

೫೮. ಪ್ರತಿಭಾ ಬಿ ದೇಸಾಯಿ, ೨೦೧೨, ಕ್ಯಾಸ್ಟ್ ಅಂಡ್ ಪೇಟ್ರಿಯಾರ್ಕಿ ಅಂಡ್ ಎಕ್ಸ್‌ಪ್ಲೋಯ್‌ಟೇಷನ್ ಆಫ್ ಷೆಡ್ಯುಲ್ ವುಮೆನ್ಸ್, ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸೋಸಿಯಲ್ ಸೈನ್ಸ್ ಅಂಡ್ ಇಂಟರ್ ಡಿಸಿಪ್ಲಿನರಿ ರೀಸರ್ಚ್, ವ್ಯಾಲುಮ್–೧ ನ–೬,

೫೯. ಶೈಲಜ ಹಿರೇಮಠ, ೨೦೧೧, ಹರದೇಶಿ–ನಾಗೇಶಿ: ಕಲೆ ಮತ್ತು ಕಲಾವಿದರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೦. ಮಾಧವರಾವ್ ಕೆ.ಬಿ., ೨೦೦೯, ಕಲಾಚೇತನ, ಸಂಪಾದಿತ ಕೃತಿ; ಮೂಗೂರು ಜೇಜಮ್ಮ, ಕರ್ನಾಟಕ ಸಂಗೀತ ಮತ್ತು ನೃತ್ಯ ಆಕಾಡೆಮಿ, ಬೆಂಗಳೂರು.

೬೧. ವಿವೇಕಾನಂದ ನಡೋಣಿ, ೨೦೦೭, "ದೇವದಾಸಿ ಪುನರ್ವಸತಿ ಒಂದು ಸಮಾಜಶಾಸ್ತ್ರಿಯ ಅಧ್ಯಯನ" ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೬೨. ಗಾಯತ್ರಿ ಎನ್., ೧೯೯೬, ಮಹಿಳೆ ಬಿಡುಗಡೆಯ ಹಾದಿಯಲ್ಲಿ ಅಧ್ಯಯನದಲ್ಲಿ ನಿತ್ಯ ಸುಮಂಗಲಿಯರ ಪಾಡು ಎಂಬ ಅಧ್ಯಾಯದಲ್ಲಿ ದೇವದಾಸಿ ಎಂಬ ಉಪ ಅಧ್ಯಾಯದಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೬೩. ಲೀಲಾ ಸಂಪಿಗೆ, ೨೦೦೮, ಜನಪದ ಮತ್ತು ಅಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪. ಹನುಂಮತ ಹಾಲಿಗೇರಿ, ೨೦೧೧, ಕೆಂಗುಲಾಬಿ, ಕಾದಂಬರಿ, ವೇಶ್ಯಾ ಜಗತ್ತಿನ ಅನಾವರಣ, ಚೇತನ್ ಪುಸ್ತಕ, ಬೆಂಗಳೂರು.

೬೫. ಆಂಟೋನಿ, ೨೦೧೨ ಅಂತ್ಯೋದಯ ಸೇವಾ ಸಂಸ್ಥೆ, ಮುಧೋಳ.

೬೬. ದೇವದಾಸಿ ಪದ್ಧತಿ ಇನ್ನೂ ಜೀವಂತ, ವಿಜಯ ಕರ್ನಾಟಕ, ಸುದ್ದಿಲೋಕ, ಅಕ್ಟೋಬರ್ ೨೦೧೨ ವಿಶೇಷ ಲೇಖನ.

೬೭. ದೇವದಾಸಿ ಪುನರ್ವಸತಿ ಕಾರ್ಯಕ್ರಮ, ಶ್ರೀನಿವಾಸ ಗೌಡ, ಪ್ರಥಮ ದರ್ಜೆ ಗುಮಾಸ್ತರು, ೨೦೧೭, ಕೆ.ಎಸ್.ಡಬ್ಲ್ಯು.ಡಿ.ಸಿ, ಬೆಂಗಳೂರು

೬೮. ಮೈಲಪ್ಪ ಬಿಸರಹಳ್ಳಿ ಮತ್ತು ಸೌಭಾಗ್ಯ, ೨೦೧೫, ದೇವದಾಸಿ ವಿಮೋಚನಾ ವೇದಿಕೆಯ ಕಾರ್ಯಕರ್ತರು, ಕೊಪ್ಪಳ.

೬೯. ಗೋಪಾಲ ನಾಯ್ಕ, ದಾದ ಸಾಬ್, ಕೊಪ್ಪಳ ಜಿಲ್ಲಾ ದೇವದಾಸಿ ಪುನರ್ವಸತಿ ಯೋಜನೆ ಕಛೇರಿ.

ಅಧ್ಯಾಯ ೩

# ಅಧ್ಯಯನ ಕ್ಷೇತ್ರ: ಕೊಪ್ಪಳ ಜಿಲ್ಲೆಯ ಪರಿಚಯ

೩.೧. ಪೀಠಿಕೆ

೩.೨. ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

೩.೩. ಭೌಗೋಳಿಕ ವಿಸ್ತೀರ್ಣತೆ, ವಾತಾವರಣ ಮತ್ತು ಜನಸಂಖ್ಯೆಯ ವಿವರ

೩.೪. ಆರ್ಥಿಕ-ಸಾಮಾಜಿಕ ಮತ್ತು ಆಡಳಿತಾತ್ಮಕ ಸ್ಥಿತಿ

೩.೫. ಕೊಪ್ಪಳ ಜಿಲ್ಲೆಯ ತಾಲೂಕುಗಳ ಸಂಕ್ಷಿಪ್ತ ವಿವರಣೆ

## ಅಧ್ಯಾಯ ಮೂರು

# ಅಧ್ಯಯನದ ಕ್ಷೇತ್ರ: ಕೊಪ್ಪಳ ಜಿಲ್ಲೆಯ ಪರಿಚಯ

### ೩.೧. ಪೀಠಿಕೆ

ಪ್ರಸ್ತುತ ಅಧ್ಯಯನದ ಪ್ರಮುಖ ಅಕರವಾಗಿರುವ ಕ್ಷೇತ್ರದ ಸಮಗ್ರ ಮಾಹಿತಿಯನ್ನು ಸಂಕ್ಷಿಪ್ತವಾಗಿ ಮಂಡಿಸುವ ಸಲುವಾಗಿ ಈ ಅಧ್ಯಯನದಲ್ಲಿ ಕೊಪ್ಪಳ ಜಿಲ್ಲೆಯ ಕೆಲವು ಪ್ರಮುಖ ವಿಚಾರಗಳನ್ನು ಚರ್ಚಿಸಲಾಗಿದೆ. ಕೊಪ್ಪಳವು ಹೈದರಾಬಾದ್ ಕರ್ನಾಟಕದ ಭಾಗವಾಗಿದೆ. ಭಾರತ ದೇಶವು ೧೯೪೭ರಲ್ಲಿ ಸ್ವಾತಂತ್ರ್ಯ ಹೊಂದಿದರೂ ಕೊಪ್ಪಳ ಅಥವಾ ಹೈದರಾಬಾದ್ ಕರ್ನಾಟಕ ಇನ್ನೂ ನಿಜಾಮನ ಅಧೀನದಲ್ಲಿತ್ತು. ೧೮ ಸೆಪ್ಟಂಬರ್ ೧೯೪೮ರಲ್ಲಿ ಈ ಭಾಗವು ಸ್ವಾತಂತ್ರ್ಯವನ್ನು ಹೊಂದಿತು. ಕೊಪ್ಪಳವು ಜಿಲ್ಲೆಯಾಗುವುದಕ್ಕಿಂತ ಪೂರ್ವದಲ್ಲಿ ರಾಯಚೂರು ಜಿಲ್ಲೆಯ ತಾಲೂಕಾಗಿತ್ತು. ಜೆ.ಎಚ್ ಪಟೇಲ್ ಸರ್ಕಾರವು ಕೊಪ್ಪಳವನ್ನು ೧೯೯೭ರಲ್ಲಿ ಜಿಲ್ಲಾ ಕೇಂದ್ರವೆಂದು ಘೋಷಿಸಿತು. ೧.೪.೧೯೯೮ರಂದು ಕೊಪ್ಪಳವು ಕರ್ನಾಟಕದ ಒಂದು ಸ್ವತಂತ್ರ ಹೊಸ ಜಿಲ್ಲೆಯಾಗಿ ರಚನೆಗೊಂಡಿತು. ಯಾವುದೇ ಅಧ್ಯಯನದಲ್ಲಿ ಕ್ಷೇತ್ರವು ಅಧ್ಯಯನದ ವಸ್ತುವಿಗೆ ಕೆಲವು ಹಿನ್ನೆಲೆ, ಸದ್ಯದ ಸ್ಥಿತಿಗತಿ, ಅಲ್ಲಿನ ಸಮಾಜೋ-ಆರ್ಥಿಕ ಮತ್ತು ಅಂಶಗಳನ್ನು ಅರ್ಥ ಮಾಡಿಕೊಳ್ಳಲು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ಅದರಲ್ಲೂ ವಿಶೇಷವಾಗಿ ಕೊಪ್ಪಳ ಜಿಲ್ಲೆಯ ಚಾರಿತ್ರಿಕ, ಭೌಗೋಳಿಕ ಹಿನ್ನೆಲೆ, ಜನಸಂಖ್ಯೆ ಮಾಹಿತಿ, ಸಮಾಜೋ-ಆರ್ಥಿಕ ಸ್ಥಿತಿಗತಿ, ಶಿಕ್ಷಣ, ಆರೋಗ್ಯ, ಮುಂತಾದ ವಿಚಾರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಮತ್ತು ಅಧ್ಯಯನದ ಮಿತಿಯನ್ನು ಗಮನದಲ್ಲಿಟ್ಟುಕೊಂಡು ಬಳಸಲಾಗಿದೆ.

### ೩.೨. ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಕೊಪ್ಪಳವು ಪುರಾಣ ಪ್ರಸಿದ್ಧ ಸ್ಥಳವೂ ಹೌದು ಮತ್ತು ಇತಿಹಾಸ ಪ್ರಸಿದ್ಧ ಸ್ಥಳವೂ ಹೌದು. ಕೊಪ್ಪಳವು ಪುರಾಣ ಪ್ರಸಿದ್ಧ ಸ್ಥಳವೆನ್ನುವುದಕ್ಕಿಂತ ಅದು ಇತಿಹಾಸ ಪ್ರಸಿದ್ಧ ಸ್ಥಳವೆಂದು ಹೇಳುವುದೇ ಹೆಚ್ಚು ಸೂಕ್ತ. ಈ ಪ್ರದೇಶದ ಚರಿತ್ರೆಯನ್ನು ಕ್ರಿಸ್ತ ಪೂರ್ವ ಕಾಲಕ್ಕೆ ಒಯ್ಯಬಹುದಾಗಿದೆ, ಭಾರತದ

ಪ್ರಸಿದ್ಧ ಚಕ್ರವರ್ತಿ ಅಶೋಕನಿಗೆ (ಕ್ರಿ.ಪೂ. ೨೭೩-೨೩೬) ಸಂಬಂಧಿಸಿದ ಎರಡು ಅಮೂಲ್ಯ ಶಾಸನಗಳು ಕೊಪ್ಪಳದಲ್ಲಿ ಸಿಕ್ಕಿವೆ. ಈ ಶಾಸನಗಳು ಐತಿಹಾಸಿಕವಾಗಿ ತುಂಬಾ ಮಹತ್ವ ಪಡೆದಿವೆ. ಆ ಕಾಲದಲ್ಲಿ ಕೊಪ್ಪಳವು ಪಡೆದಿದ್ದ ಪ್ರಸಿದ್ಧಿ ಇದರಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಪ್ರಥಮ ಚಕ್ರವರ್ತಿ ಅಶೋಕ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು ಮುಂತಾದ ಅರಸುಮನೆತನ-ಚಕ್ರಾಧಿಪತ್ಯಗಳೊಂದಿಗೆ ಈ ಪ್ರದೇಶವು ಒಂದಲ್ಲ ಒಂದು ಬಗೆಯ ಸಂಬಂಧ-ಸಂಪರ್ಕ ಪಡೆದಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಅನೇಕ ಅರಸುಮನೆತನಗಳಿಗೆ, ಚಕ್ರಾಧಿಪತಿಗಳಿಗೆ ಸೇರಿದ ಶಾಸನಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ, ತಾಮ್ರ ಪತ್ರಗಳಲ್ಲಿ ಕೊಪ್ಪಳದ ಉಲ್ಲೇಖ ಸಿಗುತ್ತದೆ.[೧]**(ಚಂದ್ರಶೇಖರ ಟಿ.ಆರ್, ೧೯೯೯)** 'ಕೊಪಣ ತೀರ್ಥ', 'ಆದಿತೀರ್ಥ', 'ಮಹಾತೀರ್ಥ' 'ಕೊಪಣಾಚಲ' ಮುಂತಾದ ಹೆಸರುಗಳಿಂದ ಕೊಪ್ಪಳವನ್ನು ಕರೆದಿರುವುದು ಶಿಲಾಶಾಸನಗಳಿಂದ ಹಾಗೂ ಸಾಹಿತ್ಯ-ಶಾಸ್ತ್ರ ಕೃತಿಗಳಿಂದ ತಿಳಿದುಬರುತ್ತದೆ. ಪ್ರಾಚೀನ ಕಾಲದಿಂದಲೂ ಕೊಪ್ಪಳವು ಜೈನರ ಪ್ರಸಿದ್ಧ ಕ್ಷೇತ್ರವಾಗಿದ್ದಂತೆ ಕಂಡುಬರುತ್ತದೆ. ಕನ್ನಡದ ಪ್ರಮುಖ ಕವಿ ರನ್ನ ತನ್ನ ಕೃತಿಯಲ್ಲಿ ತನ್ನ ಆಶ್ರಯದಾತೆಯಾಗಿದ್ದ "ಅತ್ತಿಮಬ್ಬೆ"ಯನ್ನು 'ನೆಗಳ್ದ ಕೊಪಣಾಚಲದಂತೆ ಪವಿತ್ರ' ಎಂದು ಬಣ್ಣಿಸಿದ್ದಾನೆ. ಅದೊಂದು ಜೈನರ ಯಾತ್ರಾ ಸ್ಥಳವೂ ಆಗಿದ್ದಿರಬೇಕು. ಕುಮಾರ ಸೇನನೆಂಬ ಮುನಿ ಮುಳುಗುಂದದಲ್ಲಿ ತಪಸ್ಸನ್ನು ಆಚರಿಸಲು ತೃಪ್ತಿ ಕಾಣದೆ ಕೊಪಣಾಚಲಕ್ಕೆ ಬಂದು ಮುಕ್ತಿ ಪಡೆದನೆಂದು ಚಾವುಂಡರಾಯ ಪುರಾಣ ಹೇಳಿದೆ. ಇಲ್ಲಿ ೭೭೨ ಜಿನಾಲಯಗಳಿದ್ದವೆಂದು ಒಂದು ಶಾಸನ ವರ್ಣಿಸಿದೆ. ಇದೊಂದು ಜೈನ ಕೇಂದ್ರವಾಗಿತ್ತು ಎಂಬುದು ೧೩ನೆಯ ಶತಮಾನಕ್ಕೆ ಸೇರಿದ ಹರಿಹರ, ರಾಘವಾಂಕ, ಅವರ ಕೃತಿಗಳಲ್ಲಿ ತಿಳಿದು ಬರುತ್ತದೆ. ಕನ್ನಡದ ಪ್ರಥಮ ಶಾಸ್ತ್ರಗ್ರಂಥವೆಂಬ ಕೀರ್ತಿಗೆ ಪಾತ್ರವಾಗಿರುವ 'ಕವಿರಾಜಮಾರ್ಗ'ದಲ್ಲಿ ಇದನ್ನು "ಮಹಾ ಕೊಪಣನಗರ" ಎಂದು ಕರೆಯಲಾಗಿದೆ. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಈ ಪ್ರದೇಶವು ಬಿಜಾಪುರದ ಆದಿಲ್ ಶಾನ(ಕ್ರಿ.ಶ. ೧೫೫೭-೧೫೮೦) ಆಳ್ವಿಕೆಗೆ ಒಳಪಟ್ಟಿತ್ತು. ಅಂದು ಈ ಸ್ಥಳವನ್ನು 'ಮುಜಾಫರ್ ನಗರ' ಎಂದು ಕರೆಯುತ್ತಿದ್ದರು ಎನ್ನಲಾಗಿದೆ. ಶಿವಾಜಿ, ಹೈದರಾಲಿ, ಟಿಪ್ಪು ಅವರ ಆಳ್ವಿಕೆಯ ಭಾಗವಾಗಿಯೂ ಇದ್ದುದನ್ನು ಚರಿತ್ರೆ ತಿಳಿಸುತ್ತದೆ. ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಇದು ಬ್ರಿಟಿಷರ ವಶವಾದಂತೆ ಕಂಡುಬರುತ್ತದೆ. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ವೀರಪ್ಪನೆಂಬ ಜಮೀನ್ದಾರ ಮತ್ತು ಮಂಡರಗಿ ಭೀಮರಾಯ ಎಂಬುವವರು ಬ್ರಿಟಿಷರ ವಿರುದ್ಧ ಬಂಡೆದ್ದು ಹೋರಾಟ ಮಾಡಿ ಹುತಾತ್ಮರಾದದ್ದು ಕೊಪ್ಪಳದ ಕೋಟೆಯಲ್ಲಿ ಎನ್ನಲಾಗಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಕೊಪ್ಪಳ ಜಿಲ್ಲೆಯ ಜನರು ಸ್ವಾಬಿಮಾನದಿಂದ ಹೋರಾಡಿದ್ದಾರೆ ಮತ್ತು ಗಾಂಧಿಯ ಅಂಹಿಸಾ ಚಳುವಳಿಗೆ ಕರೆಕೊಟ್ಟಿದ್ದಕ್ಕೆ ಹೆಚ್ಚಿನ ಜನರು ಭಾಗವಹಿಸಿದರು ಮತ್ತು ಕೊಪ್ಪಳವು ಚರ್ಖಾ ಮತ್ತು ಖಾದಿ ಪ್ರಚಾರದ ಕೇಂದ್ರವಾಗಿತ್ತು. ಕ್ರಿ.ಶ. ೧೮೬೧ರಿಂದ ೧೯೪೮ರವರೆಗೆ ಇದು ಹೈದರಾಬಾದ್ ನವಾಬನ ವಶದಲ್ಲಿತ್ತು. ಪ್ರಸ್ತುತದ ಅಧ್ಯಯನವು ಮುಖ್ಯವಾಗಿ ಆಡಳಿತ ಮತ್ತು ಪ್ರಾದೇಶಿಕ

ಚೌಕಟ್ಟಿನಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಕರ್ನಾಟಕದಲ್ಲಿ ಕೊಪ್ಪಳವು ಒಂದು ಜಿಲ್ಲೆಯಾಗಿ ಮತ್ತು ಪ್ರಸ್ತುತದ ಅಧ್ಯಯನಕ್ಕೆ ಸಂಶೋಧನೆಯ ಕ್ಷೇತ್ರಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ಕೊಪ್ಪಳವು ಮೂಲತಃ ಪ್ರಾಚೀನ ನೆಲೆ, ಆದಿಮಾನವನ ಕಾಲದಿಂದಲೂ ವಸತಿಯ ತಾಣವಾಗಿತ್ತು. ಹಾಗೇ ಕೊಪ್ಪಳ ಜಿಲ್ಲೆಗೆ ಸೇರಿದ ಅನೇಕ ಪ್ರದೇಶಗಳು ಪ್ರಾಚೀನ ನೆಲೆಗಳಾಗಿವೆ. ಕೊಪ್ಪಳವು ಹೊಸ ಜಿಲ್ಲೆಯಾಗಿದ್ದರೂ ಸ್ವಾತಂತ್ರ್ಯ ಪೂರ್ವದಲ್ಲಿ ಇದು ಜಿಲ್ಲಾ ಕೇಂದ್ರವಾಗಿ ಆಡಳಿತ ನಡೆಸಿತ್ತು. ಕೊಪ್ಪಳವು ಭೌಕೋಳಿಕವಾಗಿ ಉತ್ತರ ಅಕ್ಷಾಂಶ ೧೫-೨೧ ಮತ್ತು ಪೂರ್ವ ರೇಖಾಂಶ೭೬-೧೦೦ ರಷ್ಟು ವಿಸ್ತಾರಗೊಂಡಿದೆ.[೨](ಸುರೇಶ ಕೆ.ಎಂ. ಮತ್ತು ಇತರರು, ೨೦೦೧)

೨೦ನೆಯ ಶತಮಾನದ ಪ್ರಾರಂಭದಲ್ಲಿ ಈ ಪ್ರದೇಶದಲ್ಲಿ ನಾಲ್ಕು ಜಿಲ್ಲೆಗಳಿದ್ದವು. ಕೊಪ್ಪಳ ಮತ್ತು ಯಲಬುರ್ಗಾ- ಇವು ಜಹಗೀರ್ ಜಿಲ್ಲೆಗಳೆಂದು ಪ್ರತ್ಯೇಕ ಸ್ಥಾನಮಾನ ಪಡೆದಿದ್ದವು. ರಾಯಚೂರು ಮತ್ತು ಲಿಂಗಸೂಗೂರು- ಇವು ಎರಡು ಆಡಳಿತಾತ್ಮಕ ಜಿಲ್ಲೆಗಳಾಗಿದ್ದವು, ರಾಯಚೂರು, ಯಾದಗಿರಿ, ಎರ್ಗೇರಾ, ದೇವದುರ್ಗ, ಮಾನ್ವಿ, ಆಲಂಪುರ, ಮತ್ತು ಗದ್ವಾಲ್ ತಾಲೂಕುಗಳು ರಾಯಚೂರು ಜಿಲ್ಲೆಯ ಭಾಗವಾಗಿದ್ದರೆ, ಲಿಂಗಸೂಗೂರು, ಕುಷ್ಟಗಿ, ಗಂಗಾವತಿ, ಸಿಂಧನೂರು, ಶಹಪುರ ಮತ್ತು ಶೋರಾಪುರ ತಾಲೂಕುಗಳು ಲಿಂಗಸೂಗೂರು ಜಿಲ್ಲೆಯ ಭಾಗಗಳಾಗಿದ್ದವು, ೧೯೦೫ರಲ್ಲಿ ಲಿಂಗಸೂಗೂರು ಜಿಲ್ಲೆಯನ್ನು ರದ್ದುಗೊಳಿಸಿ, ಆ ಜಿಲ್ಲೆಯ ಶಹಾಪುರ, ಶೋರಾಪುರ ಮತ್ತು ಯಾದಗಿರಿ ತಾಲೂಕುಗಳನ್ನು ಗುಲಬರ್ಗಾ ಜಿಲ್ಲೆಗೆ ಮತ್ತು ಲಿಂಗಸೂಗೂರು, ಕುಷ್ಟಗಿ, ಗಂಗಾವತಿ ಮತ್ತು ಸಿಂಧನೂರು ತಾಲೂಕುಗಳನ್ನು ರಾಯಚೂರು ಜಿಲ್ಲೆಗಳಿಗೆ ವರ್ಗಾಯಿಸಲಾಯಿತು. ಎರ್ಗೇರಾ ತಾಲೂಕಿನ ಎಲ್ಲಾ ಗ್ರಾಮಗಳನ್ನು ರಾಯಚೂರು, ಮಾನ್ವಿ ಮತ್ತು ದೇವದುರ್ಗ ತಾಲೂಕುಗಳಿಗೆ ಹಂಚಲಾಯಿತು. ಈ ಎಲ್ಲಾ ಪುನರ್ ಸಂಘಟನೆಯ ನಂತರ ರಾಯಚೂರು ಜಿಲ್ಲೆಯಲ್ಲಿ ೯ ತಾಲೂಕುಗಳು ಉಳಿದುಕೊಂಡವು. ಕೊಪ್ಪಳ ಮತ್ತು ಯಲಬುರ್ಗಾಗಳು ಮಾತ್ರ ಪ್ರತ್ಯೇಕ ಜಹಗೀರ್ ಜಿಲ್ಲೆಗಳಾಗಿ ಮುಂದುವರಿದಿದ್ದವು. ೯ ತಾಲೂಕುಗಳನ್ನು ಒಳಗೊಂಡ ರಾಯಚೂರು ಮತ್ತು ಪ್ರತ್ಯೇಕ ಜಹಗೀರ್ ಜಿಲ್ಲೆಗಳಾಗಿದ್ದ ಕೊಪ್ಪಳ ಮತ್ತು ಯಲಬುರ್ಗಾಗಳು ೧೯೪೮ ಸೆಪ್ಟಂಬರ್ ೧೮ರವರೆಗೆ ಹೈದರಾಬಾದ್ ನವಾಬನ ಆಳ್ವಿಕೆಯಲ್ಲಿದ್ದವು. ಹೈದರಾಬಾರ್ ನವಾಬನು ೧೯೪೮ ಸೆಪ್ಟಂಬರ್ ೧೮ರಂದು ಭಾರತ ಸರ್ಕಾರಕ್ಕೆ ಶರಣಾದ ಮೇಲೆ ಈ ಜಿಲ್ಲೆಗಳು ಭಾರತದ ಗಣರಾಜ್ಯದಲ್ಲಿ ವಿಲೀನಗೊಂಡವು. ಅಂದು ಅಖಂಡ ರಾಯಚೂರು ಜಿಲ್ಲೆಯ ಭೌಗೋಳಿಕ ಚದರಳತೆಯು ೧೪.೦೧೭ ಚ.ಕಿ.ಮೀ. ಆಗಿತ್ತು. ಜನಸಂಖ್ಯೆ ೨೩.೧೦ ಲಕ್ಷವಿತ್ತು (೧೯೯೧) ಈ ಬಗೆಯ ಬೃಹತ್ ಗಾತ್ರ ಹಾಗೂ ಜನಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ಹಾಗೂ ೧೯೯೧ರಿಂದಲೂ ಜಿಲ್ಲೆಯ ರಚನೆಗಾಗಿ ನಡೆಯುತ್ತಿದ್ದ ಹೋರಾಟದ ಪರಿಣಾಮವಾಗಿ ೧೯೯೭ ಆಗಸ್ಟ್ ೧೫ರಂದು ರಾಯಚೂರು ಜಿಲ್ಲೆಯನ್ನು ವಿಭಜಿಸಿ ಗಂಗಾವತಿ, ಕುಷ್ಟಗಿ, ಯಲಬುರ್ಗಾ ಮತ್ತು ಕೊಪ್ಪಳ ತಾಲೂಕುಗಳನ್ನು ಒಳಗೊಂಡ ಹೊಸ ಕೊಪ್ಪಳ ಜಿಲ್ಲೆಯನ್ನು ರೂಪಿಸಲಾಯಿತು. ೧೯೪೮ರವರೆವಿಗೂ ಕೊಪ್ಪಳವು ಒಂದು ಸಣ್ಣ ಜಹಗೀರ್ ಜಿಲ್ಲೆಯಾಗಿತ್ತು. ಜಹಗೀರ್ ರದ್ಧತಿ ಶಾಸನದಿಂದಾಗಿ ಅದು

ಜಿಲ್ಲೆಯ ಸ್ಥಾನಮಾನ ಕಳೆದುಕೊಂಡು ತಾಲೂಕು ಕೇಂದ್ರವಾಯಿತು. ಈಗ ಅದು ಮತ್ತೆ ಒಂದು ಪೂರ್ಣ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿ ನಾಲ್ಕು ತಾಲೂಕುಗಳಿವೆ. ಕೊಪ್ಪಳ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಉತ್ತರದಲ್ಲಿ ಬಾಗಲಕೋಟೆ ಮತ್ತು ರಾಯಚೂರು, ದಕ್ಷಿಣದಲ್ಲಿ ಬಳ್ಳಾರಿ, ಪಶ್ಚಿಮದಲ್ಲಿ, ಗದಗ ಈ ಜಿಲ್ಲೆಯ ಮೇರೆಗಳಾಗಿವೆ. ಈ ಜಿಲ್ಲೆಯು ತ್ರಿಕೋನಾಕಾರದಲ್ಲಿದೆ. ಉತ್ತರದ ತುದಿ ವಿಸ್ತೃತವಾಗಿದೆ ಮತ್ತು ದಕ್ಷಿಣದ ತುದಿ ಚೂಪಾಗಿದೆ.

### ೩.೩. ಭೌಗೋಳಿಕ ವಿಸ್ತೀರ್ಣತೆ, ವಾತಾವರಣ ಮತ್ತು ಜನಸಂಖ್ಯೆಯ ವಿವರ

ಒಂದು ಪ್ರದೇಶದ ಗುಣಲಕ್ಷಣಗಳನ್ನು ಅರಿಯಬೇಕಾದರೆ ಅಲ್ಲಿನ ಭೌಗೋಳಿಕ ಪರಿಸರವನ್ನು ಗಮನಿಸುವುದು ಅತಿ ಮುಖ್ಯವಾಗುತ್ತದೆ. ಈ ಭೌಗೋಳಿಕ ಆಂಶಗಳ ಮೇಲೆಯೇ ಅಲ್ಲಿಯ ಜನರ ಆಗುಹೋಗುಗಳು ಅವಲಂಬಿತವಾಗಿರುತ್ತವೆ. ಇಲ್ಲಿ ಭೌಗೊಳಿಕ ಆಂಶಗಳೆಂದರೆ ನೈಸರ್ಗಿಕ ಸಂಪತ್ತು, ಹವಾಗುಣ, ಪ್ರಾದೇಶಿಕ ಮೇರೆಗಳು ಅಲ್ಲಿನ ವೃತ್ತಿ, ಜನಸಾಂದ್ರತೆ, ಸಾರಿಗೆ, ಸಂಪರ್ಕ, ಔದ್ಯೋಗಿಕತೆ ಮೊದಲಾದವುಗಳು. ಇವು ಈ ಪ್ರದೇಶದ ಜನರ ಸಂಸ್ಕೃತಿ, ಭಾಷೆ ಮತ್ತು ಜನರ ಜೀವನದ ಮೇಲೆ ಪ್ರಭಾವ ಬೀರುತ್ತವೆ. ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣತೆಯಲ್ಲಿ ಕೊಪ್ಪಳ ಜಿಲ್ಲೆಯ ವಿಸ್ತೀರ್ಣವು ಶೇ. ೨.೯೦ರಷ್ಟಿದೆ, ರಾಜ್ಯದ ಜನಸಂಖ್ಯೆಯಲ್ಲಿ ಕೊಪ್ಪಳ ಜಿಲ್ಲೆಯ ಪಾಲು ಶೇ. ೨.೧೩ರಷ್ಟಿದೆ, ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳವು ರಾಜ್ಯದ ೧೮ನೆಯ ಸ್ಥಾನದಲ್ಲಿದೆ. ಜನಸಂಖ್ಯೆಯ ದೃಷ್ಟಿಯಿಂದ ಕೊಪ್ಪಳ ಜಿಲ್ಲೆಯು ರಾಜ್ಯದಲ್ಲಿ ನಾಲ್ಕನೆಯ ಪುಟ್ಟ ಜಿಲ್ಲೆಯಾಗಿದೆ. ಕ್ರಮವಾಗಿ ಬೆಂಗಳೂರು ನಗರ, ಉಡುಪಿ, ಕೊಡಗುಗಳ ನಂತರ ಕೊಪ್ಪಳ ಜಿಲ್ಲೆ ಬರುತ್ತದೆ. ಕರ್ನಾಟಕ ರಾಜ್ಯದ ಈಶಾನ್ಯ ದಿಕ್ಕಿಗಿರುವ ಕೊಪ್ಪಳವು ಈ ಮುಂಚೆ ರಾಯಚೂರು ಜಿಲ್ಲೆಯ ಒಂದು ತಾಲೂಕಾಗಿತ್ತು. ಜೆ.ಎಚ್. ಪಟೇಲರ ಸರ್ಕಾರವು ಕೊಪ್ಪಳವನ್ನು ೧೯೯೭ರಲ್ಲಿ ಜಿಲ್ಲಾಕೇಂದ್ರವೆಂದು ಘೋಷಿಸಿದ ನಂತರ ಈ ಜಿಲ್ಲೆಯು ಕೊಪ್ಪಳ, ಕುಷ್ಟಗಿ, ಗಂಗಾವತಿ ಮತ್ತು ಯಲಬುರ್ಗಾ ಎಂಬ ೪ ತಾಲೂಕು ಕೇಂದ್ರಗಳನ್ನೊಳಗೊಂಡಿದೆ. ಕೊಪ್ಪಳ ಜಿಲ್ಲೆಯು ಪೂರ್ವ ರೇಖಾಂಶ ೭೫-೭೬ರಿಂದ ೭೭-೫೦ ಹಾಗೂ ೧೫-೧೦ರಿಂದ ೧೬-೫೧ ಉತ್ತರ ಅಕ್ಷಾಂಶದ ನಡುವೆ ಇದೆ. ಇದು ಸಮುದ್ರದ ಮಟ್ಟದಿಂದ(ಎಂ.ಎಸ್.ಎಲ್). ೫೨೩-೦೪ ಮೀಟರ್ ಎತ್ತರದಲ್ಲಿದೆ. ಈ ಜಿಲ್ಲೆಯ ಒಟ್ಟು ವಿಸ್ತೀರ್ಣ ಹೀಗಿದೆ. ಗಂಗಾವತಿ-೧೩೧೧.೨೧ ಚ.ಕಿ.ಮೀ, ಕೊಪ್ಪಳ-೧೩೬೪.೨೫. ಚ.ಕಿ.ಮೀ, ಕುಷ್ಟಗಿ-೧೩೭೦,೩೮ ಚ.ಕಿ.ಮೀ, ಯಲಬುರ್ಗಾ-೧೪೮೯.೬೬. ಚ.ಕಿ. ಮೀಟರುಗಳಿವೆ. ಜಿಲ್ಲೆಯಲ್ಲಿ ಒಟ್ಟು ೨೦ ಹೋಬಳಿಗಳು(ಗಂಗಾವತಿ-೮, ಕೊಪ್ಪಳ-೪, ಕುಷ್ಟಗಿ-೪, ಯಲಬುರ್ಗಾ-೪), ೧೩೪ ಗ್ರಾಮಪಂಚಾಯಿತಿಗಳು(ಗಂಗಾವತಿ-೩೮, ಕೊಪ್ಪಳ-೩೫, ಕುಷ್ಟಗಿ-೨೮, ಯಲಬುರ್ಗಾ-೩೩), ೬೨೯ ಕಂದಾಯ ಗ್ರಾಮಗಳು, ೫೯೪ ಜನವಸತಿ ಗ್ರಾಮಗಳು(ಗಂಗಾವತಿ-೧೪೮, ಕೊಪ್ಪಳ-೧೪೪, ಕುಷ್ಟಗಿ-೧೬೪, ಯಲಬುರ್ಗಾ-೧೩೮), ೩೫ ಜನವಸತಿ ಇಲ್ಲದ ಗ್ರಾಮಗಳನ್ನು(ಗಂಗಾವತಿ-೯, ಕೊಪ್ಪಳ-೭, ಕುಷ್ಟಗಿ-೧೩, ಯಲಬುರ್ಗಾ-೬) ಹೊಂದಿದೆ. ೨೦೧೧ರ

ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೩,೮೯,೯೨೦ ಇದ್ದು ರಾಜ್ಯದ ಜನಸಂಖ್ಯೆಯಲ್ಲಿ ಶೇ. ೨.೨೮%ರಷ್ಟು, ಪ್ರಮಾಣವನ್ನು ಹೊಂದಿದೆ.[೩]**(ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ, ೨೦೧೫-೧೬ ಮತ್ತು ಅರ್ಚನಾ ಹಿರೆಮಠ,೨೦೧೭)**

**ಕೊಪ್ಪಳ ಜಿಲ್ಲೆಯ ವಾತವರಣ:** ಕೊಪ್ಪಳ ಜಿಲ್ಲೆಯ ಉತ್ತರಕ್ಕೆ ಬಾಗಲಕೋಟೆ ಜಿಲ್ಲೆ, ಈಶಾನ್ಯ ಮತ್ತು ಪೂರ್ವಕ್ಕೆ ರಾಯಚೂರು ಜಿಲ್ಲೆ, ಆಗ್ನೇಯ ಹಾಗೂ ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆ ಹಾಗೂ ಪಶ್ಚಿಮಕ್ಕೆ ಗದಗ ಜಿಲ್ಲೆಗಳ ಗಡಿಗಳನ್ನು ಹೊಂದಿದೆ. ಈ ಜಿಲ್ಲೆಯು ಸಮುದ್ರದಿಂದ ೫೨.೩೦೪ ಮೀಟರ್ ಎತ್ತರದಲ್ಲಿದೆ. ಇದು ಮಳೆಯ ನೆರಳಿನ ಪ್ರದೇಶದಲ್ಲಿರುವುದರಿಂದ ಹವೆಯು ತಂಪಾಗಿದೆ. ಸಾಮಾನ್ಯವಾಗಿ ಒಣ ಹವೆಯಿಂದ ಕೂಡಿರುತ್ತದೆ. ವರ್ಷದಿಂದ ವರ್ಷಕ್ಕೆ ಬೀಳುವ ಮಳೆಯಲ್ಲಿನ ಅಗಾಧ ವ್ಯತ್ಯಾಸವು ಈ ಜಿಲ್ಲೆಯ ಜನರ ಜೀವನಮಟ್ಟದ ಮೇಲೆ ಅಷ್ಟೇ ಪ್ರಭಾವ ಬೀರುತ್ತದೆ. ವಿಶೇಷವಾಗಿ ಕೊಪ್ಪಳ ಹಾಗೂ ಗಂಗಾವತಿ ತಾಲೂಕುಗಳೆರಡೂ ಕಲ್ಲುಗುಡ್ಡಕ್ಕೆ ಹೊಂದಿಕೊಂಡಿರು ವುದರಿಂದ ತಾಪಮಾನ ಹೆಚ್ಚಾಗಿರುತ್ತದೆ. ಇದರಿಂದಾಗಿ ಬೇಸಿಗೆ ಕಾಲವು ಅತಿ ದೀರ್ಘವಾಗಿದ್ದು, ಫೆಬ್ರುವರಿ ಮಧ್ಯಭಾಗಗದಿಂದ ಮೇ ತಿಂಗಳವರೆಗೂ ಈ ಭಾಗದಲ್ಲಿ ಹೆಚ್ಚಾಗಿ ಬೇಸಿಗೆ ಗಾಲವಿರುತ್ತದೆ. ಇತರ ಕಾಲಗಳಲ್ಲಿ ೩೦-೩೫ ಸೆಲ್ಸಿಯಸ್ ತಾಪಮಾನವಿರುತ್ತದೆ. ಅಲ್ಲದೇ ಈ ಪ್ರದೇಶದಲ್ಲಿ ಎಲ್ಲ ಕಾಲಗಳಲ್ಲಿಯೂ ಅತಿ ವೇಗವಾಗಿ ಗಾಳಿ ಬೀಸುತ್ತದೆ. ಬೇಸಿಗೆಯಲ್ಲಿ ತೀವ್ರವಾದ ಉಷ್ಣ ಹವೆ ಎಲ್ಲ ಕಡೆ ಅತಿಯಾಗಿ ಹಬ್ಬಿರುತ್ತದೆ. ಈ ಬಿಸಿಲಿನ ಪ್ರಖರತೆಗೆ ದೇಹ ಸುಸ್ತಾಗಿ ಕೆಲಸ ಮಾಡದಂತಾ ಗುತ್ತದೆ. ಅಲ್ಲದೆ ಅತಿಯಾದ ಬಿಸಿಲು ಮತ್ತು ಉಷ್ಣ ಹವೆಯಿಂದಾಗಿ ಪ್ರತಿ ವರ್ಷ ಇಲ್ಲಿ ಸಾವುಗಳು ಸಂಭವಿಸುವ ಸಾಧ್ಯತೆಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಪ್ರದೇಶದಲ್ಲಿ ಅಧಿಕ ಗಟ್ಟಿ ಶಿಲಾಪದರು ಗಳಿರುವುದರಿಂದ ಅಂತರ್ಜಲ ಮಟ್ಟ ಆಳದಲ್ಲಿದೆ ಮಳೆಯ ಸರಾಸರಿ ಪ್ರಮಾಣ ಕಡಿಮೆಯಾಗಿರು ವುದರಿಂದ ಇಲ್ಲಿನ ಅಂತರ್ಜಲ ಮಟ್ಟದ ಪ್ರಮಾಣ ಕಡಿಮೆಯಾಗಿದೆ. ಜೂನ್ ತಿಂಗಳಿನಿಂದ ಸೆಪ್ಟಂಬರ್ ತಿಂಗಳಿನಲ್ಲಿ ಸಾಮಾನ್ಯವಾಗಿ ಮಳೆಗಾಲವಾಗಿರುತ್ತದೆ, ಆದರೆ ಇತ್ತೀಚಿನ ದಿನಗಳಲ್ಲಿ ಅಂದರೆ ವಾತಾವರಣದ ಬದಲಾವಣೆಯಿಂದ ಮಳೆಗಾಲದಲ್ಲಿ ಏರುಪೇರಾಗಿದೆ. ಹಾಗೇ ಚಳಿಕಾಲವು ಡಿಸೆಂಬರಿಂದ ಫೆಬ್ರವರಿವರೆಗೂ ತಂಪಿನ ವಾತಾವರಣವಿರುತ್ತದೆ. ಆದರೂ ನದಿ, ಅಣೆಕಟ್ಟು, ಕಾಲುವೆಗಳಲ್ಲಿನ ಒಳಹರಿವು, ಕುಡಿಯುವ ಮತ್ತು ನೀರಾವರಿಯ ಸೌಲಭ್ಯವನ್ನು ಒದಗಿಸಿದೆ. ಈ ಜಿಲ್ಲೆಯ ದಕ್ಷಿಣ ಗಡಿಯಲ್ಲಿ ಹರಿಯುವ ತುಂಗಭದ್ರಾ ನದಿ ಇಲ್ಲಿನ ಜೀವನದಿಯಾಗಿದೆ. ತುಂಗಭದ್ರಾ ನದಿಗೆ ಕಟ್ಟಿದ ಅಣೆಕಟ್ಟು ಮತ್ತು ಅಣೆಕಟ್ಟಿನ ಎಡದಂಡೆ ಕಾಲುವೆ ಕೊಪ್ಪಳ ಹಾಗೂ ಗಂಗಾವತಿ ತಾಲೂಕುಗಳಿಗೆ ವರದಾನವಾಗಿದೆ. ಗಂಗಾವತಿ ತಾಲೂಕಿನ ಹೆಕ್ಟೇರ್‌ರು ಕೇವಲ ಕೊಳವೆಬಾವಿಗಳಿಂದ ಮಾತ್ರ ನೀರಾವರಿಗೊಂಡಿದೆ. ಮುಂದುವರಿದಂತೆಯೇ ಇಲ್ಲಿನ ಕೃಷಿಯು ನೀರಾವರಿಯಿಂದ ಕೂಡಿದೆ. ಗಂಗಾವತಿ ತಾಲೂಕಿನ ಕನಕಗಿರಿ ಹಾಗೂ ಯಲಬುರ್ಗಾ ತಾಲೂಕಿನ ಜಮೀನಿಗೆ ನೀರಾವರಿ ಸೌಲಭ್ಯವನ್ನು ಸಿಂಗಟಾಲೂರು ಏತ ನೀರಾವರಿಯಿಂದ ಒದಗಿಸಲಾಗಿದೆ. ಕೊಪ್ಪಳ ತಾಲೂಕಿನ ಹೋಬಳಿಗಳು ನೀರಾವರಿ ಸೌಲಭ್ಯವನ್ನು ಹೊಂದಬೇಕಾಗಿದೆ.

**ಕೋಷ್ಟಕ ೩.೧. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವನ್ನು ಹಾಗೂ ಜನಸಂಖ್ಯೆಯನ್ನು ತಾಲೂಕುವಾರು ನೀಡಲಾಗಿದೆ**

| ಕ್ರಸಂ. | ತಾಲೂಕುಗಳು | ಭೌಗೋಳಿಕ ವಿಸ್ತೀರ್ಣ (ಚ.ಕಿ.ಮೀ.) | ಜನಸಂಖ್ಯೆ (ಲಕ್ಷಗಳಲ್ಲಿ)-೨೦೧೧ | | | |
|---|---|---|---|---|---|---|
| | | | ಒಟ್ಟು | ಗಂಡಸರು | ಹೆಂಗಸರು | ಒಟ್ಟು ಜನಸಂಖ್ಯೆಯ % ವಾರು ಪ್ರಮಾಣ |
| ೧ | ಗಂಗಾವತಿ | ೧೩೪೪ | ೪೫೯೯೦೫ | ೨೨೯೬೨೭ | ೨೩೦೨೭೮ | ೩೩.೦೮ |
| ೨ | ಕೊಪ್ಪಳ | ೧೩೭೭ | ೩೭೭೭೮೧ | ೧೯೦೯೦೭ | ೧೮೬೮೭೪ | ೨೭.೧೮ |
| ೩ | ಕುಷ್ಟಗಿ | ೧೩೬೪ | ೨೮೪೭೯೨ | ೧೪೪೨೨೭ | ೧೪೦೫೬೫ | ೨೦.೪೮ |
| ೪ | ಯಲಬುರ್ಗಾ | ೧೪೯೦ | ೨೬೭೪೪೨ | ೧೩೫೧೬೫ | ೧೩೨೨೭೭ | ೧೯.೨೪ |
| ಒಟ್ಟು | ಕೊಪ್ಪಳ ಜಿಲ್ಲೆ | ೫೫೭೦ | ೧೩೮೯೯೨೦ | ೬೯೯೯೨೬ | ೬೮೯೯೪ | ೧೦೦ |

ಆಕರ: ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ. ೧೪/೨೦೧೫-೧೬

ಕೊಪ್ಪಳ ಜಿಲ್ಲೆಯ ಜನಸಂಖ್ಯೆಯು ೨೦೧೧ರ ಜನಗಣತಿಯಂತೆ ಒಟ್ಟು ಜನಸಂಖ್ಯೆ ೧೩,೮೯,೯೨೦ ಇದ್ದು ಇದು ೬,೯೯,೯೨೬ ಜನ ಗಂಡಸರು ಹಾಗೂ ೬,೮೯,೯೪ ಜನ ಹೆಂಗಸರನ್ನು ಹೊಂದಿದೆ. ಒಟ್ಟು ಜನಸಂಖ್ಯೆಯಲ್ಲಿ, ನಗರಮಟ್ಟದಲ್ಲಿ ೨,೩೩,೭೦೪ರಷ್ಟು ಜನರಿದ್ದಾರೆ. ಇದರಲ್ಲಿ ೧,೧೬,೯೬೮ ಜನ ಗಂಡಸರು ಮತ್ತು ೧,೧೬,೭೩೬ ಜನ ಹೆಂಗಸರಿದ್ದಾರೆ. ಗ್ರಾಮಿಣ ಮಟ್ಟದಲ್ಲಿ ೧೧,೫೬,೨೧೬ರಷ್ಟು ಜನರಿದ್ದಾರೆ. ಇದರಲ್ಲಿ ೫,೮೨,೯೫೮ ಜನ ಗಂಡಸರು ಮತ್ತು ೫,೭೩,೨೫೮ ಜನ ಹೆಂಗಸರಿದ್ದಾರೆ. ಹಿಂದೂಗಳು, ಜೈನರು, ಸಿಖ್ಖರು, ಮುಸ್ಲಿಮರು ಹಾಗೂ ಕ್ರಿಶ್ಚಿಯನ್ ಧರ್ಮೀಯರು ಇದ್ದಾರೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳೆಂದು ಜನರನ್ನು ಗುರುತಿಸಲಾಗಿದೆ. ೧೯೮೧-೯೧ರಲ್ಲಿ ರಾಜ್ಯಮಟ್ಟದಲ್ಲಿ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ಶೇ. ೨೧.೧೨ ಇತ್ತು. ಇದು ಹಿಂದಿನ ದಶಕ(೧೯೭೧-೮೧)ದಲ್ಲಿದ್ದ ಬೆಳವಣಿಗೆ ಪ್ರಮಾಣ(ಶೇ. ೨೬.೭೫)ಕ್ಕಿಂತ ಶೇ. ೫.೬೩ ಅಂಶಗಳಷ್ಟು ಕಡಿಮೆ ಇತ್ತು. ೧೯೯೧ರಲ್ಲಿ ರಾಜ್ಯಮಟ್ಟದ ಜನಸಂಖ್ಯೆಯ ಬೆಳವಣಿಗೆಯ ಸರಾಸರಿ ಪ್ರಮಾಣಕ್ಕಿಂತ ಅಧಿಕ ಪ್ರಮಾಣದಲ್ಲಿ ಜನಸಂಖ್ಯಾ ಬೆಳವಣಿಗೆ ಅನುಭವಿಸಿದ ಜಿಲ್ಲೆಗಳೆಂದರೆ ಬಳ್ಳಾರಿ(ಶೇ. ೨೬.೯೨), ಬೀದರ್(ಶೇ. ೨೬.೧೨), ಗುಲಬರ್ಗಾ(ಶೇ. ೨೧.೧೦) ಮತ್ತು ರಾಯಚೂರು(ಶೇ. ೨೯.೪೯). ೧೯೯೧ರಲ್ಲಿ ಅತ್ಯಧಿಕ ಪ್ರಮಾಣದ ಜನಸಂಖ್ಯೆಯ ಬೆಳವಣಿಗೆಯನ್ನು ಕಂಡ ಜಿಲ್ಲೆ ರಾಯಚೂರು. ಇಂತಹ ರಾಯಚೂರು ಜಿಲ್ಲೆಯೊಳಗಿಂದ ಉದಯಿಸಿರುವ ಕೊಪ್ಪಳ ಜಿಲ್ಲೆಯ

ಜನಸಂಖ್ಯೆಯ ಬೆಳವಣಿಗೆಯನ್ನು ಪರಾಮರ್ಶಿಸಬೇಕಾಗಿದೆ. ೧೯೮೧-೯೧ರ ದಶಕಕ್ಕೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆ ಪ್ರಮಾಣವು ಹೆಚ್ಚಾಗಿದೆ. ೨೦೧೧ರಲ್ಲಿ ೧೩೮೯೨೦ಕ್ಕೆ ಏರಿಕೆಯಾಗಿದೆ. ೧೯೮೧ರಲ್ಲಿ ಕೊಪ್ಪಳ ಜಿಲ್ಲೆಯ ಜನಸಂಖ್ಯೆ ೭.೪೮ ಲಕ್ಷ ಇತ್ತು, ೧೯೯೧ರಲ್ಲಿ ಅದು ೯.೫೮ ಲಕ್ಷಕ್ಕೆ ಏರಿಕೆಯಾಗಿದೆ. ೧೯೮೧ರಲ್ಲಿ ಕೊಪ್ಪಳ ಜಿಲ್ಲೆಯ ಜನಸಂಖ್ಯೆ ೭.೪೦ ಲಕ್ಷ ಇತ್ತು. ೧೯೯೧ರಲ್ಲಿ ೯.೫೮ ಲಕ್ಷಕ್ಕೆ ಏರಿಕೆಯಾಗಿದೆ. ಅಂದರೆ ೧೯೮೧-೯೧ರ ದಶಕದಲ್ಲಿ ಜಿಲ್ಲೆಯ ಜನಸಂಖ್ಯೆ ನಿವ್ವಳ ೨:೧೦ ಲಕ್ಷ ಅಧಿಕವಾಗಿದೆ. ಇಲ್ಲಿ ಉಂಟಾದ ದಶಕವಾರು ಶೇಕಡ ಏರಿಕೆ ೨೮.೦೫ರಷ್ಟು ಇದೆ. ರಾಜ್ಯಮಟ್ಟದ ಜನಸಂಖ್ಯೆಯ ಬೆಳವಣಿಗೆ ಪ್ರಮಾಣಕ್ಕಿಂತ ಕಡಿಮೆ ಇದೆ. ಜನಸಂಖ್ಯೆಯಲ್ಲಿ ಕೊಪ್ಪಳವು ೨೧ನೆಯ ಸ್ಥಾನ ಹೊಂದಿದೆ.

**ಕೋಷ್ಟಕ ೩.೨. ಜಿಲ್ಲೆಯ ಪರಿಶಿಷ್ಟ ಜಾತಿಯ ಮತ್ತು ಶೇಕಡವಾರು ಜನಸಂಖ್ಯೆಯನ್ನು ತಾಲೂಕುವಾರು ನೀಡಲಾಗಿದೆ**

| ಕ್ರ.ಸಂ. | ತಾಲೂಕುಗಳು | ಪರಿಶಿಷ್ಟ ಜಾತಿಯ ಜನಸಂಖ್ಯೆ | | | ಶೇಕಡವಾರು | | |
|---|---|---|---|---|---|---|---|
| | | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ |
| ೧ | ಗಂಗಾವತಿ | ೮೮೭೭೦ | ೭೧೪೩೯ | ೧೭೩೩೧ | ೨೦.೨೬ | ೨೩.೪೨ | ೧೭.೦೯ |
| ೨ | ಕೊಪ್ಪಳ | ೭೨೫೩೩ | ೬೧೯೮೭ | ೧೦೫೪೬ | ೨೦.೪೩ | ೨೪.೮೧ | ೧೬.೦೪ |
| ೩ | ಕುಷ್ಟಗಿ | ೪೫೨೬೬ | ೪೦೨೨೨ | ೫೦೪೪ | ೨೧.೧೨ | ೧೮.೪೩ | ೨೩.೮೧ |
| ೪ | ಯಲಬುರ್ಗಾ | ೫೨೦೩೯ | ೪೯೨೮೭ | ೨೭೫೨ | ೨೩.೦೩ | ೨೨.೦೧ | ೨೪.೦೫ |
| ಒಟ್ಟು ಕೊಪ್ಪಳ ಜಿಲ್ಲೆ | | ೨೫೮೬೦೮ | ೨೨೨೯೩೫ | ೩೫೬೭೩ | ೧೮.೬೧ | ೧೯.೨೮ | ೧೫.೨೬ |

**ಆಕರ:** ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ. ೧೪/೨೦೧೫-೧೬

ಕೊಪ್ಪಳ ಜಿಲ್ಲೆಯಲ್ಲಿ ಪ್ರರಿಶಿಷ್ಟ ಜಾತಿಯ ಜನಸಂಖ್ಯೆ ದಶಕದಿಂದ ದಶಕಕ್ಕೆ ಎರುತ್ತಾ ಬರುತ್ತಿದೆ, ೧೯೮೧-೯೧ರ ದಶಕಕ್ಕೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆ ಪ್ರಮಾಣವು ಹೆಚ್ಚಾಗಿದೆ ಮತ್ತು ೨೦೧೧ರಲ್ಲಿ ಏರಿಕೆಯಾಗಿದೆ. ಗಂಗಾವತಿ: ಒಟ್ಟು ೮೮೭೭೦, ಗ್ರಾಮೀಣ ೭೧೪೩೯ ಮತ್ತು ನಗರ ೧೭೩೩೧ರಷ್ಟು ಇದೆ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೨೦.೨೬ರಷ್ಟು ಇದೆ, ಕೊಪ್ಪಳ: ಒಟ್ಟು ೭೨೫೩೩, ಗ್ರಾಮೀಣ ೬೧೯೮೭ ಮತ್ತು ನಗರ ೧೦೫೪೬ರಷ್ಟಿದೆ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೨೦.೪೩ರಷ್ಟಿದೆ, ಕುಷ್ಟಗಿ: ಒಟ್ಟು ೪೫೨೬೬, ಗ್ರಾಮೀಣ ೪೦೨೨೨ ಮತ್ತು ನಗರ ೫೦೪೪ರಷ್ಟು ಇದೆ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೨೧.೧೨ರಷ್ಟು ಇದೆ, ಯಲಬುರ್ಗ: ಒಟ್ಟು ೫೨೦೩೯, ಗ್ರಾಮೀಣ ೪೯೨೮೭ ಮತ್ತು ನಗರ ೨೭೫೨ರಷ್ಟು ಇದೆ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೨೩.೦೩ರಷ್ಟು ಇದೆ, ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಪರಿಶಿಷ್ಟರ ಜನಸಂಖ್ಯೆ ೧೮.೬೧ರಷ್ಟು ಇದೆ.

**ಕೋಷ್ಟಕ ೩.೩. ಜಿಲ್ಲೆಯ ಪರಿಶಿಷ್ಟ ಪಂಗಡದ ಶೇಕಡವಾರು**

**ಜನಸಂಖ್ಯೆಯನ್ನು ತಾಲೂಕುವಾರು ನೀಡಲಾಗಿದೆ**

| ಕ್ರಸಂ. | ತಾಲೂಕುಗಳು | ಪರಿಶಿಷ್ಟ ಜಾತಿಯ ಜನಸಂಖ್ಯೆ | | | ಶೇಕಡವಾರು | | |
|---|---|---|---|---|---|---|---|
| | | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ |
| ೧ | ಗಂಗಾವತಿ | ೬೪೬೧೫ | ೫೭೨೮೮ | ೭೩೨೭ | ೧೭.೦೯ | ೧೫.೧೬ | ೧.೯೩ |
| ೨ | ಕೊಪ್ಪಳ | ೩೧೭೨೪ | ೨೮೬೪೭ | ೩೦೭೭ | ೬.೮೮ | ೬.೨೨ | ೦.೬೬ |
| ೩ | ಕುಷ್ಟಗಿ | ೩೮೪೬೭ | ೩೭೪೪೫ | ೧೦೨೨ | ೧೩.೪೯ | ೧೩.೧೪ | ೦.೩೫ |
| ೪ | ಯಲಬುರ್ಗಾ | ೨೯೪೬೫ | ೨೯೧೮೩ | ೨೮೨ | ೧೧.೦೧ | ೧೦.೯೧ | ೦.೧ |
| ಒಟ್ಟು ಕೊಪ್ಪಳ ಜಿಲ್ಲೆ | | ೧೬೪೨೭೧ | ೧೫೨೫೬೩ | ೧೧೭೦೮ | ೧೧.೮೨ | ೧೩.೨೦ | ೫.೧ |

**ಆಕರ:** ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ. ೧೪/೨೦೧೫-೧೬

ಕೊಪ್ಪಳ ಜಿಲ್ಲೆಯಲ್ಲಿ ಪ್ರರಿಶಿಷ್ಟ ಜಾತಿಯ ಜನಸಂಖ್ಯೆ ದಶಕದಿಂದ ದಶಕಕ್ಕೆ ಎರುತ್ತಾ ಬರುತ್ತಿದೆ. ೧೯೮೧-೯೧ರ ದಶಕಕ್ಕೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆ ಪ್ರಮಾಣವು ಹೆಚ್ಚಾಗಿದೆ. ಮತ್ತು ೨೦೧೧ರಲ್ಲಿ ಏರಿಕೆಯಾಗಿದೆ. ಗಂಗಾವತಿ: ಒಟ್ಟು ೬೪೬೧೫, ಗ್ರಾಮೀಣ ೫೭೨೮೮ ಮತ್ತು ನಗರ ೭೩೨೭ರಷ್ಟಿದೆ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೭.೦೯ರಷ್ಟಿದೆ. ಕೊಪ್ಪಳ: ಒಟ್ಟು ೩೧೭೨೪, ಗ್ರಾಮೀಣ ೨೮೬೪೭ ಮತ್ತು ನಗರ ೩೦೭೭ರಷ್ಟಿದೆ. ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೬.೮೮ರಷ್ಟು ಇದೆ, ಕುಷ್ಟಗಿ: ಒಟ್ಟು ೩೮೪೬೭, ಗ್ರಾಮೀಣ ೩೭೪೪೫ ಮತ್ತು ನಗರ ೧೦೨೨ರಷ್ಟಿದೆ. ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೩.೪೯ರಷ್ಟಿದೆ. ಯಲಬುರ್ಗ: ಒಟ್ಟು ೨೯೪೬೫, ಗ್ರಾಮೀಣ ೨೯೧೮೩ ಮತ್ತು ನಗರ ೨೮೨ರಷ್ಟಿದ್ದು, ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೧.೦೧ರಷ್ಟಿದೆ. ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಪರಿಶಿಷ್ಟರ ಪಂಗಡವರ ಜನಸಂಖ್ಯೆ ೧೧.೮೨ರಷ್ಟು ಇದೆ. ನಮ್ಮ ಕರ್ನಾಟಕದ ಸಂದರ್ಭದಲ್ಲಿ ಜನಸಂಖ್ಯೆಯನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದವರು, ಅಲ್ಪಸಂಖ್ಯಾತರು ಮತ್ತು ಇತರೇ ವರ್ಗ ಎಂದು ವರ್ಗೀಕರಿಸಬಹುದು. ಈ ವಿವಿಧ ಸಾಮಾಜಿಕ ಗುಂಪುಗಳ ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ಥಿತಿಗತಿಗಳು ಸಮಾನವಾಗಿರುವುದಿಲ್ಲ, ಈ ನಮ್ಮ ಅಧ್ಯಯನದಲ್ಲಿ, ಮಾಹಿತಿಯ ಮಿತಿ ಯಿಂದಾಗಿ ವಿಶ್ಲೇಷಣೆಯನ್ನು ಕೇವಲ ಪರಿಶಿಷ್ಟರು (ಪ.ಜಾ + ಪ.ಪಂ.) ಎಂಬ ಎರಡು ಸಾಮಾಜಿಕ ಗುಂಪುಗಳನ್ನು ವರ್ಗೀಕರಿಸಲಾಗಿದೆ. ರಾಜ್ಯ ಮಟ್ಟದಲ್ಲಿ ಜನಸಂಖ್ಯೆಯಲ್ಲಿ ಪರಿಶಿಷ್ಟರ (ಪ.ಜಾ.+ ಪ.ಪಂ.) ಪ್ರಮಾಣ ಶೇ. ೨೪.೧೦ರಷ್ಟಿದೆ.

**ಕೋಷ್ಟಕ ೩.೪. ಜಿಲ್ಲೆಯ ಲಿಂಗಾನುಪಾತದ ಮಾಹಿತಿ (ಹೆಂಗಸರು/ಗಂಡಸರು)**

**ತಾಲೂಕುವಾರು ನೀಡಲಾಗಿದೆ**

| ಕ್ರಸಂ. | ತಾಲೂಕುಗಳು | ಲಿಂಗಾನುಪಾತ (ಹೆಣ್ಣು/ಗಂಡಸು) | | |
|---|---|---|---|---|
| | | ಒಟ್ಟು | ಗ್ರಾಮೀಣ | ನಗರ |
| ೧ | ಗಂಗಾವತಿ | ೯೯೫ | ೯೮೮ | ೧೦೦೩ |
| ೨ | ಕೊಪ್ಪಳ | ೯೮೫ | ೯೭೪ | ೯೯೬ |
| ೩ | ಕುಷ್ಟಗಿ | ೯೮೮ | ೯೮೪ | ೯೯೧ |
| ೪ | ಯಲಬುರ್ಗಾ | ೯೭೫ | ೯೮೨ | ೯೭೭ |
| **ಒಟ್ಟು ಕೊಪ್ಪಳ ಜಿಲ್ಲೆ** | | **೯೮೬** | **೯೮೩** | **೯೯೮** |

**ಆಕರ:** ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ. ೧೪/೨೦೧೫-೧೬

ಜಿಲ್ಲೆಯ ಲಿಂಗಾನುಪಾತದ ಮಾಹಿತಿ(ಹೆಂಗಸರು/ಗಂಡಸರು) ಗ್ರಾಮೀಣದ ಭಾಗದಲ್ಲಿ ೧೦೦೦ ಗಂಡುಮಕ್ಕಳಿಗೆ ೯೮೩ರಷ್ಟು ಹೆಣ್ಣುಮಕ್ಕಳಿದ್ದಾರೆ, ನಗರದಲ್ಲಿ ೧೦೦೦ ಗಂಡುಮಕ್ಕಳಿಗೆ ೯೯೮ರಷ್ಟು ಹೆಣ್ಣುಮಕ್ಕಳು ಇದ್ದಾರೆ ಅಂದರೆ ಇಲ್ಲಿಯೂ ಸಹ ಲಿಂಗಾನುಪಾತ ಸಮ ಸಂಖ್ಯೆಯಲ್ಲಿ ಇಲ್ಲ. ಅಂದರೆ ಅಸಮಾನತೆಯಿಂದ ಕೂಡಿದೆ ಇದಕ್ಕೆ ಕಾರಣಗಳನ್ನು ನೋಡಿದರೆ ಹುಟ್ಟಿನ ಸಂದರ್ಭದಲ್ಲಿ ಇಲ್ಲದ ಲಿಂತ ತಾರತಮ್ಯ ಸ್ತ್ರೀಯು ಬೆಳೆದಂತೆಲ್ಲಾ ಅದು ತೀವ್ರವಾಗುವ ಸಂಗತಿ ಇಲ್ಲಿದೆ. ಸಾಮಾನ್ಯವಾಗಿ ಹೆಣ್ಣು ಶಿಶುಗಳ ಮರಣ ಪ್ರಮಾಣ ಹಾಗೂ ಹೆಣ್ಣುಮಕ್ಕಳ ಮರಣ ಪ್ರಮಾಣಗಳು ಗಂಡು ಶಿಶು ಹಾಗೂ ಗಂಡುಮಕ್ಕಳ ಮರಣ ಪ್ರಮಾಣಕ್ಕಿಂತ ಕಡಿಮೆ ಇರಬೇಕು. ಇದು ಜೈವಿಕ ಲಕ್ಷಣ, ಆದರೆ ಹೆಣ್ಣು ಶಿಶು ಹಾಗೂ ಹೆಣ್ಣುಮಕ್ಕಳ ಮರಣ ಪ್ರಮಾಣಕ್ಕಿಂತ ಅಧಿಕವಿರುವುದು ಲಿಂಗ ತಾರತಮ್ಯದ ಸೂಚಿಯಾಗಿದೆ. ಈ ಲಿಂಗ ತಾರತಮ್ಯವು ಸ್ತ್ರೀಯರ ವಯಸ್ಸಿನ ಜೊತೆ ತೀವ್ರಗೊಳ್ಳುತ್ತಾ ನಡೆಯುವ ಸಂಗತಿ ನಮ್ಮ ಸಮಾಜದಲ್ಲಿದೆ. ರಾಯಚೂರು ಜಿಲ್ಲೆಯಲ್ಲೂ ಲಿಂಗ ತಾರತಮ್ಯ ತೀವ್ರವಾಗಿರುವುದನ್ನು ಕಾಣಬಹುದು.

ಈ ಅಧ್ಯಯನದಲ್ಲಿ ಜನಸಂಖ್ಯೆಯ ಬೆಳವಣಿಗೆಯ ಹಿಂದಿನ ಕಾರಣಗಳನ್ನು ಸಮಾಜೋ-ಆರ್ಥಿಕ ಸಂಗತಿಗಳಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಜನಸಂಖ್ಯೆಯನ್ನು ಕೇವಲ ಆರ್ಥಿಕ ವಿಷಯ ಅಥವಾ ಸಾಮಾಜಿಕ ವಿಷಯವೆಂದು ವರ್ಗೀಕರಿಸುವುದು ಸಾಧ್ಯವಿಲ್ಲ. ಅದೊಂದು ಬಹುರೂಪಿಯೂ ಬಹು ಆಯಾಮವುಳ್ಳ ಸಮಸ್ಯೆಯಾಗಿದೆ. ಜನರ ಅಜ್ಞಾನ, ಅವಿವೇಕ, ಮೌಢ್ಯ, ಜನಸಂಖ್ಯೆ ಮಿತಿಮೀರಿದ ಏರಿಕೆಗೆ ಕಾರಣ ಎಂಬ ಸಂಗತಿಯನ್ನು ಒಪ್ಪಲು ಸಾಧ್ಯವಿಲ್ಲ. ಅಧಿಕ ಸಂಖ್ಯೆಯಲ್ಲಿ ಮಕ್ಕಳನ್ನು ಪಡೆಯುವ ದಂಪತಿಗಳ ನಿರ್ಣಯದ ಹಿಂದೆ ಒಂದು ಉದ್ದೇಶವಿರುತ್ತದೆ.

ವಿವೇಚನೆ ಇರುತ್ತದೆ. ಮೊದಲನೆಯದಾಗಿ ಕೊಪ್ಪಳ ಜಿಲ್ಲೆಯು ಒಣ ಬೇಸಾಯವನ್ನು ಹೊಂದಿರುವ ಆರ್ಥಿಕತೆಯಾಗಿದೆ. ಈ ಜಿಲ್ಲೆಯಲ್ಲಿ ಶೇ. ೮೦ಕ್ಕೂ ಮಿಕ್ಕು ಜನ ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ. ದುಡಿಮೆಗಾರ ವರ್ಗದಲ್ಲಿ ಶೇ. ೮೦ರಷ್ಟು ದುಡಿಮೆಗಾರ ವರ್ಗದ ವರಮಾನ ಮತ್ತು ಉದ್ಯೋಗದ ಮೂಲ ಕೃಷಿ. ಕೃಷಿಯನ್ನು ಅವಲಂಬಿಸಿಕೊಂಡಿರುವ ೩.೩೫ ಲಕ್ಷ ಜನರಲ್ಲಿ ಶೇ. ೫೭.೪೭ರಷ್ಟು ಕೃಷಿ ಕಾರ್ಮಿಕರಿದ್ದಾರೆ. ಕೃಷಿ ಚಟುವಟಿಕೆಗಳು ಅಗಾಧವಾಗಿ ಶ್ರಮಶಕ್ತಿಯನ್ನು ಬಯಸುತ್ತವೆ. ಅದೊಂದು ಶ್ರಮಸಾಂದ್ರ ಚಟುವಟಿಕೆಯಾಗಿದೆ. ಆದ್ದರಿಂದ ಕುಟುಂಬದ ಗಾತ್ರ ದೊಡ್ಡದಿರುವುದು ಇಲ್ಲಿ ಅನಿವಾರ್ಯವಾಗಿದೆ. ಕುಟುಂಬದ ಎಲ್ಲ ಸದಸ್ಯರು ದುಡಿದರೂ ಹೊಟ್ಟೆ ತುಂಬದಿರುವ ಮೈಮುಚ್ಚದಿರುವ ಪರಿಸ್ಥಿತಿ ಇಲ್ಲಿದೆ. ಇದರಿಂದಾಗಿ ಕುಟುಂಬಗಳು ಹೆಚ್ಚು ಮಕ್ಕಳನ್ನು ಬಯಸುತ್ತವೆ. ಇದೇನು ವಿವೇಚನಾರಹಿತ ತೀರ್ಮಾನವಲ್ಲ. ಅಧಿಕ ಸಂಖ್ಯೆಯಲ್ಲಿ ಮಕ್ಕಳನ್ನು ಪಡೆಯುವುದು ಸಮಾಜೋ-ಆರ್ಥಿಕ ಅಗತ್ಯವಾಗಿದೆ, ಅನಿವಾರ್ಯವಾಗಿದೆ.[೪]**(ಟಿ.ಆರ್. ಚಂದ್ರಶೇಖರ್, ೧೯೯೯)** ಜನಸಂಖ್ಯಾ ಬೆಳವಣಿಗೆಯನ್ನು ತಗ್ಗಿಸಲು ಕುಟುಂಬ ಯೋಜನೆಯೊಂದೆ ಪರಿಣಾಮಕಾರಿ ಮಾರ್ಗವೆಂದು ಸರ್ಕಾರ-ತಜ್ಞರು ಭಾವಿಸಿರುವಂತಿದೆ. ಕುಟುಂಬ ಯೋಜನೆಯನ್ನು ಜನರು ಅನುಸರಿಸುವಂತೆ ಮಾಡಲು ಸರ್ಕಾರ ಬಲಪ್ರಯೋಗದ ಮಾರ್ಗವನ್ನು ಬಳಸುತ್ತಿದೆ. ಪಂಚಾಯಿತಿ ಚುನಾವಣೆಗೆ ಸ್ಪರ್ಧಿಸಲು ಕುಟುಂಬ ಯೋಜನಾ ಶಸ್ತ್ರಕ್ರಿಯೆಯನ್ನು ಕಡ್ಡಾಯ ಮಾಡುವ ಬಗ್ಗೆ ಯೋಚಿಸಲಾಗುತ್ತಿದೆ. ಜನಸಂಖ್ಯಾ ಬೆಳವಣಿಗೆಯನ್ನು ತಡೆಯಲು ಭಾರತದ ರಾಜ್ಯಗಳು ಕೇರಳದಿಂದ ಪಾಠ ಕಲಿಯಬೇಕು ಎಂದು ಹೇಳುತ್ತಾರೆ. ಕೊಪ್ಪಳ ಜಿಲ್ಲೆಯಲ್ಲಿ ಜನಸಂಖ್ಯಾ ಬೆಳವಣಿಗೆಯು ಅಗಾಧವಾಗಿದ್ದರೆ ಅದಕ್ಕೆ ಕಾರಣಗಳು ಕೆಳಮಟ್ಟದ ಸಾಕ್ಷರತೆ, ಅತೀ ಕಡಿಮೆ ಮಹಿಳೆಯರ ಸಾಕ್ಷರತೆ, ಅಗಾಧವಾದ ಕೃಷಿ ಕಾರ್ಮಿಕರ ಪ್ರಮಾಣ, ವಿವಾಹದ ವಯಸ್ಸು ಕಡಿಮೆ, ಆರೋಗ್ಯ ಸೌಲಭ್ಯದ ಕೊರತೆ ಮುಂತಾದವು ಎಂಬುದನ್ನು ನಾವು ಅರಿತುಕೊಳ್ಳಬೇಕಾಗಿದೆ. ಜಿಲ್ಲೆಯ ಜನರ ಬದುಕನ್ನು ಉತ್ತಮಪಡಿಸದೆ ಜನಸಂಖ್ಯೆಯ ಮಿತಿ ಮೀರಿದ ಬೆಳವಣಿಗೆಯನ್ನು ತಡೆಯಲು ಸಾಧ್ಯವಿಲ್ಲ.**(ಟಿ.ಆರ್. ಚಂದ್ರಶೇಖರ, ೧೯೯೯)**

ಭಾರತ

ಕರ್ನಾಟಕ ರಾಜ್ಯ ನಕ್ಷೆ




ಕೃಪೆ: ಗೂಗಲ್ ಮ್ಯಾಪ್ಸ್

## ಕರ್ನಾಟಕ ರಾಜ್ಯ

## ಸಮೀಕ್ಷೆಗೊಳಪಟ್ಟ ಕೊಪ್ಪಳ ಜಿಲ್ಲೆ



## ಸಮೀಕ್ಷೆಗೊಳಪಟ್ಟ ಕೊಪ್ಪಳ ಜಿಲ್ಲಾ
## ತಾಲೂಕುವಾರು ನಕ್ಷೆ



ಈ ಪ್ರದೇಶಕ್ಕೆ ಗಟ್ಟಿಯಾದ ಭದ್ರಬುನಾದಿ ಹಾಕಲು ಕೈಗಾರಿಕೆಗಳ ಪ್ರಮುಖ ಪಾತ್ರ ವಹಿಸಿವೆ. ಕೈಗಾರಿಕೆಗಳಮೂಲಕ ಇಲ್ಲಿನ ಆರ್ಥಿಕ ಸ್ಥಿತಿ ಸುಧಾರಿಸಲು ಒಂದಿಷ್ಟು ಸಾಧ್ಯವಾಗಿದೆ. ಕೊಪ್ಪಳ ತಾಲೂಕಿನ ಗಿಣಿಗೇರಾ ಹತ್ತಿರ ಅಲ್ಟ್ರಾಟೆಕ್ ಬೃಹತ್ ಸಿಮೆಂಟ್ ಕಾರ್ಖಾನೆ ಆರಂಭಗೊಂಡು ಸಿಮೆಂಟಿನ ಬೇಡಿಕೆ ಹೆಚ್ಚಿಸಿದೆ. ಕಿಡದಾಳ ಹತ್ತಿರ ಮಿನಿ ಸಿಮೆಂಟ್ ಪ್ಲಾಂಟ್ ಕಾರ್ಯಾರಂಭ ಮಾಡಿದೆ. ಈ ಜಿಲ್ಲೆಯ ಕಿರ್ಲೋಸ್ಕರ್ ಫೆರಸ್ ಲಿಮಿಟೆಡ್ ಹೆಸರಿನ ಉಕ್ಕು ಮತ್ತು ಕಬ್ಬಿಣ ತಯಾರಿಸುವ ಕೈಗಾರಿಕೋದ್ಯಮವು ದೇಶದಾದ್ಯಂತ ೬೧ ಹೆಸರು ಪಡೆದಿದೆ. ಕಲ್ಯಾಣಿ ಸ್ಟೀಲ್ಸ್, ಇಸ್ಪಾತ್, ಹೊಸಪೇಟೆ ಸ್ಟೀಲ್ಸ್ ಹೀಗೆ ಚಿಕ್ಕ ಪುಟ್ಟ ಒಟ್ಟು ೩೮ ಉಕ್ಕು ಮತ್ತು ಕಬ್ಬಿಣದ ಅದಿರಿನಿಂದ ಕೊಪ್ಪಳ ಜಿಲ್ಲೆಯಲ್ಲಿ ಸಿಗುವ ಭೂಗರ್ಭ ಸಂಪತ್ತಿನಿಂದ ಕಾರ್ಯ ನಿರ್ವಹಿಸುತ್ತಿವೆ. ಪ್ರಮುಖವಾಗಿ ಇಲ್ಲಿ ಸಿಗುವ ಕಬ್ಬಿಣದ ಅದಿರಿನಿಂದ ಕೊಪ್ಪಳ ಜಿಲ್ಲೆಯು ಇಂದು ಮುಂದುವರಿದ ಜಿಲ್ಲೆಗಳಲ್ಲೊಂದಾಗುತ್ತಿದೆ. ಇದಕ್ಕಾಗಿಯೇ ಕೊಪ್ಪಳ ಜಿಲ್ಲೆಯನ್ನು ಸ್ಟೀಲ್ ಪಾರ್ಕ್ ಸ್ಟೀಲ್ ಝೋನ್ ಮಾಡುವುದಾಗಿ ಸರಕಾರ ಘೋಷಿಸಿದೆ. ಕೊಪ್ಪಳ ಜಿಲ್ಲೆಯಲ್ಲಿ ಕೈಗಾರಿಕೋದ್ಯಮಕ್ಕೆ ಬಹಳ ಅವಕಾಶಗಳಿರುವುದರಿಂದ ಕಾರ್ಖಾನೆಗಳು ದಿನದಿಂದ ದಿನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿತಗೊಳ್ಳುತ್ತಿವೆ. ಇಷ್ಟಲ್ಲದೆ ತುಂಗಭದ್ರಾ ಅಣೆಕಟ್ಟಿನ ಅಚ್ಚುಕಟ್ಟಾದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಮತ್ತು ಸುತ್ತಮುತ್ತಲಿನ ಸ್ಥಳಗಳನ್ನು ಗಣನೆಗೆ ತೆಗೆದುಕೊಂಡರೆ ಗಂಗಾವತಿ ತಾಲೂಕನ್ನು ರೈಸ್ ಪಾರ್ಕ್ ಎಂದು ಘೋಷಿಸಲಾಗಿದೆ. ಇತ್ತೀಚಿನ ದಶಕದವರೆಗೆ ಬಳಸುತ್ತಿರುವ ರಾಸಾಯನಿಕ ಗೊಬ್ಬರ, ಕೀಟನಾಶಕಗಳು, ಹೆಚ್ಚುತ್ತಿರುವ ಕೈಗಾರೀಕರಣಗಳಿಂದ ಪರಿಸರ ಮಾಲಿನ್ಯಉಂಟಾಗಿ ಆಹಾರ, ನೀರು, ವಾಯು ಮಾಲಿನ್ಯಗೊಂಡಿದೆ. ಮಕ್ಕಳು ಮತ್ತು ವಯೋವೃದ್ಧರು ಆರೋಗ್ಯದಿಂದ ಬಳಲುತ್ತಿದ್ದಾರೆ. ಇತ್ತೀಚೆಗೆ ಬೆಳೆಯುತ್ತಿರುವ ಆಹಾರಧಾನ್ಯ, ತರಕಾರಿ, ಹಣ್ಣು, ನಿಸರ್ಗದತ್ತ ಸೊಪ್ಪುಗಳು ಇಲ್ಲಿನ ಜನರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಲಿವೆ. ಈ ಎಲ್ಲಾ ಕಾರಣಗಳಿಂದಾಗಿ ದೈಹಿಕ ಧಾರಣಶಕ್ತಿ ಕಡಿಮೆಯಾಗಿದೆ. ಇಲ್ಲಿನ ಜನರಿಗೆ ಅಲರ್ಜಿಯಾಗುತ್ತಿರುವುದು ಸಾಮಾನ್ಯವಾಗಿದೆ. ಪ್ರಸ್ತುತ ದಿನಗಳಲ್ಲಿ ಹಿಂದಿನವರಿಗಿಂತ ಈಗಿನವರು ಹೆಚ್ಚು ರೋಗ ಪೀಡಿತರಾಗುತ್ತಿದ್ದಾರೆಂದು ಒಪ್ಪಿಕೊಳ್ಳಬೇಕಾಗಿದೆ. ಕೃಷಿಭೂಮಿ ಸಾಗುವಳಿ ದಾರರು, ಕೃಷಿಕಾರ್ಮಿಕರು, ಪಶುಪಾಲನೆಯಲ್ಲದೆ ಗಣಿಗಾರಿಕೆಗಳಲ್ಲಿ ದುಡಿಯುತ್ತಿದ್ದಾರೆ. ಕುಟುಂಬಕ್ಕೆ ಕೈಗಾರಿಕಾ ಚಟುವಟಿಕೆಗಳು, ಕುಟುಂಬೇತರ ಕೈಗಾರಿಕೆ ಚಟುವಟಿಕೆಗಳು, ನಿರ್ಮಾಣ ಚಟುವಟಿಕೆಗಳು, ವ್ಯಾಪಾರ, ವಾಣಿಜ್ಯ, ಸಾರಿಗೆ ಸಂಪರ್ಕ ಮುಂತಾದ ಇತರ ಸೇವೆಯಲ್ಲಿ ಜನವರ್ಗ ತೊಡಗಿಸಿ ಕೊಂಡಿದೆ. ಸರಕಾರಿ, ಅರೆಸರಕಾರಿ ಹಾಗೂ ಖಾಸಗಿ ವಲಯದಲ್ಲಿ ಜನವರ್ಗ ದುಡಿಯುತ್ತಿರುವುದನ್ನು ಮನಗಾಣಬಹುದು. ಈ ಜಿಲ್ಲೆಯ ಕಿನ್ನಾಳ ಗೊಂಬೆ ಮತ್ತು ಚೌಕಮಣಿಗಳು ನಾಡಿನಾದ್ಯಂತ ತುಂಬ ಹೆಸರು ಪಡೆದಿವೆ. ಕಿನ್ನಾಳ ಗೊಂಬೆ ಮತ್ತು ಚೌಕಿಗಳಿಗೆ ಕಟ್ಟಿಗೆಯೇ ಬಂಡವಾಳ. ಇಲ್ಲಿನ ಚಿತ್ರಗಾರರು ಕೇವಲ ಚಿತ್ರಗಾರರಾಗಿರದೆ, ಬಡಿಗತನದಲ್ಲೂ ವಿಶೇಷ ಪರಿಣತಿ ಹೊಂದಿದವರಾಗಿದ್ದಾರೆ. ಚಿತ್ರ ತಯಾರಿಸುವ, ಬರೆಯುವ ಮುನ್ನ ಆಕಾರದ ಆ ಆಳತೆಯ ೬೨ ಕಚ್ಚಾ ಆಕೃತಿಯನ್ನು ಬಡಿಗತನದ ಕೌಶಲ್ಯದಿಂದ ಮಾಡುತ್ತಾರೆ. ನಂತರ ಅದಕ್ಕೆ ಬೇಕಾದ ಕಚ್ಚಾವಸ್ತುಗಳನ್ನು ಬಳಸಿ

ಸರಿಹಚ್ಚಿ ಗಟ್ಟಿಗೊಳಿಸಿ ಬಣ್ಣ ಕೊಟ್ಟು ಚಿತ್ರ ಬರೆದು ಕಣ್ಣು, ಕಿವಿ, ಮೂಗು ರೆಕ್ಕೆ ಮೂಡಿಸಿ ಗೊಂಬೆಗಳಿಗೆ ಜೀವ ತುಂಬುತ್ತಾರೆ. ಶಿವ, ಪಾರ್ವತಿ, ಗಣಪತಿ, ರುದ್ರ, ವೀರಭದ್ರ, ನಂದಿ, ಆಕಳು, ಹುಲಿ, ಸಿಂಹ, ಆನೆ, ಒಂಟೆ, ನಾಯಿ, ನರಿ, ಮುಂತಾದ ಪ್ರಾಣಿಗಳನ್ನು ಗಾಳಿ, ಗುಬ್ಬಿ, ಕೋಗಿಲೆ ಮುಂತಾದ ಪಕ್ಷಿಗಳನ್ನು ತಯಾರಿಸುತ್ತಾರೆ. ಗೊಂಬೆಗಳಲ್ಲದೆ ಚೌಕಿಗಳನ್ನು ಕಿನ್ನಾಳದ ಚಿತ್ರಗಾರರು ತಯಾರಿಸುತ್ತಾರೆ. ಇಲ್ಲಿನ ಚೌಕಿ ಮಣಿಗಳು ಷಟ್‌ಭುಜದಲ್ಲಿ, ವೃತ್ತಾಕಾರ ಹಾಗೂ ನಕ್ಷತ್ರಾಕಾರದಲ್ಲೂ ಕಂಡುಬರುತ್ತವೆ. ಕೊಪ್ಪಳ ಜಿಲ್ಲೆ ನೇಕಾರಿಕೆಗೂ ಪ್ರಸಿದ್ಧಿಯನ್ನು ಪಡೆದಿದೆ. ಕೊಪ್ಪಳ ತಾಲೂಕಿನ 'ಭಾಗ್ಯನಗರ' ನೇಕಾರಿಗೆ ಜಿಲ್ಲೆಯಾದ್ಯಂತ ಪ್ರಸಿದ್ಧಿಯಾಗಿದೆ. ಅಲ್ಲದೇ ಕಿನ್ನಾಳ, ಕುಕನೂರು, ಹನುಮಸಾಗರ, ತಾವರಗೇರ, ಅಳವಂಡಿ, ಗಿಣಿಗೇರ ಮೊದಲಾದೆಡೆ ಏಳೆಂಟು ಸಾವಿರ ಕೈಮಗ್ಗಗಳಿವೆ. ಇಷ್ಟೆಲ್ಲಾ ಉತ್ಪಾದನೆಗಳು, ಉದ್ಯೋಗಗಳು ಇದ್ದಾಗಲೂ ಅಭಿವೃದ್ಧಿಯ ದೃಷ್ಟಿಯಿಂದ ಆರ್ಥಿಕ ಮಾನದಂಡದಲ್ಲಿ ಕೊಪ್ಪಳವು ಹಿಂದುಳಿದ ಜಿಲ್ಲೆಯಾಗಿದೆ. "ಡಾ. ಡಿ.ಎಂ ನಂಜುಂಡಪ್ಪ ಸಮಿತಿಯು ರಾಜ್ಯದ ೧೭೫ ತಾಲೂಕುಗಳನ್ನು ಅಭಿವೃದ್ಧಿ ಹೊಂದಿದ, ಹಿಂದುಳಿದ, ಅತಿಹಿಂದುಳಿದ, ಅತ್ಯಂತ ಹಿಂದುಳಿದ ತಾಲೂಕುಗಳನ್ನಾಗಿ ವರ್ಗೀಕರಿಸಿದೆ. ಅದರ ಪ್ರಕಾರ ಗಂಗಾವತಿ ತಾಲೂಕು 'ಹಿಂದುಳಿದ' ಗುಂಪಿಗೆ ಸೇರಿದ್ದರೆ, ಕೊಪ್ಪಳವು 'ಅತಿ ಹಿಂದುಳಿದ' ಗುಂಪಿಗೆ ಸೇರಿದೆ. ಒಟ್ಟಾರೆ ಕೊಪ್ಪಳವು ಹಿಂದುಳಿದ ಜಿಲ್ಲೆ ಎಂಬುದರ ಬಗ್ಗೆ ಯಾವುದೇ ಅನುಮಾನವಿಲ್ಲ. ರಾಜ್ಯದ ೨೭ ಜಿಲ್ಲೆಗಳ ಪೈಕಿ ಗಂಗಾವತಿಯು ೮೧ನೆಯ ಸ್ಥಾನ ಪಡೆದಿದ್ದರೆ, ಕೊಪ್ಪಳವು ೧೩೨ನೇ ಸ್ಥಾನ ಪಡೆದಿದೆ. ಕುಷ್ಟಗಿಯ ಸ್ಥಾನ ೧೬೭. ಆದರೆ ಯಲಬುರ್ಗಾದ ಸ್ಥಾನ ೧೬೮. ಯಾವುದೇ ಅಭಿವೃದ್ಧಿಸೂಚಿಯಿಂದ ಮಾಪನ ಮಾಡಿದರೂ ಕೊಪ್ಪಳ ಜಿಲ್ಲೆಯು ಹಿಂದುಳಿದಿರುವಿಕೆಯು ಸ್ಪಷ್ಟವಾಗಿ ಕಂಡುಬರುತ್ತದೆ.(ಅರ್ಚನಾ, ೨೦೧೭)

**ಆರೋಗ್ಯ:** ಕೊಪ್ಪಳ ಜಿಲ್ಲೆಯ ಆರೋಗ್ಯಕ್ಕೆ ಸಂಬಂಧಿಸಿದಂತೆ ಆತಂಕಕಾರಿ ಸಂಗತಿಯೆಂದರೆ ಜಿಲ್ಲೆಯಲ್ಲಿನ ಜನಸಂಖ್ಯೆಯ ಬೆಳವಣಿಗೆ ತೀವ್ರ ಬೆಳವಣಿಗೆ ಗತಿ. ಈ ಜಿಲ್ಲೆಯಲ್ಲಿ ಮಹಿಳೆಯರ ವಿವಾಹದ ವಯಸ್ಸು ಕೇವಲ ೧೮.೩ ವರ್ಷ. ಒಟ್ಟು ಪ್ರಜನೋತ್ಪತ್ತಿ ಪ್ರಮಾಣ ೪.೨೫. ಜನನ ಪ್ರಮಾಣಕ್ಕೆ ಸಂಬಂಧಿಸಿದಂತೆ ರಾಯಚೂರು ಜಿಲ್ಲೆಗೆ ರಾಜ್ಯದಲ್ಲಿ ಎರಡನೆಯ ಸ್ಥಾನವಿದೆ. ಈ ಮೂರು ಸಂಗತಿಗಳು ಜಿಲ್ಲೆಯ ಆರೋಗ್ಯ ಸುಸ್ಥಿತಿಯಲ್ಲಿಲ್ಲ ಎಂಬುದನ್ನು ಸೂಚಿಸುತ್ತವೆ. ಪ್ರಜನೋತ್ಪತ್ತಿಯ ಪ್ರಮಾಣ ಅಧಿಕವಿದೆ. ಎಂದರೆ ಅರ್ಥ ಈ ಜಿಲ್ಲೆಯಲ್ಲಿ ಮಹಿಳೆಯರು ತಮ್ಮ ಸಂತಾನೋತ್ಪತ್ತಿ ಕಾಲಾವಧಿಯಲ್ಲಿ ಹೆಚ್ಚು ಬಾರಿ ಗರ್ಭಧರಿಸುತ್ತಾರೆ ಎಂಬುದಾಗಿದೆ. ಇದು ಮಹಿಳೆಯರ ಆರೋಗ್ಯ ದೃಷ್ಟಿಯಿಂದ ಆಘಾತಕಾರಿ ಸಂಗತಿಯಾಗಿದೆ. ಶಿಶುಗಳ ಮರಣ ಮತ್ತು ಮಕ್ಕಳ ಮರಣ ಪ್ರಮಾಣವನ್ನು ಆರೋಗ್ಯ ಸೂಚಿಯಾಗಿ ಬಳಸುವುದು ವಾಡಿಕೆಯಲ್ಲಿದೆ. ಶಿಶುಗಳ ಮರಣ ಪ್ರಮಾಣ ಮತ್ತು ಮಕ್ಕಳ ಮರಣ ಪ್ರಮಾಣಗಳ ನಡುವೆ ವ್ಯತ್ಯಾಸ ಇದೆ. ಹುಟ್ಟಿದ ೧೦೦೦ ಶಿಶುಗಳಲ್ಲಿ ೨ ವರ್ಷ ತುಂಬುವುದರೊಳಗೆ ಅಸು ನೀಗುವ ಶಿಶುಗಳ ಸಂಖ್ಯೆಯನ್ನು ಶಿಶು ಮರಣ ಪ್ರಮಾಣ ಎನ್ನಲಾಗಿದೆ.

ಹುಟ್ಟಿದ ೧೦೦೦ ಮಕ್ಕಳಲ್ಲಿ ೫ನೆಯ ವರ್ಷ ತುಂಬುವುದರೊಳಗಾಗಿ ಅಸು ನೀಗುವ ಮಕ್ಕಳ ಸಂಖ್ಯೆಯನ್ನು ಮಕ್ಕಳ ಮರಣ ಪ್ರಮಾಣ ಎಂದು ಕರೆಯಲಾಗಿದೆ. ಶಿಶುಗಳ ಮರಣ ಪ್ರಮಾಣದಲ್ಲಿ ಇಲ್ಲದೆ ಇರುವ 'ಲಿಂಗತಾರತಮ್ಯ'ವು ಮಕ್ಕಳ ಮರಣ ಪ್ರಮಾಣದಲ್ಲಿ ಕಂಡುಬರುತ್ತಿದೆ. ಕರ್ನಾಟಕದ ಏಳು ಜಿಲ್ಲೆಗಳಲ್ಲಿ ಮಾತ್ರ ಶಿಶುಗಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವಿದೆ. ಆದರೆ ಮಕ್ಕಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು ೧೨ ಜಿಲ್ಲೆಗಳಲ್ಲಿ ಕಂಡುಬಂದಿದೆ. ಹುಟ್ಟಿನ ಸಂದರ್ಭದಲ್ಲಿ ಇಲ್ಲದ ಲಿಂಗತಾರತಮ್ಯ ಸ್ತ್ರೀಯು ಬೆಳೆದಂತೆಲ್ಲಾ ಅದು ತೀವ್ರವಾಗುವ ಸಂಗತಿ ಇಲ್ಲಿದೆ. ಸಾಮಾನ್ಯವಾಗಿ ಹೆಣ್ಣು ಶಿಶುಗಳ ಮರಣ ಪ್ರಮಾಣ ಹಾಗೂ ಹೆಣ್ಣುಮಕ್ಕಳ ಮರಣ ಪ್ರಮಾಣಗಳು ಗಂಡು ಶಿಶು ಹಾಗೂ ಗಂಡುಮಕ್ಕಳ ಮರಣ ಪ್ರಮಾಣಕ್ಕಿಂತ ಕಡಿಮೆ ಇರಬೇಕು. ಇದು ಜೈವಿಕ ಲಕ್ಷಣ. ಆದರೆ ಹೆಣ್ಣು ಶಿಶು ಹಾಗೂ ಹೆಣ್ಣುಮಕ್ಕಳ ಮರಣ ಪ್ರಮಾಣಕ್ಕಿಂತ ಅಧಿಕವಿರುವುದು ಲಿಂಗತಾರತಮ್ಯದ ಸೂಚಿಯಾಗಿದೆ. ಈ ಲಿಂಗತಾರತಮ್ಯವು ಸ್ತ್ರೀಯರ ವಯಸ್ಸಿನ ಜೊತೆ ತೀವ್ರಗೊಳ್ಳುತ್ತಾ ನಡೆಯುವ ಸಂಗತಿ ನಮ್ಮ ಸಮಾಜದಲ್ಲಿದೆ. ರಾಯಚೂರು ಜಿಲ್ಲೆಯಲ್ಲೂ ಲಿಂಗ ತಾರತಮ್ಯ ತೀವ್ರವಾಗಿರುವುದನ್ನು ಕಾಣಬಹುದು.

**ಸಾಕ್ಷರತೆ ಮತ್ತು ಶಿಕ್ಷಣ:** ಸಾಕ್ಷರತೆ ಮತ್ತು ಅಭಿವೃದ್ಧಿಗಳ ನಡುವಿನ ಸಂಬಂಧವನ್ನು ವಿವಿಧ ನೆಲೆಗಳಲ್ಲಿ ಚರ್ಚಿಸಲು ಸಾಧ್ಯ. ಸಾಕ್ಷರತೆಯನ್ನು ಅಭಿವೃದ್ಧಿಯ 'ಸಾಧನ'ವೆಂದೂ, 'ಸಂಪನ್ಮೂಲ'ವೆಂದೂ 'ಮಾನವ ಬಂಡವಾಳ'ವೆಂದೂ ಪರಿಭಾವಿಸುವ ಪರಿಯೊಂದು ಸಾಂಪ್ರದಾಯಿಕ ಅಭಿವೃದ್ಧಿ ಸಂಕಥನ ದಲ್ಲಿ ರೂಢಿಯಲ್ಲಿದೆ. ಸಾಕ್ಷರತೆಯು ಜನರನ್ನು ಸುಶಿಕ್ಷಿತರನ್ನಾಗಿ ಮಾಡುತ್ತದೆ. ಅವರ ಉತ್ಪಾದನಾ ಕ್ಷಮತೆಯನ್ನು-ಕುಶಲತೆಯನ್ನು ಉತ್ತಮ ಪಡಿಸುತ್ತದೆ. ಜನರನ್ನು ಆಧುನಿಕರನ್ನಾಗಿಸುತ್ತದೆ-ನಾಗರಿಕ ರನ್ನಾಗಿಸುತ್ತದೆ ಅಭಿವೃದ್ಧಿಯ ಗತಿಯನ್ನು ಉತ್ತಮಪಡಿಸುತ್ತದೆ-ಎಂದೆಲ್ಲಾ ವಾದಿಸಲಾಗುತ್ತಿದೆ. 'ಸಾಕ್ಷರತೆ' ಯನ್ನು ಆಧುನೀಕರಣದ 'ಹರಿಕಾರ'ನೆಂದೂ ಹೇಳಲಾಗಿದೆ. ಇವೆಲ್ಲವೂ ಒಂದು ನೆಲೆಯಲ್ಲಿ ಸರಿಯಾದ ವಿಚಾರಗಳೇ ಆಗಿವೆ. ಸಾಕ್ಷರತೆಯು ಮೇಲೆ ತಿಳಿಸಿರುವ ಎಲ್ಲ ನಿಯೋಗಗಳನ್ನು ನಿರ್ವಹಿಸುತ್ತಲೇ ಬಂದಿದೆ. ಆದರೆ ಇದು ಸಾಕ್ಷರತೆಯ ಒಂದು ಮುಖ ಮಾತ್ರವಾಗಿದೆ. ಸಾಂಪ್ರದಾಯಿಕ-ಮೂಲಧಾರೆ ಅಭಿವೃದ್ಧಿ ಸಂಕಥನದಲ್ಲಿ ಹೀಗೆ ಸಾಕ್ಷರತೆಯ ಒಂದು ಮುಖವನ್ನು ಮಾತ್ರ ಪರಿಗಣಿಸುತ್ತಾ ಬರಲಾಗಿದೆ.

**ಕೋಷ್ಟಕ ೩.೫. ಜಿಲ್ಲೆಯ ಶಿಕ್ಷಣದ ಮಾಹಿತಿ: ಅಕ್ಷರಸ್ಥರು ಮತ್ತು ಸಾಕ್ಷರತಾ ಪ್ರಮಾಣ**

| ಕ್ರ.ಸಂ. | ಶಿಕ್ಷಣ (೨೦೧೧ರ ಜನಗಣತಿಯ ಪ್ರಕಾರ) ೧. ಅಕ್ಷರಸ್ಥರು ೨. ಸಾಕ್ಷರತಾ ಪ್ರಮಾಣ | | | | | | | | |
|---|---|---|---|---|---|---|---|---|---|
| | ಗ್ರಾಮೀಣ | | | ನಗರ | | | ಒಟ್ಟು | | |
| | ಗಂಡು | ಹೆಂಣ್ಣು | ಒಟ್ಟು | ಗಂಡು | ಹೆಂಣ್ಣು | ಒಟ್ಟು | ಗಂಡು | ಹೆಂಣ್ಣು | ಒಟ್ಟು |
| ೧ | ೩೮೨೨೭೦ | ೨೬೮೭೩೧ | ೬೫೧೦೦೧ | ೮೬೫೧೫ | ೭೧೫೬೯ | ೧೫೮೦೮೪ | ೪೬೮೭೮೫ | ೩೪೦೩೦೦ | ೮೦೯೦೮೫ |
| ೨ | ೭೭.೧೨ | ೫೪.೮೫ | ೬೬.೦೫ | ೮೫.೪ | ೭೦.೯ | ೭೮.೦೩ | ೭೮.೫೪ | ೫೭.೫೫ | ೬೮.೦೯ |

ಆಕರ: ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ,೧೪/೨೦೧೫-೧೬

ಶಿಕ್ಷಣ ಮತ್ತು ಸಾಕ್ಷರತೆಯನ್ನು ಸೂಕ್ಷ್ಮವಾಗಿ ನೋಡಿದರೆ ೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯ ಒಟ್ಟು ೧೩,೮೯,೯೨೦ರಷ್ಟು ಜನಸಂಖ್ಯೆಯಲ್ಲಿ ೮,೦೯,೦೮೫ರಷ್ಟು ಜನಸಂಖ್ಯೆ ಸಾಕ್ಷರತೆಯನ್ನು ಹೊಂದಿದೆ. ಅಂದರೆ ಜಿಲ್ಲೆಯ ಜನರು ಅಂದರೆ ಒಟ್ಟು ೪೬೮೭೮೫ ರಷ್ಟಿಗೆ ಶೇ. ೭೮.೫೪ರಷ್ಟು ಗಂಡಸರು ಅಕ್ಷರಸ್ಥರಾಗಿದ್ದಾರೆ ಮತ್ತು ೩೪೦೩೦೦ ರಷ್ಟಿಗೆ ಶೇಕಡಾ ೫೭.೫೫ ರಷ್ಟು ಜನ ಹೆಂಗಸರು ಅಕ್ಷರಸ್ಥರಾಗಿದ್ದಾರೆ. ಈ ಸ್ಥಿತಿಗತಿಯನ್ನ ಇನ್ನಷ್ಟು ಅರ್ಥ ಮಾಡಿಕೊಳ್ಳುವುದಾರೆ ೧೯೯೮ರಲ್ಲಿ ಆಲ್‌ಫ್ರೆಡ್ ನೊಬೆಲ್ ಸ್ಮಾರಕ ಬ್ಯಾಂಕ್ ಆಫ್ ಸ್ವೀಡನ್‌ನ ಅರ್ಥಶಾಸ್ತ್ರದ ಪ್ರಶಸ್ತಿಯನ್ನು ಗಳಿಸಿರುವ ಅಮರ್ತ್ಯ ಸೇನ್ ಅವರು ಮೂಲಧಾರೆ ಅಭಿವೃದ್ಧಿ ಸಂಕಥನಕ್ಕೆ ಭಿನ್ನವಾದ ನೆಲೆಯಲ್ಲಿ ಸಾಕ್ಷರತೆಯನ್ನು ಪರಿಭಾವಿಸುವ ಬಗೆಯೊಂದನ್ನು ಬೆಳೆಸಿದ್ದಾರೆ. ಅವರ ಪ್ರಕಾರ ಸಾಕ್ಷರತೆಯು ಅಭಿವೃದ್ಧಿಯ 'ಸಾಧನ'ವೂ ಹೌದು ಮತ್ತು 'ಸಾಧ್ಯ'ವೂ ಹೌದು. ಅದು ತನ್ನಷ್ಟಕ್ಕೆ ತಾನೆ ಮಹತ್ವದ್ದಾಗಿದೆ. ಅದು ಸ್ವಾಭಿಮಾನದ ಸಂಕೇತವೂ ಹೌದು. ಅಭಿವೃದ್ಧಿಯು ಅಭಿವ್ಯಕ್ತವಾಗುವ ಪರಿಯೇ ಸಾಕ್ಷರತೆ, ಕೇವಲ ಶ್ರಮಶಕ್ತಿಯ ಕಾರ್ಯಕ್ಷಮತೆಯನ್ನು, ಕುಶಲತೆಯನ್ನು ಉತ್ತಮಪಡಿಸುತ್ತದೆ ಎಂಬ ಕಾರಣಕ್ಕಾಗಿ ಅದು ಮಹತ್ವವಾಗಬೇಕಾಗಿಲ್ಲ. ವಿಷಾದದ ಸಂಗತಿಯೆಂದರೆ ಸಾಂಪ್ರದಾಯಿಕ ಅಭಿವೃದ್ಧಿ ಸಂಕಥನದಲ್ಲಿ ಹಾಗೂ ನಮ್ಮ ಸಮಾಜದ ಸಂಧರ್ಭದಲ್ಲಿ ಅಭಿವೃದ್ಧಿಯ ಸಾಧನವಾಗಿಯೇ ಮಹತ್ವ ಪಡೆದಿದೆ. ಇದನ್ನು ಅಮರ್ತ್ಯ ಸೇನ್ ಖಂಡಿಸುತ್ತಾರೆ. ಸಾಕ್ಷರತೆಯು ಒಂದು ಗುಣ, ಮನುಷ್ಯನಿಗೆ ಧಾರಣಶಕ್ತಿಯನ್ನು ಒದಗಿಸುವ ಶಕ್ತಿ. ಬದುಕನ್ನು ಉತ್ತಮಪಡಿಸಿಕೊಳ್ಳಲು ಇರುವ ಅವಕಾಶಗಳನ್ನು ತಮ್ಮದು ಮಾಡಿಕೊಳ್ಳಲು ಜನರಿಗೆ ಸಾಕ್ಷರತೆಯು ಶಕ್ತಿಯನ್ನು-ಸಾಮರ್ಥ್ಯವನ್ನು ಒದಗಿಸುತ್ತದೆ. ಬದುಕನ್ನು ಉತ್ತಮಪಡಿಸಿಕೊಳ್ಳಲು ಇರುವ ಅವಕಾಶಗಳನ್ನು ಸಾಕ್ಷರತೆ ವರ್ಧಿಸುತ್ತದೆ. ಇದರಿಂದಾಗಿ ಬದುಕನ್ನು ಉತ್ತಮಪಡಿಸಿಕೊಳ್ಳಲು ಇರುವ ಅವಕಾಶಗಳಲ್ಲಿ ತಮಗೆ ಬೇಕಾದುದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಅದು ಜನರಿಗೆ ಒದಗಿಸುತ್ತದೆ. ಆದ್ದರಿಂದ ಸಾಕ್ಷರತೆ ಎಂದರೆ 'ಸ್ವಾತಂತ್ರ್ಯ'ವೆಂದೂ ಹೇಳಬಹುದು. ಈ ಕಾರಣಕ್ಕೆ ಅಮರ್ತ್ಯ ಸೇನ್ ಅವರು ಸಾಕ್ಷರತೆಯೇ ಅಭಿವೃದ್ಧಿ ಎನ್ನುತ್ತಾರೆ. ಧಾರಣಶಕ್ತಿಯ ಒಂದು ಅಂಗ ಸಾಕ್ಷರತೆ, ಧಾರಣಶಕ್ತಿಯನ್ನು ನಿರ್ಧರಿಸುವ ಒಂದು ಅಂಶ ಸಾಕ್ಷರತೆ, 'ಧಾರಣಶಕ್ತಿಯ ದುಸ್ಥಿತಿ'ಯೇ ಬಡತನವೆಂದು ಸೇನ್ ಅವರು ಬಡತನವನ್ನು ನಿರ್ವಚಿಸಿದ್ದಾರೆ.[೨] **(ಟಿ.ಆರ್. ಚಂದ್ರಶೇಖರ್, ೧೯೯೯)**

**ಆಡಳಿತ:** ಕೊಪ್ಪಳವು ಜಿಲ್ಲೆಯಾಗಿ ರಚನೆಯಾಗುವುದಕ್ಕಿಂತ ಪೂರ್ವದಲ್ಲಿ ಪುರಸಭೆಯನ್ನು ಸ್ಥಳೀಯ ಸಂಸ್ಥೆಯಾಗಿ ಹೊಂದಿತ್ತು. ಜಿಲ್ಲೆಯಾದ ನಂತರ ನಗರಸಭೆಯಾಗಿ ರಚನೆಯಾಯಿತು. ತನ್ನ ಸ್ಥಳೀಯ ಆಡಳಿತವನ್ನು ನೋಡಿಕೊಳ್ಳಲು ಪ್ರಸ್ತುತ ೩೧ ವಾರ್ಡ್‌ಗಳನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ನಾಲ್ಕು ತಾಲೂಕುಗಳನ್ನು ಹೊಂದಿದೆ. ಆಡಳಿತಾತ್ಮಕ ಅನೂಕೂಲತೆಗಾಗಿ ಕೊಪ್ಪಳ, ಗಂಗಾವತಿ, ಕುಷ್ಟಗಿ, ಯಲಬುರ್ಗಾ ಮತ್ತು ಕನಗಿರಿ ಎಂದು ಒಟ್ಟು ೫ ವಿಧಾನಸಭಾ ಕ್ಷೇತ್ರಗಳನ್ನು ಮತ್ತು ಒಂದು ಲೋಕಸಭಾ ಕ್ಷೇತ್ರವನ್ನು ಒಳಗೊಂಡಿದೆ. ಜಿಲ್ಲೆಯು ಮೂರು ಹಂತದ

ಪಂಚಾಯತ್ ವ್ಯವಸ್ಥೆಯನ್ನು ಒಳಗೊಂಡಿದೆ. ಜಿಲ್ಲಾಮಟ್ಟದಲ್ಲಿ ಜಿಲ್ಲಾಪರಿಷತ್, ತಾಲೂಕುಮಟ್ಟದಲ್ಲಿ ನಾಲ್ಕು ತಾಲೂಕು ಪಂಚಾಯಿತಿಗಳನ್ನು ಹೊಂದಿದೆ. ಜಿಲ್ಲೆಯು ೫೯೪ ಗ್ರಾಮಗಳನ್ನು ಹೊಂದಿದೆ ಮತ್ತು ೧೩೪ ಗ್ರಾಮಪಂಚಾಯಿತಿಗಳನ್ನು ಹೊಂದಿದೆ.[೬] **(ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ.೧೪/೨೦೧೫-೧೬)**

## ೩.೫. ಕೊಪ್ಪಳ ಜಿಲ್ಲೆಯ ತಾಲೂಕುಗಳ ಸಂಕ್ಷಿಪ್ತ ವಿವರಣೆ

**ಗಂಗಾವತಿ:** ಗಂಗಾವತಿಯು ಒಂದು ಚದರ ಕಿ.ಮೀ.ಗೆ ೩೫೩ ಜನರಂತೆ ಒಟ್ಟು ೧೩೧೧.೨೧ ಚ.ಕಿ.ಗೆ ೪,೫೯,೯೦೫ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಅಂದರೆ ಕೊಪ್ಪಳದ ಒಟ್ಟು ಜನಸಂಖ್ಯೆಯಲ್ಲಿ ಗಂಗಾವತಿಯು ಶೇ. ೩೩.೦೮ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಗಂಗಾವತಿಯ ಒಟ್ಟು ಜನಸಂಖ್ಯೆಯಲ್ಲಿ ನಗರವು ಒಟ್ಟು ೧,೧೪,೬೪೨ರಷ್ಟು ಅಂದರೆ ಶೇ.೨೫ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೧,೭೨,೩೯೭ರಷ್ಟು ಜನ ಮಹಿಳೆಯರಿದ್ದಾರೆ. ಗಂಗಾವತಿಯ ಒಟ್ಟು ಜನಸಂಖ್ಯೆ ಯಲ್ಲಿ ೮೦,೭೭೦ರಷ್ಟು ಅಂದರೆ ಶೇ.೧೪.೦೪ರಷ್ಟು ಜನ ಪರಿಶಿಷ್ಟ ಜಾತಿಯನ್ನು ಹೊಂದಿದೆ. ೬೪.೬೧೫ರಷ್ಟು ಅಂದರೆ ಶೇ.೧೪.೦೪ರಷ್ಟು ಜನ ಪರಿಶಿಷ್ಟ ಪಂಗಡದವರಿದ್ದಾರೆ. ಲಿಂಗಾನುಪಾತಕ್ಕೆ ಸಂಬಂಧಿಸಿದಂತೆ ೧೦೦೦ ಜನ ಪುರುಷರಿಗೆ ೯೮೮ ಜನ ಮಹಿಳೆಯರಿದ್ದಾರೆ. ಗಂಗಾವತಿಯು ಒಟ್ಟು ೧೫೭ ಗ್ರಾಮಗಳನ್ನು ಹೊಂದಿದ್ದು ಗ್ರಾಮಮಟ್ಟದ ಆಡಳಿತದ ಅನುಕೂಲತೆಗಾಗಿ ೩೮ ಗ್ರಾಮ ಪಂಚಾಯಿತಿಗಳನ್ನು ಹೊಂದಿದೆ. ನಗರಭಾಗದ ಆಡಳಿತಕ್ಕಾಗಿ ನಗರಸಭೆಯನ್ನು ಹೊಂದಿದ್ದು ತನ್ನ ೩೧ ವಾರ್ಡ್‌ಗಳ ಮೂಲಕ ನಗರದ ಅಭಿವೃದ್ಧಿಗಾಗಿ ಶ್ರಮವಹಿಸುತ್ತಿದೆ. ಕೃಷಿ ಅಭಿವೃದ್ಧಿ ಚಟುವಟಿಕೆಗಳಲ್ಲಿ ಗಂಗಾವತಿಯು ಕೇಂದ್ರ ಭಾಗವಾಗಿದ್ದು, ಗಂಗಾವತಿಯು ಕಿಷ್ಕಿಂದೆ, ಆನೆಗೊಂದಿ, ಕನಕಗಿರಿ, ಪುರ ಹೀಗೆ ಇತರ ಐತಿಹಾಸಿಕ ಸ್ಥಳಗಳನ್ನು ಹೊಂದಿದ್ದು ವಿಶ್ವವಿಖ್ಯಾತ ಹಂಪಿಯಿಂದ ಕೇವಲ ೧೩ ಕಿ.ಮೀ. ದೂರದಲ್ಲಿದೆ.

**ಕುಷ್ಟಗಿ ತಾಲೂಕಿನ ಸಂಕ್ಷಿಪ್ತ ಪರಿಚಯ:** ಕುಷ್ಟಗಿಯು ಕೊಪ್ಪಳ ಜಿಲ್ಲೆಯ ಮತ್ತೊಂದು ತಾಲೂಕಾಗಿದೆ. ಇಲ್ಲಿ ಮಧ್ಯಮವರ್ಗದ ಜನರು ಹೆಚ್ಚಾಗಿ ವಾಸಿಸುತ್ತಿದ್ದು ಅಭಿವೃದ್ಧಿ ಹೊಂದುತ್ತಿರುವ ಪಟ್ಟಣವಾಗಿದೆ. ಕುಷ್ಟಗಿ ತಾಲೂಕಿನಲ್ಲಿ ೧ ಚ.ಕಿ.ಮೀ.ಗೆ ೨೦೮ ಜನರಂತೆ ಒಟ್ಟು ೧೩೭೦,೩೮ ಚ.ಕಿ.ಮೀ.ಗೆ ೨,೮೪,೭೯೨ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಈ ತಾಲೂಕಿನ ಜನಸಂಖ್ಯೆಗೆ ಸಂಬಂಧಿಸಿದಂತೆ ಒಟ್ಟು ೨,೮೪, ೭೯೨ರಷ್ಟು ಜನಸಂಖ್ಯೆಯಲ್ಲಿ ನಗರವು ಒಟ್ಟು ೨೪,೮೭೮ರಷ್ಟು ಅಂದರೆ ಶೇ.೮.೭೩ರಷ್ಟು ಜನಸಂಖ್ಯೆ ಹೊಂದಿದೆ. ಇದರಲ್ಲಿ ೧೨.೪೯೩ ಜನ ಅಂದರೆ ಶೇ. ೫೦ರಷ್ಟು ಜನ ಗಂಡಸರಿದ್ದಾರೆ ಗ್ರಾಮಗಳು ೨,೫೯,೯೧೪ರಷ್ಟು ಅಂದರೆ ಶೇ.೯೧.೨೬ರಷ್ಟು ಜನಸಂಖ್ಯೆ ಹೊಂದಿದೆ. ಇದರಲ್ಲಿ ೧,೩೧,೭೩೪ ಜನ ಅಂದರೆ ಶೇ. ೫೦ರಷ್ಟು ಜನ ಪುರುಷರು ಮತ್ತು ೧.೨೮.೧೮೦ ಜನ ಅಂದರೆ ಶೇ. ೪೯.೩೧ರಷ್ಟು ಜನ ಮಹಿಳೆಯರಿದ್ದಾರೆ. ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ೪೫.೨೬೬ರಷ್ಟು ಅಂದರೆ ಶೇ. ೧೫.೮೯ರಷ್ಟು ಜನ ಪರಿಶಿಷ್ಟ ಜಾತಿಯವರಿದ್ದಾರೆ.

ಲಿಂಗಾನುಪಾತಕ್ಕೆ ಸಂಬಂಧಿಸಿದಂತೆ ೧೦೦೦ ಜನ ಪುರುಷರಿಗೆ ೯೮೪ ಜನ ಮಹಿಳೆಯರಿದ್ದಾರೆ. ಕುಷ್ಟಗಿ ತಾಲೂಕಿನ ಆಡಳಿತಕ್ಕೆ ಸಂಬಂಧಿಸಿದಂತೆ ಕುಷ್ಟಗಿ ಪುರಸಭೆಯು ಮೊಟ್ಟಮೊದಲು ೧೯೬೮-೬೯ರಿಂದ ೧೯೮೪ರವರೆಗೆ ಪುರಸಭೆ ಹಾಗೂ ೧೯೮೬-೮೭ರಿಂದ ೧೯೯೫ರವರೆಗೆ ಮಂಡಲ ೬೫ ಪಂಚಾಯತಿಯಾಗಿ ಪರಿವರ್ತನೆಯಾಯಿತು. ೨೦೦೧ರ ಜನಸಂಖ್ಯೆ ಆಧಾರದ ಪತ್ರಸಂಖ್ಯೆ: ಯುಡಿಡಿ, ಎಂ.ಎಲ್.ಆರ್.ಡಿ. ಬೆಂಗಳೂರು ಅವರ ಆದೇಶಾನುಸಾರ ದಿನಾಂಕ:೧೭.೧.೨೦೦೭ರಿಂದ ಪುರಸಭೆಯಾಗಿ ಪರಿವರ್ತನೆಯಾಗಿದೆ. ಕುಷ್ಟಗಿ ಪಟ್ಟಣದ ವ್ಯಾಪ್ತಿಯಲ್ಲಿ ೨೩ ವಾರ್ಡುಗಳಿದ್ದು ೨೩ ಚುನಾಯಿತ ಸದಸ್ಯರಿರುತ್ತಾರೆ.

**ಕೊಪ್ಪಳ ತಾಲೂಕಿನ ಪರಿಚಯ:** ಕೊಪ್ಪಳ ತಾಲೂಕು ೩೭೭೭೮೧ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಅಂದರೆ ಕೊಪ್ಪಳದ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಕೊಪ್ಪಳ ತಾಲೂಕು ಶೇ. ೨೭.೧೮ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೧೮೬೮೭೪ರಷ್ಟು ಜನ ಮಹಿಳೆಯರಿದ್ದಾರೆ ಮತ್ತು ಒಟ್ಟು ಪುರುಷರ ಜನಸಂಖ್ಯೆಯಲ್ಲಿ ೧೯೦೯೦೭ರಷ್ಟಿದೆ. ನಂತರ ಶೇ. ೧೮.೬೧ರಷ್ಟು ಜನ ಪರಿಶಿಷ್ಟ ಜಾತಿಯನ್ನು ಹೊಂದಿದೆ. ಶೇ. ೧೧.೮೨ರಷ್ಟು ಜನ ಪರಿಶಿಷ್ಟ ಪಂಗಡದವರಿದ್ದಾರೆ. ಲಿಂಗಾನುಪಾತಕ್ಕೆ ಸಂಬಂಧಿಸಿದಂತೆ ೧೦೦೦ ಜನ ಪುರುಷರಿಗೆ ೯೮೫ ಜನ ಮಹಿಳೆಯರಿದ್ದಾರೆ. ಕೊಪ್ಪಳ ಒಟ್ಟು ೧೪೨ ಗ್ರಾಮಗಳನ್ನು ಹೊಂದಿದ್ದು ಗ್ರಾಮಮಟ್ಟದ ಆಡಳಿತದ ಅನುಕೂಲತೆಗಾಗಿ ೪೦ ಗ್ರಾಮ ಪಂಚಾಯಿತಿಗಳನ್ನು ಹೊಂದಿದೆ. ನಗರ ಭಾಗದ ಆಡಳಿತಕ್ಕಾಗಿ ನಗರಸಭೆಯನ್ನು ಹೊಂದಿದ್ದು ತನ್ನ ೫೨ ವಾರ್ಡ್‌ಗಳ ಮೂಲಕ ನಗರದ ಅಭಿವೃದ್ಧಿಗಾಗಿ ಶ್ರಮವಹಿಸುತ್ತಿದೆ. ಕೊಪ್ಪಳವು ಕೊಪ್ಪಳ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲೊಂದಾಗಿದೆ. ಕೃಷಿ ಅಭಿವೃದ್ಧಿ ಚಟುವಟಿಕೆಗಳಲ್ಲಿ, ಶಿಕ್ಷಣ ಮತ್ತು ಕೈಗಾರಿಕೆ ಮತ್ತು ವ್ಯಾಪಾರ ಕೇಂದ್ರ ಭಾಗವಾಗಿದ್ದು, ಮತ್ತು ಪ್ರವಾಸಿ ಕೇಂದ್ರವು ಸಹ ಆಗಿದೆ.

**ಯಲಬುರ್ಗಾ ತಾಲೂಕಿನ ಪರಿಚಯ:** ಯಲಬುರ್ಗಾ ತಾಲೂಕಿನಲ್ಲಿ ೧ ಚ.ಕಿ.ಮೀ.ಗೆ ೧೮೦ ಜನರಂತೆ ಒಟ್ಟು ೧,೪೮,೯೬೬ ಚ.ಕಿ.ಮೀ.ಗೆ ೨,೬೭,೪೪೨ರಷ್ಟು ಜನಸಂಖ್ಯೆ ಹೊಂದಿದೆ. ಅಂದರೆ ಕೊಪ್ಪಳದ ಒಟ್ಟು ಜನಸಂಖ್ಯೆಯಲ್ಲಿ ಯಲಬುರ್ಗಾ ೨.೬೭.೪೪೨ರಷ್ಟು ಅಂದರೆ ಶೇ.೧೯.೨೪ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಅಂದರೆ ಕೊಪ್ಪಳ ಜಿಲ್ಲೆಯ ಒಟ್ಟು ಕುಟುಂಬಗಳಲ್ಲಿ ಶೇ. ೧೮,೪೦೫ರಷ್ಟು ಕುಟುಂಬಗಳನ್ನು ಯಲಬುರ್ಗಾ ಹೊಂದಿದೆ. ಯಲಬುರ್ಗಾದ ಒಟ್ಟು ಜನಸಂಖ್ಯೆಯಲ್ಲಿ ೫೨.೦೦೯ರಷ್ಟು ಅಂದರೆ ಶೇ. ೧೯.೪೫ರಷ್ಟು ಜನ ಪರಿಶಿಷ್ಟ ಜಾತಿಗೆ ಸೇರಿದ್ದಾರೆ. ೨೯.೪೬೫ ಜನ ಅಂದರೆ ಶೇ. ೧೧.೦೧ರಷ್ಟು ಜನ ಪರಿಶಿಷ್ಟ ಪಂಗಡದವರಾಗಿದ್ದಾರೆ. ಲಿಂಗಾನುಪಾತಕ್ಕೆ ಸಂಬಂಧಿಸಿದಂತೆ ಪ್ರತಿ ೧೦೦೦ ಜನ ಪುರುಷರಿಗೆ ೯೮೨ ಜನ ಮಹಿಳೆಯರಿದ್ದಾರೆ. ಯಲಬುರ್ಗಾ ತಾಲೂಕು ಸ್ಥಳೀಯ ಆಡಳಿತದ ಅನುಕೂಲಕ್ಕಾಗಿ ಪ್ರಸ್ತುತ ಪಟ್ಟಣಪಂಚಾಯಿತಿಯನ್ನು ಹೊಂದಿದೆ. ೨೩ ವಾರ್ಡ್‌ಗಳನ್ನು ಹೊಂದಿದ್ದು ೨೩ ಜನ ಸದಸ್ಯರನ್ನು ಹೊಂದಿದೆ.

## ಮುಕ್ತಾಯ

ಕೊಪ್ಪಳ ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ಸೂಕ್ಷ್ಮವಾಗಿ ಯೋಚಿಸಬೇಕಿದೆ. ಮೊಟ್ಟ ಮೊದಲು ಶಿಕ್ಷಣಕ್ಕೆ ಮತ್ತು ಇತರೆ ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಬೇಕು. ಅಭಿವೃದ್ಧಿಯನ್ನು ಲಿಂಗಸಂಬಂಧಿ ಹಿನ್ನೆಲೆಯಿಂದ ಕೂಡಾ ನೋಡುವ ಅಗತ್ಯವಿದೆ. ರಾಜ್ಯ ಸರ್ಕಾರವು ಕೊಪ್ಪಳ ಜಿಲ್ಲೆಯ ಅಭಿವೃದ್ಧಿಗೆ ಇತರೆ ಜಿಲ್ಲೆಗಳಿಗಿಂತ ಹೆಚ್ಚಿನ ಗಮನ ಹರಿಸಬೇಕು. ಕೊಪ್ಪಳ ಜಿಲ್ಲೆಯ ಭಾಗವು ತುಂಬಾ ಹಿಂದುಳಿದ್ದಿದ್ದು ಮತ್ತು ಕಷ್ಟಕರವಾದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಇಲ್ಲಿ ಗಮನಿಸಬಹುದು. ಇಲ್ಲಿ ನಾಲ್ಕು ತಾಲೊಕುಗಳಿವೆ ಅವು- ಕೊಪ್ಪಳ, ಕುಷ್ಟಗಿ, ಯಲಬುರ್ಗ ಮತ್ತು ಗಂಗಾವತಿ. ೨೦೧೧ ಜನಗಣತಿಯ ಪ್ರಕಾರ ಇಲ್ಲಿಯ ಒಟ್ಟು ಜನಸಂಖ್ಯೆ ೧೩,೯೧,೨೯೨, ಅದರಲ್ಲಿ ೭,೦೧,೪೭೯ ಗಂಡಸರು ಮತ್ತು ೬,೮೯,೮೧೩ ಹೆಂಗಸರು ಇದ್ದಾರೆ. ಲಿಂಗಾನುಪಾತ ೧೦೦೦ ಕ್ಕೆ ೯೮೩ರಷ್ಟಿದೆ. ಸಾಕ್ಷರತಾ ಪ್ರಮಾಣ ಶೇ ೬೭.೨೮ರಷ್ಟಿದೆ.[2] **(ಕರ್ನಾಟಕ ಜನಗಣತಿ ಮಾಹಿತಿ, ೨೦೧೧)** ಈ ಭಾಗವು ಒಣಭೂಮಿಯನ್ನು ಹೊಂದಿದ್ದು, ಗಂಗಾವತಿಯ ಕೆಲವು ಪ್ರದೇಶವನ್ನು ಬಿಟ್ಟರೆ ಉಳಿದೆಲ್ಲಾ ಭೂಮಿಯು ಮಳೆಯ ನೀರನ್ನು ಆಶ್ರಯಿಸಿ ವ್ಯವಸಾಯ ಮಾಡಬೇಕು. ಇಲ್ಲಿ ಕೃಷಿ ಮತ್ತು ಅಸಂಘಟಿತ ವಲಯದ ಕಾರ್ಮಿಕರ ದುಡಿಮೇಯೇ ಇಲ್ಲಿನ ಜೀವನದ ಪ್ರಮುಖ ಆಧಾರ. ಇತ್ತೀಚೆಗೆ ಕೈಗಾರಿಕಾ ಅಭಿವೃದ್ಧಿಯು ಸಹ ಆಗುತ್ತಿದೆ ಆದರೆ ಅದರಲ್ಲಿ ಇಲ್ಲಿನ ಸ್ಥಳೀಯರು ಕೆಲಸವನ್ನು ಗಿಟ್ಟಿಸಿಕೊಳ್ಳುವುದರಲ್ಲಿ ವಿಪಲರಾಗಿದ್ದಾರೆ. ಇಲ್ಲಿ ವಲಸೆ ಹೊಗುವವರ ಪ್ರಮಾಣವು ಸಹ ಜಾಸ್ತಿಯಿದೆ. ಇನ್ನು ಇಲ್ಲಿನ ಸಾಮಾಜಿಕ ಚಿತ್ರಣ ವನ್ನು ನೋಡಿದರೆ ಭಾರತೀಯ ಜಾತಿವ್ಯವಸ್ಥೆಯಿಂದ ಮಡುಗಟ್ಟಿದೆ, ಅದೇ ಮೇಲು-ಕೀಳು, ಬಡವ ಬಲ್ಲಿಗ ಮತ್ತು ಪರಿಶಿಷ್ಟ ಜಾತಿಯಲ್ಲಿ ಅಸ್ಪೃಶ್ಯರು ಮತ್ತು ಸ್ಪೃಶ್ಯರು ಇದ್ದಾರೆ ಹಳ್ಳಿಗಳಲ್ಲಿ ಯಥಾ ಪ್ರಕಾರ ಜಾತಿ ತಾರತಮ್ಯ ಮತ್ತು ಒಡೆದು ಆಳುವ ನೀತಿ ಮತ್ತು ಸ್ಥಳೀಯ ರಾಜಕಾರಣವು ಸಹ ಮೇಲ್ಜಾತಿ ಮತ್ತು ಮೇಲ್ವರ್ಗದ ಜನರ ಕೈಯಲ್ಲಿದೆ. ಇಲ್ಲಿ ಜಾತಿ, ಧರ್ಮ, ಲಿಂಗತ್ವ ಮತ್ತು ವರ್ಗವ್ಯವಸ್ಥೆಗಳ ನಡುವೆ ಒಂದೊಕ್ಕೊಂದು ಸಂಬಂಧವಿದೆ ಅವೆಲ್ಲವು ಸಹ ದೇವದಾಸಿ ಪದ್ಧತಿಯನ್ನು ಮತ್ತು ದೇವದಾಸಿಯರನ್ನು ಪ್ರಭಾವಿಸಿವೆ ಮತ್ತು ನಿಯಂತ್ರಿಸಿವೆ ಅದ್ದರಿಂದ ರಾಜ್ಯದಲ್ಲಿ ದೇವದಾಸಿಯರ ಸಂಖ್ಯಾಪದ್ಧತಿಯನ್ನು ನೊಡಿದಾಗ ಈ ಜಿಲ್ಲೆಯಲ್ಲಿ ತನ್ನದೇ ಆದ ವಿಶೇಷ ಸ್ಥಿತಿಯನ್ನು ಹೊಂದಿದೆ. ಇಲ್ಲಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ಜಿಲ್ಲಾಡಳಿತ ಮತ್ತು ಇತರೆ ಸರ್ಕಾರಿ ಇಲಾಖೆಗಳನ್ನು ಒಳಗೊಂಡಂತೆ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಪದ್ಧತಿಯನ್ನು ಜೀವಂತವಾಗಿರುವಂತೆ ಮಾಡಿಟ್ಟಿದೆ. ಹಾಗೇ ಜಿಲ್ಲೆಯು ತುಂಬಾ ಹಿಂದುಳಿದಿರುವುದರಿಂದ ಇಲ್ಲಿನ ದಲಿತರ ಸಂಪತ್ತೆಂದರೆ ಅವರ ದೈಹಿಕ ಶ್ರಮವೇ ಅವರಿಗೆ ಪ್ರಮುಖ ಆಧಾರವಾಗಿದೆ ಮತ್ತು ಶಿಕ್ಷಣ ಮತ್ತು ಉದ್ಯೋಗದ ಪ್ರಮಾಣದಲ್ಲಿ ತುಂಬಾ ಕಡಿಮೆ ಸಂಖ್ಯೆಯಲ್ಲಿ ಸಿಗುತ್ತಾರೆ, ಇಂತಹ ಸಂದರ್ಭದಲ್ಲಿ ದೇವದಾಸಿಯರ ಸ್ಥಿತಿಗತಿಯಂತೂ ಚಿಂತಾಜನಕವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಸಮಗ್ರ ವಿಚಾರವನ್ನು ಅಭಿವೃದ್ಧಿ ಪರಿಕಲ್ಪನೆಯ ಪ್ರಕ್ರಿಯೆಯಲ್ಲಿ ಯಾವ ಯಾವ ಸ್ಥಾನಮಾನಗಳನ್ನು

ಪಡೆದಿದ್ದಾರೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಿ ವಾಸ್ತವದ ವಿಚಾರಗಳನ್ನು ಸಮಾಜಕ್ಕೆ ಮುಖಾಮುಖಿಯಾಗಿಸುವ ಪ್ರಯತ್ನ ಮಾಡಲಾಗಿದೆ ಅದ್ದರಿಂದ ಪ್ರಸ್ತುತದ ಅಧ್ಯಾಯವು ಕೊಪ್ಪಳ ಜಿಲ್ಲೆಗೆ ಮಾತ್ರ ಸೀಮಿತವಾಗಿದೆ ಮತ್ತು ಅಲ್ಲಿನ ಭೌಗೋಳಿಕ, ಜನಸಂಖ್ಯೆ, ವಾತವರಣ, ಸಾಮಾಜಿಕ, ಆರ್ಥಿಕ, ಆಡಳಿತ ಮುಂತಾದ ವಿಚಾರಗಳನ್ನು ಅಧ್ಯಯನದ ಮಿತಿಯೊಂದಿಗೆ ಮತ್ತು ಅದ್ಯಯನದ ವಸ್ತುವಿಷಯಕ್ಕೆ ಅಗತ್ಯವಾದಷ್ಟು ಮಾತ್ರ ಬಳಸಿಕೊಳ್ಳಲಾಗಿದೆ.

**ಕೊನೆಟಿಪ್ಪಣಿಗಳು**


೧. ಚಂದ್ರಶೇಖರ ಟಿ.ಆರ್. (ಸಂಯೋಜಕರು), ೧೯೯೯, ಅಭಿವೃದ್ಧಿ ಅಧ್ಯಯನ ಮಾಲೆ, ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ: ಕೊಪ್ಪಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨. ಸುರೇಶ ಕೆ.ಎಂ. ಮತ್ತು ಇತರರು, ೨೦೦೧, ಕರ್ನಾಟಕ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಕೊಪ್ಪಳ ಜಿಲ್ಲಾ ಅಂಕಿ-ಅಂಶಗಳ ನೋಟ. ಸಂಖ್ಯೆ: ಆ.ಸಾ.ನಿ. ೧೪/೨೦೧೫-೧೬ ಮತ್ತು ಅರ್ಚನಾ ಹಿರೆಮಠ, ೨೦೧೭, ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳಾ ಪ್ರಾತಿನಿಧ್ಯ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪. ಚಂದ್ರಶೇಖರ ಟಿ.ಆರ್., ೧೯೯೯, ಅಭಿವೃದ್ಧಿ ಅಧ್ಯಯನ ಮಾಲೆ, ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ: ಕೊಪ್ಪಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ,

೫. ಚಂದ್ರಶೇಖರ ಟಿ.ಆರ್., ೧೯೯೯, ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜು, ಬೆಂಗಳೂರು.

೬. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೫-೧೬, ಜಿಲ್ಲಾ ಪಂಚಾಯತ್, ಕೊಪ್ಪಳ, ಅಸಾನಿ ೧೪, ೨೦೧೬.

೭. ಕರ್ನಾಟಕ ಜನಗಣತಿ ಮಾಹಿತಿ, ೨೦೧೧, ೨೦೧೧ರ ಜನಗಣತಿ ಸಮೀಕ್ಷೆ, ಅಂತರ್ಜಾಲ

ಅಧ್ಯಾಯ ೪

# ಕ್ಷೇತ್ರಕಾರ್ಯದ ಮಾಹಿತಿ ವಿಶ್ಲೇಷಣೆ: ದೇವದಾಸಿಯರ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆ

ಅಧ್ಯಾಯ ನಾಲ್ಕು

# ದೇವದಾಸಿಯರ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳ ವಿಶ್ಲೇಷಣೆ

## ೪.೧. ಪೀಠಿಕೆ

ಈ ಅಧ್ಯಾಯದ ಸ್ಪಷ್ಟವಾದ ಉದ್ದೇಶವೇನೆಂದರೆ ಸಮಕಾಲೀನ ಸನ್ನಿವೇಶದಲ್ಲಿ, ಅಧುನಿಕತೆಯ ಹಿನ್ನೆಲೆಯ ಮತ್ತು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ದೇವದಾಸಿಯರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಸಮಗ್ರ ವಿಚಾರವನ್ನು ಅಭಿವೃದ್ಧಿ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಮತ್ತು ಪ್ರಸ್ತುತ ಅವರ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಕರ್ನಾಟಕ ರಾಜ್ಯದ ಹೈದರಾಬಾದ್-ಕರ್ನಾಟಕ ಪ್ರಾಂತ್ಯದ ಕೊಪ್ಪಳ ಜಿಲ್ಲೆಯಲ್ಲಿ ದೇವದಾಸಿಯರ ಸಮಾಜೋ-ಆರ್ಥಿಕ ಮತ್ತು ರಾಜಕೀಯ ಸ್ಥಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಕೊಪ್ಪಳ ಜಿಲ್ಲೆಯ ೨೦೦ ದೇವದಾಸಿಯರನ್ನು ೪ ತಾಲ್ಲೂಕುಗಳಿಂದ- ಕೊಪ್ಪಳ, ಕುಷ್ಟಗಿ, ಗಂಗಾವತಿ ಮತ್ತು ಯಲಬುರ್ಗಾ, ಒಟ್ಟು ೬೦ ಹಳ್ಳಿಗಳಲ್ಲಿ ಕ್ಷೇತ್ರ ಭೇಟಿ ಮಾಡಿ ಪ್ರಶ್ನಾವಳಿಯ ಮೂಲಕ ಸಂದರ್ಶನ, ಅವಲೋಕನ, ಪ್ರಶ್ನಾವಳಿ ಮತ್ತು ಗುಂಪು ಚರ್ಚೆ(ಲಕ್ಷ್ಯ ಗುಂಪಿನ ಚರ್ಚೆ)ಯನ್ನು ಮಾಡಲಾಗಿದೆ. ಪ್ರಶ್ನಾವಳಿಯ ಮೂಲಕ ಸಂದರ್ಶನವನ್ನು ಕೈಗೊಂಡು ದೇವದಾಸಿಯರ ಸ್ಥಿತಿಯನ್ನು ತಿಳಿದುಕೊಂಡರೆ ಅವಲೋಕನ ಮತ್ತು ಗುಂಪು ಚರ್ಚೆಗಳಲ್ಲಿ ಅವರ ವಾಸ್ತವ ಬದುಕು ಮತ್ತು ಪ್ರಸ್ತುತ ಸ್ಥಿತಿಯನ್ನು ಕಣ್ಣಿಗೆ ರಾಚುವಂತೆ ತೋರಿದೆ ಮತ್ತು ವ್ಯಕ್ತಿಗತ ಅಧ್ಯಯನಗಳಲ್ಲಿ ದೇವದಾಸಿಯರ ನಿಜವಾದ ಪದ್ಧತಿ, ವಾಸ್ತವ ಬದುಕು, ಕಷ್ಟ-ಸುಖ, ನೋವು-ನಲಿವುಗಳೆಲ್ಲವೂ ಸಹ ಪ್ರಕರಣ ಅಧ್ಯಯನಗಳಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಈ ಅಧ್ಯಯನದಲ್ಲಿ ಎಲ್ಲ ವರ್ಷದ ವಯಸ್ಸಿನವರ ದೇವದಾಸಿಯರನ್ನು ಅಧ್ಯಯನದಲ್ಲಿ ಒಳಪಡಿಸಲಾಗಿದೆ. ಹಳ್ಳಿಯಲ್ಲಿ ದೇವದಾಸಿಯರಿರುವ ಸಂಖ್ಯೆಗೆ ಅನುಗುಣವಾಗಿ ಯಾದೃಚ್ಛಿಕ ನಮೂನೆಯ ಮಾದರಿಯನ್ನು

ಬಳಸಿ ಮಾಹಿತಿಯನ್ನು ಕಲೆಹಾಕಲಾಗಿದೆ. ದೇವದಾಸಿಯರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಸ್ತುತದ ಸ್ಥಿತಿಗತಿಗಳ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಕೈಗೊಂಡಿದ್ದನ್ನು ಸರಳ ಅಂಕಿ ಸಂಖ್ಯೆಗಳ ಮೂಲಕ ವಿಶ್ಲೇಷಿಸಿ ಕೋಷ್ಟಕಗಳನ್ನು ಸಿದ್ಧಪಡಿಸಿ ಅದಕ್ಕೆ ಅನುಗುಣವಾಗಿ ವಿವರಣೆಯನ್ನು ಕೊಡುತ್ತಾ ಮತ್ತು ಈಗಾಗಲೇ ಅಗಿರುವ ಅಧ್ಯಯನಗಳಲ್ಲಿ ದೊರೆತಿರುವ ವಾಸ್ತವಕ್ಕೆ ಮತ್ತು ಸತ್ಯದ ವಿಚಾರಗಳೊಂದಿಗೆ ಮುಖಾಮುಖಿಯಾಗಿಸಿ ಪ್ರಸ್ತುತದ ವಾಸ್ತವ ಸಂಗತಿಗಳನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಇಲ್ಲಿ ದೇವದಾಸಿಯರು ಅಂದರೆ ಅಧ್ಯಯನಕ್ಕೆ ಒಳಪಡುವ ಪ್ರತಿವಾದಿಗಳು ಕೊಟ್ಟಂತಹ ಸಮಾದಾನದ ಉತ್ತರಗಳನ್ನು ವಾಸ್ತವಿಕರಿಸಲಾಗಿದೆ ಮತ್ತು ಒಟ್ಟಾರೆ ಜಿಲ್ಲೆಯಲ್ಲಿರುವ ದೇವದಾಸಿಯರ ಚಿತ್ರಣವನ್ನು ಸಮಾಜದ ಮುಂದೆ ಒದಗಿಸಲು ಈ ಅಧ್ಯಯನದ ವಿಶ್ಲೇಷಾಣತ್ಮಕವಾದ ವಿವರಣೆ ಸಾಕ್ಷಿಯಾಗಿದೆ. ಹಾಗೇ ಸಂಶೋಧಕನ ಮಿತಿಯನ್ನು ಕೂಡ ಗಮನದಲ್ಲಿಟ್ಟುಕೊಂಡು ಅಧ್ಯಯನಕ್ಕೆ ನ್ಯಾಯ ಒದಗಿಸುವಲ್ಲಿ ಪ್ರಯತ್ನಿಸಲಾಗಿದೆ.

### ೪.೨. ಕ್ಷೇತ್ರಕಾರ್ಯದ ಮಾಹಿತಿ ವಿಶ್ಲೇಷಣೆ

ಕ್ಷೇತ್ರಕಾರ್ಯದಲ್ಲಿ ಬಂದಂತಹ ಮಾಹಿತಿಯನ್ನು ಒಂದು ಕಡೆ ಕ್ರೂಡಿಕರಿಸಿ,ವರ್ಗೀಕರಿಸಿ ಮತ್ತು ಕೋಷ್ಟಕಗಳ ಮೂಲಕ ಒಂದೊಂದಾಗಿ ವಿಷಯವನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಬಂದಂತಹ ಮಾಹಿತಿಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### ದೇವದಾಸಿಯರ ಸಾಮಾನ್ಯ ಮಾಹಿತಿಗಳ ವಿಶ್ಲೇಷಣೆ

**ಕೋಷ್ಟಕ ೪.೨.೧. ದೇವದಾಸಿಯರ ವಯಸ್ಸಿನ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ೨೫ರಿಂದ ೩೦ ವರ್ಷಗಳು | ೧೮ | ೯% |
| ೨ | ೩೧ರಿಂದ ೪೦ ವರ್ಷಗಳು | ೩೬ | ೧೮.% |
| ೩ | ೪೧ರಿಂದ ೫೦ ವರ್ಷಗಳು | ೭೮ | ೩೯% |
| ೪ | ೫೧ರಿಂದ ೬೦ ವರ್ಷಗಳು | ೪೪ | ೨೨% |
| ೫ | ೬೧ರಿಂದ ೭೦ ವರ್ಷಗಳು | ೧೬ | ೮% |
| ೬ | ೭೧ರಿಂದ ೮೦ ವರ್ಷಗಳು | ೮ | ೪% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ.

ದೇವದಾಸಿಯರ ವಯಸ್ಸಿನ ಮಾಹಿತಿಯನ್ನು ಹೀಗೆ ನೋಡಬಹುದು. ಶೇ. ೯ರಷ್ಟು ದೇವದಾಸಿಯರು ೨೫ ರಿಂದ ೩೦ ವರ್ಷದೊಳಗಿದ್ದಾರೆ, ಶೇ. ೧೮.೫ರಷ್ಟು ೩೧ರಿಂದ ೪೦ ವರ್ಷದವರಿದ್ದಾರೆ, ಶೇ. ೩೯ರಷ್ಟು ೪೧ರಿಂದ ೫೦ ವರ್ಷದೊಳಗಿದ್ದಾರೆ. ಶೇ. ೨೭ರಷ್ಟು ೫೧ರಿಂದ ೬೦ ವರ್ಷದೊಳಗಿದ್ದಾರೆ. ಶೇ. ೮ರಷ್ಟು ೬೧ರಿಂದ ೭೦ ವರ್ಷದೊಳಗಿದ್ದಾರೆ. ಕೊನೆಯಲ್ಲಿ ಶೇ. ೩.೫ರಷ್ಟು ೭೧ರಿಂದ ೮೦ ವರ್ಷ ಮತ್ತು ಅದಕ್ಕೂ ಮೇಲ್ಪಟ್ಟವರಾಗಿದ್ದಾರೆ. ಸುಮಾರು ದೇವದಾಸಿಯರು ೨೫ ವರ್ಷದಿಂದ ೪೫ ವರ್ಷದೊಳಗಿನವರು ಕಾಯ್ದೆಯ ಪ್ರಕಾರ ಅಪರಾಧವಾಗಿದೆ, ಕಾಯ್ದೆ ೧೯೮೨ರಲ್ಲಿ ಮತ್ತು ಅದಕ್ಕಿಂತ ಅಂದರೆ ಸ್ವಾತಂತ್ರ್ಯಪೂರ್ವ ಕಾಲದಲ್ಲೇ ಹಲವು ರೀತಿಯಲ್ಲಿ ಜಾರಿಯಾಗಿವೆ. ಈಗಿರುವ ಕಾಯ್ದೆಗಳನ್ನು ಗಮನಿಸಿದಾಗ(ಸಮರ್ಪಣಾ ನಿಷೇಧ ಕಾಯ್ದೆ ೧೯೮೨ ಮತ್ತು ತಿದ್ದುಪಡಿ ೨೦೦೯-೧೦) ಅಂದರೆ ೧೯೮೨ರ ನಂತರ ದೇವದಾಸಿಯರ ಸಂಖ್ಯೆ ದ್ವಿಗುಣಗೊಂಡಿದೆ. ಅಂದರೆ ೧೯೯೩-೯೪ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ರಾಜ್ಯದಲ್ಲಿ ಬರೀ ೨೨೮೭೩ ಜನ ದೇವದಾಸಿಯರಿದ್ದಾರೆಂದು ತಿಳಿದು ಬಂದಿದೆ. ನಂತರ ೨೦೦೯-೧೦ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ೨೩೭೮೭ ಜನ ಹೆಚ್ಚುವರಿಯಾಗಿ ಇದ್ದಾರೆಂದು ತಿಳಿದುಬಂದಿದೆ. ಅಂದರೆ ಕರ್ನಾಟಕದಲ್ಲಿ ಒಟ್ಟು ೪೬೬೬೦ ಜನ ದೇವದಾಸಿಯರಿದ್ದರೆಂದು, ಇದರಲ್ಲಿ ೬೧೬೬ ಜನ ದೇವದಾಸಿಯರು ಸತ್ತುಹೋಗಿದ್ದಾರೆಂದು ತಿಳಿದುಬಂದಿದೆ[1](**ದು. ಸರಸ್ವತಿ ಮತ್ತು ಪ್ರೊ.ಆರ್ ಸುನಂದಮ್ಮ, ೨೦೧೭**) ಉದಾಹರಣೆಗೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೬೦೩೫ ಜನ ದೇವದಾಸಿಯರೆಂದು ತಿಳಿದು ಬಂದಿದೆ ಆದರೆ ಪುನರ್ವಸತಿಯ ಯೋಜನೆಯು ಬರೀ ೨೯೨೫ ಜನ ಪಡೆಯುತ್ತಿದ್ದಾರೆ[2](ಶ್ರೀನಿವಾಸ **ಗೌಡ, ೨೦೧೫**) ಉಳಿದ ೩೧೧೦ ಜನ ದೇವದಾಸಿಯರಿಗೆ ಸಿಗುತ್ತಿಲ್ಲ ಎಂದು ಕಣ್ಣು ಮುಚ್ಚಿಕೊಂಡು ಹೇಳಬಹುದು. ಹಾಗೆಯೇ ಕೆಲವು ಸಂಘಟನೆಗಳ ಪ್ರಕಾರ ಲಕ್ಷಕ್ಕೂ ಹೆಚ್ಚು ಜನ ದೇವದಾಸಿಯರಿದ್ದಾರೆಂದು ಮತ್ತು ಸದ್ಯದಲ್ಲೂ ಸಹ ಕದ್ದುಮುಚ್ಚಿ ಮುತ್ತು ಕಟ್ಟಿಸುವುದು ಸಹ ನಿಂತಿಲ್ಲ ಎನ್ನುವುದು ಸಹ ಸತ್ಯವಾಗಿದೆ. ಅಂದರೆ ದೇವದಾಸಿ ಪದ್ಧತಿಯು ಸಂಪೂರ್ಣವಾಗಿ ನಿಷೇಧವಾಗಿಲ್ಲವೆಂದೇ ಹೇಳಬಹುದು ಕಾರಣ ಕಾಯ್ದೆ ಕಾನೂನುಗಳಿದ್ದರೂ ಸಹ ಈ ಪದ್ಧತಿಯನ್ನು ನಿಯಂತ್ರಿಸುವಲ್ಲಿ ಪ್ರಭುತ್ವವು ಸೋತಿದೆ ಎಂಬುದರಲ್ಲಿ ಸಂದೇಹವಿಲ್ಲ. ಈ ಮಾಹಿತಿಯನ್ನು ಕೊಪ್ಪಳ ಜಿಲ್ಲೆಯ ನಾಲ್ಕು ತಾಲ್ಲೂಕುಗಳಾದ ಕೊಪ್ಪಳ, ಕುಷ್ಟಗಿ, ಗಂಗಾವತಿ ಮತ್ತು ಯಲಬುರ್ಗ ತಾಲ್ಲೂಕುಗಳ ಹಳ್ಳಿಗಳಿಗೆ ಭೇಟಿ ಕೊಟ್ಟು ಪ್ರಶ್ನಾವಳಿಯ ಮೂಲಕ ಸಂದರ್ಶಿಸಲಾಗಿದೆ.

**ಕೋಷ್ಟಕ ೪.೨.೨. ದೇವದಾಸಿಯರ ಶಿಕ್ಷಣದ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ೧ರಿಂದ೪ ನೇ ತರಗತಿ (ಪ್ರಾಥಮಿಕ) | ೪ | ೨% |
| ೨ | ೫ರಿಂದ ೭ನೇ ತರಗತಿ (ಮಾಧ್ಯಮಿಕ) | ೧೨ | ೬% |
| ೩ | ೮ರಿಂದ೧೦ ನೇ ತರಗತಿ (ಪ್ರೌಢಶಾಲೆ) | ೬ | ೩% |
| ೪ | ಪಿ ಯು ಸಿ (ಪದವಿಪೂರ್ವ ಕಾಲೇಜು) | ೧ | ೦.೫% |
| ೫ | ಅನಕ್ಷರಸ್ಥರು | ೧೭೭ | ೮೮.೫% |
| | **ಒಟ್ಟು** | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯ ಮಾಹಿತಿ

ದೇವದಾಸಿಯರ ಶಿಕ್ಷಣದ ಮಟ್ಟವನ್ನು ಚರ್ಚಿಸಲಾಗಿದೆ. ಶಿಕ್ಷಣವು ದಲಿತ ಹಾಗೂ ಸಾಮಾಜಿಕ ಪ್ರತ್ಯೇಕತೆಯಿಂದಿರುವ ವರ್ಗದ ವಿಮೋಚನೆಗೆ ಒಂದು ಪ್ರಮುಖ ಅಸ್ತ್ರ ಅಂದರೆ ತಪ್ಪಾಗಲಾರದು. ಆದರೆ ಇಲ್ಲಿ ಆ ತತ್ವಕ್ಕೆ ವಿರುದ್ಧವಾದ ಸ್ಥಿತಿಗತಿಯನ್ನು ಕಾಣಬಹುದು. **ಶೇ. ೨ರಷ್ಟು ೧ರಿಂದ ೪ನೇ ತರಗತಿ ಅಂದರೆ ಪ್ರಾಥಮಿಕ ಶಾಲೆಯವರೆಗೆ ಕಲಿತಿದ್ದಾರೆ. ಶೇ. ೬ರಷ್ಟು ೫ರಿಂದ ೭ನೇ ತರಗತಿಯವರೆಗೆ, ಅಂದರೆ ಮಾಧ್ಯಮಿಕ ಶಾಲೆಯ ಹಂತದವರೆಗೂ, ಶೇ. ೩ರಷ್ಟು ೮ರಿಂದ ೧೦ನೇ ತರಗತಿಯವರೆಗೂ ಅಂದರೆ ಪ್ರೌಢಶಾಲೆಯ ಹಂತದವರೆಗೂ ಮತ್ತು ಶೇ. ೦.೫ರಷ್ಟು ಪಿಯುಸಿ(ಪದವಿಪೂರ್ವ ಕಾಲೇಜು) ಹಂತದವರೆಗೂ** ಶಿಕ್ಷಣವನ್ನು ಈ ಸಮುದಾಯದಲ್ಲಿ ಗುರುತಿಸಬಹುದು. ಆದರೆ ಈ ಸ್ಥಿತಿಗತಿಗೆ ವಿರುದ್ಧವಾದ ಸ್ಥಿತಿಯೂ ಇದೆ. **ಶೇ. ೮೮.೫ರಷ್ಟು ಹಾಗೂ ಅದಕ್ಕಿಂತಲೂ ಅಧಿಕ ಪ್ರಮಾಣದಲ್ಲಿ ದೇವದಾಸಿಯರು ಯಾವುದೇ ಓದು-ಬರಹ ಕಲಿಯದೆ ಅನಕ್ಷರಸ್ಥರಾಗಿದ್ದಾರೆ.** ಡಾ ಬಾಬಾ ಸಾಹೇಬ್ ಅಂಬೇಡ್ಕರ್ ಹೇಳಿರುವಂತೆ ಭಾರತದ ಪ್ರತಿಯೊಬ್ಬ ನಾಗರೀಕರಿಗು ಪ್ರಾಥಮಿಕ ಶಿಕ್ಷಣ ಕಡ್ಡಾಯ ಹಾಗೂ ಇದು ಮೂಲಭೂತ ಹಕ್ಕುಗಳಿಂದ ಮಾನ್ಯತೆ ಪಡೆದಂತಹ ಹಕ್ಕಾಗಿದೆ ಮತ್ತು ಶಿಕ್ಷಣವು ಮಾನವ ಜನಾಂಗದ ಅಜ್ಞಾನತೆಯನ್ನು ಕಡಿಮೆ ಮಾಡಿ, ಜ್ಞಾನ, ಕೌಶಲ್ಯ, ಮೌಲ್ಯ ಹಾಗೂ ಮಾನವೀಯ ಮನೋಭಾವಗಳನ್ನ ಪಡೆಯುವಂತಹ ಪ್ರಕ್ರಿಯೆಯಾಗಿದೆ ಸಂಕೀರ್ಣವಾದಂತಹ ಪ್ರಪಂಚದಲ್ಲಿ ತಮ್ಮ ಸ್ವಾತಂತ್ರವನ್ನ ಎಲ್ಲಾ ಅಯಾಮಗಳಲ್ಲಿ ಪಡೆಯುತ್ತಿದ್ದಾರೆ ಅದು ಶಿಕ್ಷಣದಿಂದ ಮಾತ್ರ ಹಾಗೇ ಎಲ್ಲಾ ಸ್ಥರಗಳಲ್ಲಿ ಮನುಷ್ಯ ಪ್ರಗತಿಯನ್ನು ಕಾಣಬಯಸುತ್ತಾನೆಂದರೆ ಅದು ಶಿಕ್ಷಣದಿಂದ ಮಾತ್ರ ಎಂಬುದು ಅಕ್ಷರಸಹಃ ವಾಸ್ತವ.[೩](ಚಂದ್ರಶೇಖರ ಎಚ್.ಆರ್., ೨೦೦೫) ಪ್ರಸ್ತುತ ಅಧ್ಯಯನದಲ್ಲಿ ದಲಿತರಲ್ಲಿ ದಲಿತರಾಗಿರುವ ದೇವದಾಸಿಯರ ಶಿಕ್ಷಣವನ್ನ ಪ್ರಸ್ತುತದ ಹಿನ್ನಲೆಯಲ್ಲಿ ನೋಡುವಾಗ ಸಾಮಾನ್ಯವಾಗಿ ಸಾಮಾನ್ಯ ದಲಿತ ಮತ್ತು ಉನ್ನತ ಜಾತಿ, ಹಾಗೂ

ವರ್ಗಗಳಲ್ಲಿ ದೇವದಾಸಿಯರಿಗೂ ಇರುವ ಅಂತರ ಭಿನ್ನವಾದಂತಿದೆ. ಈ ಮೇಲಿನ ಅಂಶವನ್ನು ಗಮನಿಸಿದಾಗ ದೇವದಾಸಿಯ ಉಗಮ ಮತ್ತು ಕಾರಣಕ್ಕೆ ಶಿಕ್ಷಣದ ಕೊರತೆಯು ಸಹ ಪ್ರಮುಖ ಕಾರಣವಾಗಬಲ್ಲದು ಎಂದು ಈ ಅಧ್ಯಯನದಿಂದ ತಿಳಿದು ಬಂದಿದೆ.

**ದೇವದಾಸಿ ಪದ್ಧತಿಗೆ ಮತ್ತು ದೇವದಾಸಿಯರಿಂದ ಪಡೆದ ನೇರ ಮಾಹಿತಿ**

**ಕೋಷ್ಟಕ ೪.೨.೩. ಯಾವ ವಯಸ್ಸಿನಲ್ಲಿ ದೇವದಾಸಿಯಾಗಿ ದೇವತೆ ಅಥವಾ ದೇವರಿಗೆ ಅರ್ಪಿಸಲಾಯಿತು**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಹುಟ್ಟಿದ ತಕ್ಷಣ(ಸರಿ–ಮಾಹಿತಿ ಇಲ್ಲ) | ೮ | ೪% |
| ೨ | ೫ ವರ್ಷದೊಳಗೆ | ೧೮ | ೯% |
| ೩ | ೫ರಿಂದ ೧೦ ವರ್ಷದೊಳಗೆ | ೫೮ | ೨೯% |
| ೪ | ೧೦ ವರ್ಷಕ್ಕೆ ಮೇಲ್ಪಟ್ಟು | ೧೧೬ | ೫೮% |
| | ಒಟ್ಟು | ೨೦೦ | ೧೦೦% |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಪ್ರಸ್ತುತ ಅಧ್ಯಯನದ ಪ್ರಶ್ನೆಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದಲ್ಲಿ ಭೇಟಿ ಮಾಡಿ ನೇರವಾಗಿ ಮಾಹಿತಿಯನ್ನು ಪಡೆದಾಗ ಬಂದ ಮಾಹಿತಿಯು ಹೀಗಿದೆ; ದೇವದಾಸಿಯನ್ನಾಗಿ ಅರ್ಪಿಸಿದ ವಯಸ್ಸಿನ ವಿವರಣೆ ಹೀಗಿದೆ; **ಹುಟ್ಟಿದ ತಕ್ಷಣ(ಸರಿಯಾದ ಮಾಹಿತಿ ಇಲ್ಲ) ಶೇ. ೪ರಷ್ಟು ದೇವದಾಸಿಯ ರಾಗಿದ್ದಾರೆ. ೫ ವರ್ಷದೊಳಗೆ ಶೇ. ೯ರಷ್ಟು, ೫ರಿಂದ ೧೦ ವರ್ಷದೊಳಗೆ ಶೇ. ೨೯ರಷ್ಟು ಹಾಗೂ ೧೦ ವರ್ಷಕ್ಕೂ ಮೇಲ್ಪಟ್ಟು ವಯಸ್ಸಿನಲ್ಲಿ ಅರ್ಪಿಸಿದ ದೇವದಾಸಿಯರ ಪ್ರಮಾಣ ಶೇ. ೫೮ರಷ್ಟಿದೆ.** ಇಡೀ ಅಂಕಿಸಂಖ್ಯೆಗಳನ್ನು ಗಮನಿಸಿದರೆ ಈ ದೇವದಾಸಿಯರು ಯಾರೂ ಸಹ ತಮ್ಮ ಇಷ್ಟಕ್ಕೆ ದೇವದಾಸಿಯರಾದುದಲ್ಲ. ಏಕೆಂದರೆ ಇವರ ವಯಸ್ಸು ಆ ತೀರ್ಮಾನ ತಗೆದುಕೊಳ್ಳುವ ಯಾವುದೇ ಅರ್ಹತೆಯಾಗಲೀ, ಪರಿಸ್ಥಿತಿಯಾಗಲೀ ಇರಲಿಲ್ಲ ಎಂದು ಊಹಿಸಬಹುದು. ಅಂದರೆ ಇಲ್ಲಿ ಶೇ ೪೨ ರಷ್ಟು ಅಧಿಕವಾಗಿ ದೇವದಾಸಿಯರಿಗೆ ತಮ್ಮನ್ನು ದೇವದಾಸಿಯನ್ನಾಗಿ ಮಾಡಿದ ನೆನೆಪುಗಳು ಮತ್ತು ಅದರ ಬಗ್ಗೆ ಮಾಹಿತಿಯೆ ಇಲ್ಲ ಆದರೆ ಅವರೆಲ್ಲಾ ದೇವದಾಸಿಯರು ಉಳಿದವರು ತನ್ನ ಚಿಕ್ಕ ವಯಸ್ಸಿನ ಮತ್ತು ಆಟವಾಡುವ ವಯಸ್ಸಿನಲ್ಲಿ ಈ ಪದ್ಧತಿಗೆ ಬಲಿಯಾಗಿರುವುದು ಸಹ ತಮಗೆ ಅರಿವಿಲ್ಲ ಏಕೆಂದರೆ ಅವರ ಬುದ್ಧಿಮತ್ತೆ, ತಂದೆ ತಾಯಿಗಳಿಗೆ ಪ್ರಶ್ನೆ ಮಾಡುವ ಸಂಸ್ಕೃತಿಯು ನಮ್ಮ ದೇಶದಲ್ಲಿ ಮಾನಸಿಕವಾಗಿ ಒಪ್ಪಿತವಾಗಿಲ್ಲ. ಅದ್ದರಿಂದ ದೇವದಾಸಿಯ ಅರ್ಪಣೆಯೆಲ್ಲವೂ ಸಹ ಕುಟುಂಬ, ಸಮುದಾಯ ಮತ್ತು ಸಮಾಜದ ಕಟ್ಟಕಡೆಯ ತಿರ್ಮಾನವಾಗಿತ್ತು ಅನ್ನಿಸುತ್ತದೆ ಇದಕ್ಕೆ ಪ್ರಭುತ್ವವು ಸಹ ಪರೋಕ್ಷವಾಗಿ ಸಹಕರಿಸಿದೆ.

**ಕೋಷ್ಟಕ ೪.೨.೪. ದೇವದಾಸಿಯನ್ನಾಗಿ ಮಾಡಲು ಪ್ರಮುಖ ಕಾರಣ ಯಾರು ಎನ್ನುವ ಮಾಹಿತಿ**

| ಕ್ರ.ಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಕುಟುಂಬ(ತಂದೆ-ತಾಯಿ) | ೧೮೧ | ೯೦.೫% |
| ೨ | ಸಮುದಾಯ | ೧೧ | ೫.೫% |
| ೩ | ಊರಿನವರು | ೦೮ | ೪% |
| | ಒಟ್ಟು | ೨೦೦ | ೧೦೦% |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಪ್ರಸ್ತುತ ಪ್ರಶ್ನೆಗೆ ದೇವದಾಸಿಯನ್ನಾಗಿ ಮಾಡಲು ಅಧಿಕವಾಗಿ ಅಂದರೆ ಶೇಕಡಾ ೯೦.೫ರಷ್ಟು ಹೆಚ್ಚಾಗಿ ತನ್ನ ಹೆತ್ತವರು ಪ್ರಮುಖವಾಗಿ ಕಾರಣವಾಗಿದ್ದಾರೆ. ಶೇ ೫.೫ರಷ್ಟು ಸಮುದಾಯ ಮತ್ತು ಶೇ ೪ರಷ್ಟು ಊರಿನ ಇತರೆ ಪ್ರಭಾವಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾಗಿದ್ದರೂ ಸಹ ಅದನ್ನು ಗ್ರಹಿಸುವ ಸೂಕ್ಷ್ಮತೆ ದೇವದಾಸಿಯ ಕುಟುಂಬದವರಿಗಿರಲಿಲ್ಲ, ಇಲ್ಲಿ ಸರ್ಕಾರದ ಪಾತ್ರ ತೆರೆಯ ಮರೆಯಲ್ಲಿ ಇದ್ದಿರ ಬಹುದು ಏಕೆಂದರೆ ಕಾಯ್ದೆಯು ಬಂದ ನಂತರ ಸಾವಿರಾರು ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ದೇವದಾಸಿ ಪದ್ಧತಿಗೆ ಬಲಿಯಾಗಿದ್ದಾರೆ. ಈ ಪದ್ಧತಿಗೆ ಸಮಾಜವು ನೇರವಾಗಿ ಕಾರಣವಾಗಿದ್ದರೂ ಅದನ್ನು ಗುರುತಿಸುವ ಜಾಣ್ಮೆ ಮತ್ತು ಧೈರ್ಯ ಇವರಲಿಲ್ಲ. ಒಡಿಸ್ಸಾದ ಪೂರಿ ಜಗನ್ನಾಥ ದೇವಾಲಯದಲ್ಲಿದ್ದ ಇಬ್ಬರು ದೇವದಾಸಿಯರಾದ ಶಶಿಮಣಿದೇವಿ ಮತ್ತು ಪರಸಾಮಣಿ ದೇವಿ ಇಬ್ಬರನ್ನು ಸಂದರ್ಶಿಸಿದ ಲೇಖನದ ವಿವರಣೆಯಾಗಿದೆ. ಇಬ್ಬರ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ಇವರು ತಮ್ಮ ಚಿಕ್ಕ ವಯಸ್ಸಿನಲ್ಲಿ ತಂದೆ-ತಾಯಿಗಳು ಹಿರಿಯ ದೇವದಾಸಿಯರ ಬಳಿ ಬಿಟ್ಟು ಹೋದ ನೆನಪು ಮಾತ್ರ ಇದೆ. ಚಿಕ್ಕ ವಯಸ್ಸಿನಿಂದಲೂ ದೇವರ ಸೇವೆ ಮತ್ತು ಸಂಗೀತ, ನೃತ್ಯ ಇತ್ಯಾದಿ ಲಲಿತಕಲೆಗಳಲ್ಲಿ ಭಾಗವಹಿಸುತ್ತಿದ್ದರು.[೪](**ಶಾರದ ಲಹಂಗಿರ್; ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ೨೦೧೨**). ಮಹಿಳೆಯರನ್ನು ಕ್ರಿಯಾವಿಧಿಯ ಸೇವೆಗಳಿಗೆ ದೇವರಿಗೆ ಅರ್ಪಿಸುವುದು ಪುರಾತನವಾದುದು ಮತ್ತು ಸಾರ್ವತ್ರಿಕವಾದುದಾಗಿತ್ತು. ಸಾಮಾನ್ಯವಾಗಿ ಮಹಿಳೆಯರನ್ನು ದೇವರಿಗೆ ಅರ್ಪಿಸುವುದು ಒಂದು ಮಾತೃದೇವತಾರಾಧನೆಯ ಬಾಗವಾಗಿತ್ತು. ಮಾತೃಪ್ರಧಾನ ವ್ಯವಸ್ಥೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ವರ್ಗಾಂತರಗೊಂಡವು ಮತ್ತು ಮೊದಲಿನ ಸ್ಥಾನಮಾನಗಳು ಕಡಿಮೆಯಾಗಿ ಬರೀ ಕೇವಲ ಕ್ರಿಯಾವಿಧಿಗಳನ್ನು ಆಚರಿಸುವ ಕಾರ್ಯಕರ್ತರಾದರು(**ವೀಕೀಪಿಡೀಯ; ಎವಲ್ಯುಪಸ್ ಆಫ್ ದೇವದಾಸಿ ಸಿಸ್ಟಮ್**). ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಂಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ. ಮತ್ತು ಸಾಂಸ್ಕೃತಿಕ ಆಚರಣೆಗಳಿಂದ

ಕೂಡಿದೆ(ಲಾರೆನ್ ಬೇತ್ ಜಾಕೋಬ್ಸ್). ದೇವಾಯಲದಲ್ಲಿ ಹುಡುಗಿಯರನ್ನು ಅರ್ಪಿಸುವುದು ಮತ್ತು ಅಪರಿಚಿತರಿಗೆ ಸೆರಗು ಹಾಸುವುದು ಬಹುಶಃ ಇಂತಹ ಬಲಿಯಿಂದ ಅಸ್ತಿತ್ವಕ್ಕೆ ಬಂದಿತು. ದೇವಾನುದೇವತೆಗಳ ತೃಪ್ತಿಗಾಗಿ ಒಂದು ಹೆಣ್ಣು ಅಥವಾ ಗಂಡನ್ನು ಅರ್ಪಿಸಿ ಅದೇ ದೇವರ ಸೇವೆಗಾಗಿ ಮೀಸಲಿರಿಸುವ ಈ ಪರಂಪರೆಯು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು ಕೇವಲ ಭಾರತಕ್ಕೆ ಮಾತ್ರ ಸೀಮಿತವಾಗದೇ ವಿಶ್ವವ್ಯಾಪ್ತಿಯಾಗಿದೆ. ಅದ್ದರಿಂದ ದೇವದಾಸಿಯನ್ನಾಗಿ ಮಾಡಲು ತನ್ನ ಮನೆಯಿಂದಲೇ ಪ್ರಾರಂಭವಾಗುತ್ತದೆ ಆದರೆ ಅದರ ಹಿಂದಿನ ರಾಜಕಾರಣವು ಬೇರೆಯೇ ಇದ್ದರೂ ಪ್ರಸ್ತುತದಲ್ಲಿ ಮತ್ತು ಪ್ರತಿವಾದಿಗಳ ಉತ್ತರಗಳಲ್ಲಿ ಕುಟುಂಬ ಹೆಚ್ಚಾಗಿ ಪಾತ್ರ ನಿರ್ವಹಿಸಿದೆ ಎಂದು ಅಧ್ಯಯನದಿಂದ ತಿಳಿದು ಬರಿತ್ತದೆ.

**ಕೋಷ್ಟಕ ೪.೨.೫. ಕುಟುಂಬದಲ್ಲಿ ಎಷ್ಟನೇ ದೇವದಾಸಿ(ಎಷ್ಟನೇ ತಲೆಮಾರು) ಎನ್ನುವ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಮುತ್ತಜ್ಜಿ, ಅಜ್ಜಿ, ತಾಯಿ ಮತ್ತು ಮಗಳು | – ೪ನೇ ೭ | ೩.೫% |
| ೨ | ಅಜ್ಜಿ, ತಾಯಿ ಮತ್ತು ಮಗಳು– ೩ನೇ | ೨೮ | ೧೪% |
| ೩ | ತಾಯಿ ಮತ್ತು ಮಗಳು –೨ನೇ | ೨೧ | ೧೦.೫% |
| ೪ | ಮಗಳು– ೧ನೇ | ೧೪೪ | ೭೨% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಈ ಅಧ್ಯಯನದ ಪ್ರಶ್ನೆಯು ಇಡೀ ಮಹಿಳಾ ಸಮುದಾಯಕ್ಕೆ ಸವಾಲಾಗಿದೆ. ಏಕೆಂದರೆ ಸುಮಾರು ವರ್ಷಗಳಿಂದಲೂ ನಡೆದುಬಂದಿರುವ ವ್ಯವಸ್ಥೆಯು ತಮ್ಮ ಕುಟುಂಬದ ಎಲ್ಲಾ ತಲೆಮಾರುಗಳಿಗೆ ಅಂಟಿದ ರೋಗದಂತೆ ಪೀಳಿಗೆಯಿಂದ ಪೀಳಿಗೆಗೆ ಹಬ್ಬುತ್ತಾ ಬಂದಿದೆ. ಇಲ್ಲಿ **ಸುಮಾರು ೩.೫ರಷ್ಟು ದೇವದಾಸಿಯರು ನಾಲ್ಕು ತಲೆಮಾರುಗಳಿಂದ ಈ ಪದ್ಧತಿಯು ಇವರನ್ನು ಬಿಡುತ್ತಿಲ್ಲವೋ ಅಥವಾ ಇವರು ಈ ಪದ್ಧತಿಯನ್ನು ಬಿಡುತ್ತಿಲ್ಲವೋ ದೊಡ್ಡ ಪ್ರಶ್ನೆಯಾಗಿದೆ. ನಂತರ ಶೇ. ೧೪ರಷ್ಟು ಮೂರನೇ ತಲಮಾರುಗಳಿಂದ ಈ ಪದ್ಧತಿಯ ಸುಖ ದುಃಖದಲ್ಲಿ ಭಾಗಿಯಾಗಿದ್ದಾರೆ. ಶೇ. ೧೦.೫ರಷ್ಟು ದೇವದಾಸಿಯರು ಎರಡು ತಲೆಮಾರುಗಳಿಂದ ಕಟ್ಟುನಿಟ್ಟಿನಂತೆ ಪಾಲಿಸುತ್ತಾ ಬಂದಿದ್ದಾರೆ. ಹಾಗೆಯೇ ಉಳಿದ ಶೇ. ೭೨ರಷ್ಟು ದೇವದಾಸಿಯರು ಯಾವುದೇ ಹಿನ್ನೆಲೆಯಿಲ್ಲದಿದ್ದರೂ ಸಹ ತಮ್ಮ ಬದುಕನ್ನು ಈ ಪದ್ಧತಿಗೆ ಬಲಿ ಕೊಟ್ಟಿದ್ದಾರೆ.** ಧಾರ್ಮಿಕ ಹೆಸರಲ್ಲಿ ಮಹಿಳೆಯರನ್ನು ಅರ್ಪಿಸುವ ಪದ್ಧತಿ ಇತ್ತು ಹಾಗೂ ಈ ಪದ್ಧತಿಯು ತುಂಬಾ ಪವಿತ್ರವೆಂದು ನಂಬಲಾಗಿತ್ತು. ಸಂಶೋಧಕ ಜೇಮ್ಸ್ ಫ್ರೇಜ಼ರ್ ಅವರ ಪ್ರಕಾರ ಈ ಪದ್ಧತಿಗೆ ಬಹು ಮುಖ್ಯ ಕಾರಣಗಳನ್ನು ಎರಡು ರೀತಿಯಲ್ಲಿ ವಿವರಿಸಿದ್ದಾನೆ. ಒಂದು ಈ ಪದ್ಧತಿಯ ಬಗ್ಗೆ ಹೊಸ ಮಿಥ್ಯೆಗಳನ್ನು ಸೃಷ್ಟಿಸಿದ್ದು ಮತ್ತು ಪ್ರಚಾರ

ಮಾಡಿದ್ದು, ಇನ್ನೊಂದು ಗಂಡಸರ ಬಲವಂತ ಹಾಗೂ ಅಧಿಕಾರಗಳಿಂದ ಈ ಪದ್ಧತಿಯನ್ನು ಹೊಗಳಿರುವುದು. ಹಾಗೆಯೇ ಈ ಪದ್ಧತಿಯ ಬಗ್ಗೆ ಶುದ್ಧ ಮತ್ತು ಅಶುದ್ಧ ಪರಿಕಲ್ಪನೆಗಳ ಕ್ರಿಯಾ ವಿಧಿಗಳನ್ನು ಪರಿಚಯಿಸಿದ್ದು. ಇನ್ನೊಂದು ಮುಖ್ಯವಾಗಿ ಮಾತೃಪ್ರಧಾನತೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ಈ ಪದ್ಧತಿಗಳ ಆಚರಣೆಗಳನ್ನು ವರ್ಗಾಯಿಸಿದ್ದು ಈ ಪದ್ಧತಿಯ ಉಗಮಕ್ಕೆ ಕಾರಣವಾಗಿದೆ. ಮಹಿಳೆ ಎಂದರೆ ಯಾವುದೇ ಸ್ವಾತಂತ್ರ್ಯ ಮತ್ತು ತನ್ನ ಬದುಕಿನ ಬಗ್ಗೆ ಯಾವುದೇ ನಿರ್ಧಾರ ತಗೆದುಕೊಳ್ಳುವ ಅವಕಾಶಗಳು ಈ ಸಮಾಜದಲ್ಲಿ ಇಲ್ಲದಿರುವುದು ಮನುಷ್ಯತ್ವಕ್ಕೆ ಒಂದು ದೊಡ್ಡ ಸವಾಲಾಗಿದೆ. ಇಲ್ಲಿನ ವಿಶ್ಲೇಷಣೆಯನ್ನು ಗಮನಿಸಿದರೆ ಸುಮಾರು ೩೦೦ ವರ್ಷಗಳಿಂದ ಪೀಳಿಗೆಯಿಂದ ಪೀಳಿಗೆಗೆ ಹೆಣ್ಣು ಮಕ್ಕಳನ್ನು ಅರ್ಪಿಸಿ ತಮ್ಮ ಖಾಸಗಿ ಜೀವನವನ್ನು ಸಾರ್ಜನಿಕವಾಗಿಸಿದೆ ಎನ್ನುವುದರಲ್ಲಿ ಯಾವುದೇ ಅನುಮಾನಗಳು ಉಳಿದಿಲ್ಲ.

ದೇವದಾಸಿ ಪದ್ಧತಿ ಮತ್ತು ದೇವದಾಸಿಯರೆಂದರೆ ಯಾರು ಎನ್ನುವ ಚರ್ಚೆಗೆ ತಮ್ಮ ಅಭಿಪ್ರಾಯದ ಬಗ್ಗೆ ದೇವದಾಸಿ ಪದ್ಧತಿಯ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ: ಹೆಚ್ಚಿನ ದೇವದಾಸಿಯರು ಮುತ್ತು ಕಟ್ಟುವುದು ಅಂದರೆ ದೇವದಾಸಿ ಶೇಕಡ ೫೦ಕ್ಕೂ ಹೆಚ್ಚು ಈ ಉತ್ತರವನ್ನು ಕೊಟ್ಟಿದ್ದಾರೆ. ಮದುವೆಯಾಗದೇ ದೇವರ ಸೇವಾ ಮಾಡೋದು, ಕಂಕಣ ಕಟ್ಟಿ, ಸುರುಗು ಸುತ್ತುವುದು, ಭಿಕ್ಷಾ ಮಾಡುವುದು, ಜಗ ಹೊರುವುದು, ಹುಲಗಿ ಎಲ್ಲಮ್ಮನ ಸೇವೆ ಮಾಡುವುದು, ಕರಿಮಣಿ ಕಟ್ಟುವುದು, ಗಂಡುಮಕ್ಕಳಿಲ್ಲದ ಮನೆಗೆ ದಿಕ್ಕು ಅಂದರೆ ಮನೆಯ ಸಂಪೂರ್ಣ ಜವಾಬ್ದಾರಿ ತೆಗೆದುಕೊಳ್ಳುವುದು, ಹಾಗೆಯೇ ಗೊತ್ತಿಲ್ಲ ಎನ್ನುವ ಉತ್ತರವನ್ನು ಸಹ ನೀಡಿದ್ದಾರೆ. ಈಗಿರುವ ದೇವದಾಸಿಯ ಪದ್ಧತಿಯ ಬಗ್ಗೆ ಇದರ ಒಳಮರ್ಮ ಗೊತ್ತಿಲ್ಲ ಬರೀ ಬಲಿಪಶುಗಳಾಗಿದ್ದಾರೆ ಎಂಬುದು ಇದರಿಂದ ಗೊತ್ತಾಗುತ್ತದೆ. ದೇವರ ಸೇವೆ ಮಾಡುವವರು, ಪಡ್ಡಲಗಿ, ಜಗ, ಎಲ್ಲಮ್ಮ, ಹುಲಗಮ್ಮ ದೇವರು ಹೊರುತ್ತಾ ಭಿಕ್ಷೆ ಬೇಡುವುದು, ಲಗ್ನವಾಗದೇ ಇರುವುದು, ಪರ ಪುರುಷರೊಟ್ಟಿಗೆ ಸಂಬಂಧ, ಒಬ್ಬರು ಇಲ್ಲವೆ ಹಲವರೊಂದಿಗೆ ಸಂಬಂಧ ಇಟ್ಟುಕೊಳ್ಳುವುದು, ಮನೆಯಲ್ಲಿ ಗಂಡುಮಕ್ಕಳ ಸ್ಥಾನ ತುಂಬುವುದು, ಮನೆಯ ಎಲ್ಲಾ ಜವಾಬ್ದಾರಿಯನ್ನು ನಿಭಾಯಿಸುವುದು, ದೇವರ ಹೆಸರಲ್ಲಿ ಊರಿಗೆ ಅರ್ಪಿಸುವುದು, ಲೈಂಗಿಕವಾಗಿ ಕಾಮವನ್ನು ಈಡೇರಿಸುವ ಸೂಳೆಯ ರೀತಿಯಲ್ಲಿ ಇರುವುದು, ಮುಂತಾದವರು ದೇವದಾಸಿಯರು. ಈ ಪ್ರಶ್ನೆಗೆ ಸಂಬಂಧಿಸಿದಂತೆ ಪ್ರಸ್ತುತದ ಅಧ್ಯಯನದಲ್ಲಿ ಸಾಕಷ್ಟು ವಿಚಾರಗಳನ್ನು ಎರಡನೆಯ ಅಧ್ಯಾಯದ ಭಾಗದಲ್ಲಿ ಚರ್ಚಿಸಲಾಗಿದೆ. ದೇವದಾಸಿ ಪದ್ಧತಿಯನ್ನು ಮತ್ತು ಇದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಧಾರ್ಮಿಕ ವೇಶ್ಯಾವೃತ್ತಿ ಎಂದು ತಿಳಿಯಲಾಗಿತ್ತು, ಪ್ರತಿನಿಧಿರೂಪವಾದ ದೇವದಾಸಿಯೂ, ಸುಂದರ ಕನ್ಯೆಯೂ ಮತ್ತು ಸಂಗೀತ ನೃತ್ಯಾದಿ ಕಲೆಗಳಲ್ಲಿ ಪರಿಣತಳಾಗಿರುತ್ತಿದ್ದಳು. ಶುದ್ಧ ಹಾಗೂ ಪವಿತ್ರ ದೇಹದೊಂದಿಗೆ, ದೈವದ ಬಗ್ಗೆ ಸಂಪೂರ್ಣ ನಿಷ್ಠೆಯ ದ್ಯೋತಕವಾಗಿ ತನ್ನನ್ನು ತಾನು ಅರ್ಪಿಸಿಕೊಳ್ಳುವ ಪದ್ಧತಿ ಸ್ತ್ರೀ–ಪುರುಷರಿಬ್ಬರಲ್ಲಿ ಇತ್ತು. ಈ ಪದ್ಧತಿ ಪ್ರಾಚೀನ ಗ್ರೀಸ್ ಮತ್ತು ಈಜಿಪ್ಟಲ್ಲಿ ಕಂಡುಬರುತ್ತದೆ. ಈ

ಪದ್ಧತಿ ಸುಮಾರು ೧೭೦೦ ವರ್ಷಗಳಿಗಿಂತಲೂ ಹಿಂದಿನದು ಎಂದು ಗುರುತಿಸಿದ್ದಾರೆ. ದೇವದಾಸಿ ಎಂಬ ಪದದ ಅರ್ಥವನ್ನು ಇನ್ನೂ ಬೇರೆ ಬೇರೆ ಅರ್ಥಗಳಲ್ಲಿ ನೋಡಲಾಗಿದೆ: ದಕ್ಷಿಣ ಭಾರತದಲ್ಲಿ ದೇವದಾಸಿ ಪದ್ಧತಿಯು ಅಥವಾ ದೇವದಾಸಿಯು ಸಂಸ್ಕೃತ ಪದವಾಗಿದೆ. ಅಂದರೆ ದೇವಾ ಅಥವಾ ದೇವತೆಯ ದಾಸಿ ಎಂಬುದಾಗಿದೆ. ದೇವರ ಹೆಸರಲ್ಲಿ ದೇವಸ್ಥಾನಕ್ಕೆ ಮಹಿಳೆಯರನ್ನು ಅರ್ಪಿಸುವುದು, ತನ್ನ ಇಡೀ ಜೀವನವನ್ನು ಮುಡುಪಾಗಿಡಬೇಕಾಗಿತ್ತು. ದೇವದಾಸಿಯು ದೇವಾಲಯದ ಕೆಲಸದ ಜೊತೆಗೆ ಧಾರ್ಮಿಕ ಸಭೆ ಸಮಾರಂಭಗಳಲ್ಲಿ ನೃತ್ಯ, ಸಂಗೀತ ಕಾರ್ಯಗಳಲ್ಲಿ ಪಾಲ್ಗೊಳ್ಳಬೇಕಿತ್ತು. ಆದರೆ ಆಗಿನ ಕಾಲದಲ್ಲಿ ಅವರಿಗೆ ಸಮಾಜದಲ್ಲಿ ಉನ್ನತ ಗೌರವ ಸ್ಥಾನಮಾನ ಗಳಿದ್ದವು. ದೇವದಾಸಿ ಎಂಬುದನ್ನು ಸಮಾಜೋ-ಧಾರ್ಮಿಕ ಸಂಸ್ಥೆಯಲ್ಲಿ ಐತಿಹಾಸಿಕ ಸನ್ನಿವೇಶದಲ್ಲಿ ನೋಡಿದಾಗ ದೇವದಾಸಿಯರು ದೇವಸ್ಥಾನದ ಮಹಿಳೆಯರಾಗಿದ್ದರು, ಉನ್ನತ ಗೌರವಕ್ಕೆ ಪಾತ್ರರಾಗಿದ್ದರು, ಹಾಗೆಯೇ ಶೋಷಣೆಗೆ ಒಳಗಾಗಿದ್ದರು. ಭಾರತಕ್ಕಿಂತ ಮೊದಲೇ ಈ ತರದ ಪದ್ಧತಿ ಅಂದರೆ ವಯಸ್ಸಿನ ಹುಡುಗಿಯರನ್ನು ದೇವರ ಹೆಸರಿನಲ್ಲಿ ಅರ್ಪಿಸಿಬಿಡಲಾಗುತ್ತಿತ್ತು. ದೇವದಾಸಿ ಸಂಪ್ರದಾಯದ ವಿಕಾಸವು ಭಾರತಕ್ಕೆ ಅರ್ಯರ ಅಗಮನಕ್ಕಿಂತ ಮುಂಚಿತವಾಗಿಯೇ ಇತ್ತು. ದ್ರಾವಿಡರ ಮಾತೃಪ್ರಧಾನ ಸಮಾಜದ ಸ್ಮಾರಕ, ಅವಶೇಷಗಳಲ್ಲಿ ಈ ಪದ್ಧತಿಯನ್ನು ಕಾಣಲಾಗಿದೆ. ದಕ್ಷಿಣದಲ್ಲಿ ಆರ್ಯರ ಆಕ್ರಮಣದಿಂದ ಸಂಸ್ಕೃತಿಯಲ್ಲೆವು ಸಂಸ್ಕೃತೀಕರಣಗೊಂಡು ಮತ್ತು ಬ್ರಾಹ್ಮಣತ್ವದ ತಾತ್ವಿಕತೆಯು ದ್ರಾವಿಡರಲ್ಲಿಯು ಸಹ ಎಲ್ಲ ಕಡೆ ವಿಸ್ತರಿಸಿಕೊಂಡಿತು. ಈ ದೇವದಾಸಿ(ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು. ನಂತರ ಆರ್ಯರ ಮತ್ತು ಜಮೀನುದಾರರ ವಂಚನೆಯಿಂದ ಮತ್ತು ಒತ್ತಾಯದ ನಡುವೆ ಈ ಪದ್ಧತಿಯನ್ನು ವೈಭವೀಕರಿಸಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು."**(ಜೋಗನ್‌ಶಂಕರ್; ದೇವದಾಸಿ ಸಂಪ್ರದಾಯ,** ೧೯೮೮) ಭಾರತದಲ್ಲಿ ಪುರಾತನ ದ್ರಾವಿಡರ ಕಾಲದಲ್ಲಿ ಮಾನವನ ಅಂಗ ವಿಶೇಷವಾಗಿ ಲಿಂಗ(ಗಂಡು ಜನನೇಂದ್ರಿಯ)ವನ್ನು ಪೂಜಿಸುವುದು ಕ್ರಿಯಾವಿಧಿಯ ಭಾಗವಾಗಿತ್ತು. ಅಪರಿಚಿತ ವ್ಯಕ್ತಿಗಳಿಗೆ ಲೈಂಗಿಕ ತೃಪ್ತಿ ಪಡಿಸುವುದು ಒಂದು ರೀತಿಯ ಪವಿತ್ರ ವೇಶ್ಯಾವಾಟಿಕೆಯ ಪದ್ಧತಿಯಾಗಿತ್ತು. ದೇವದಾಸಿ ಸಂಸ್ಕೃತಿ ಒಂದು ಪರವಾನಿಗೆಯ ಕ್ರಿಯಾವಿಧಿಯಾಗಿತ್ತು ಜನರ ಮತ್ತು ಪುರೋಹಿತ ವರ್ಗದವರ ಹಿತಾಸಕ್ತಿಗಳನ್ನು ತೃಪ್ತಿಪಡಿಸುವ ಹುನ್ನಾರವೇ ಈ ಪದ್ಧತಿಗೆ ಕಾರಣವಾಗಿತ್ತು. ಉದ್ದೇಶಪೂರ್ವಕವಾಗಿ ದೇವದಾಸಿ ಪದ್ಧತಿಯು ಕೆಳಜಾತಿಯ ಮಹಿಳೆಯರನ್ನು ಮತ್ತು ಸಮುದಾಯ ವನ್ನು ಹತೋಟಿಯಲ್ಲಿಡಲು ಹಾಗೂ ಶೋಷಣೆಯನ್ನು ಮಾಡಲು ಸ್ಥಳೀಯ ಉನ್ನತ ಜಾತಿ ಮತ್ತು ವರ್ಗದವರು ರೂಢಿ ಸಂಪ್ರದಾಯಗಳನ್ನು ಪಾಲಿಸುವಂತೆ ಮಾಡುತ್ತಿದ್ದರು. ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ದೇವತೆ/ದೇವರುಗಳಿಗೆ ಮೀಸಲು ಬಿಡುವ ಪದ್ಧತಿಯನ್ನು ಅನುಸರಿಸಲಾಗುತಿತ್ತು. ಅವುಗಳ ಹೆಸರುಗಳೆಂದರೆ ಖಂಡೋಬ, ಜ್ಯೋತಿಬಾ, ಮುರಳಿ, ಅಂಬಾಬಾಯಿ, ಜೋಗವ್ವ, ತಳನಾಥ ಭಾವಿಣ, ಭೂತನಾಥ ನಾಯಿಕೆ, ಮಹಾಬಲೇಶ್ವರ, ಕಲಾವಂತಿ, ಧಾರೇಶ್ವರ,

ಬಸವಿ, ಮಾಯವ್ವ, ದುರ್ಗವ್ವ, ಜೋಗತಿ, ದ್ಯಾಮವ್ವ, ಮಾತಂಗಿ, ಮಾರುತಿ ಶರಣೆ ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ. ಜಾತಿಯಾಧಾರಿತವಾದ ಕೀಳುಮಟ್ಟದ ವೃತ್ತಿಯಲ್ಲಿ ಹಲವಾರು ಮಹಿಳೆಯರು ಆಚರಣೆಯನ್ನು ಮಾಡುತ್ತಿದ್ದಾರೆ. ದೇವದಾಸಿ ಪದ್ಧತಿಯಲ್ಲಿ ದೇವತೆ/ರಿಗೆ ಆರ್ಪಿಸಿಕೊಂಡರೆ ಇನ್ನಾವುದೇ ಕಾರಣದಿಂದ ಪರಪುರುಷರನ್ನು ಮದುವೆಯಾಗುವಂತಿಲ್ಲ. ಜೊತೆಗೆ ತನ್ನ ವಯಸ್ಸು ಇರುವವರೆಗೂ ಪರಪುರುಷರ ಲೈಂಗಿಕ ತೃಷೆಯನ್ನು ತೀರಿಸುವ ಗುಲಾಮಗಿರಿಯಾಗಿರಬೇಕು. ದೇವಸ್ಥಾನದಲ್ಲಿ ಪೂಜಾರಿಯು ದಲಿತ ಸಮುದಾಯಕ್ಕೆ ಇಲ್ಲಸಲ್ಲದ ಕಥೆಯನ್ನು ಕಟ್ಟಿ ದೇವರಿಗೆ ದಲಿತ ಯುವತಿಯರನ್ನು ಆರ್ಪಿಸಲು ಪರೋಕ್ಷವಾಗಿ ಅಣಿಮಾಡಿ ಅದರ ಆಚರಣೆಯನ್ನು ಮಾಡುತ್ತಿದ್ದರು. ಕರ್ನಾಟಕದಲ್ಲಿ ಸುಮಾರು ಒಂದು ಲಕ್ಷಕ್ಕೂ ಹೆಚ್ಚು ದೇವದಾಸಿಯರಿದ್ದಾರೆಂದು ಅಂದಾಜಿಸಿದ್ದಾರೆ. ಆದರೆ ಎಲ್ಲ ದೇವದಾಸಿಯರು ಲೈಂಗಿಕ ವೃತ್ತಿಯನ್ನು ನಡೆಸುತ್ತಿಲ್ಲ ಆದರೆ ಹೆಚ್ಚಿನ ಲೈಂಗಿಕ ಕಾರ್ಯಕರ್ತರು ದೇವದಾಸಿರಾಗಿದ್ದಾರೆ.[೬] **(ಕಬೀರ್‌ಶರ್ಮ: ಬಾರನ್ ಟು ಬಿ ಡೂಮ್ಡ್, ೨೦೧೫)** ದೇವದಾಸಿ ಪದ್ಧತಿಯ ಬಗ್ಗೆ ಮತ್ತು ದೇವದಾಸಿ ಎಂದರೆ ಯಾರು ಎನ್ನುವುದಕ್ಕೆ ನಿರ್ದಿಷ್ಟವಾದ ಉತ್ತರಗಳಿರುವುದಿಲ್ಲ. ಆದರೆ ಇಲ್ಲಿ ಜಾತಿ, ವರ್ಗ, ಸಾಮಾಜಿಕ ಲಿಂಗತ್ವ, ಲೈಂಗಿಕತೆ, ಧಾರ್ಮಿಕ ನಿಯಂತ್ರಣ ಇವೆಲ್ಲವೂ ಸಹ ಈ ಪದ್ಧತಿ ಮತ್ತು ಪದ್ಧತಿಗೆ ಬಲಿಯಾದವರನ್ನು ನಿಯಂತ್ರಿಸುತ್ತದೆ.

**ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳು**

ದೇವದಾಸಿ ಪದ್ಧತಿಗೆ ನಿರ್ದಿಷ್ಟವಾಗಿ ಕಾರಣ ಹೇಳುವುದು ಸಾಧ್ಯವಿಲ್ಲ. ಅದರೂ ದೇವದಾಸಿಯರು ತಮ್ಮ ಅನುಭವದ ಆಧಾರದಲ್ಲಿ ಸಂದರ್ಶನದಲ್ಲಿ ಹಂಚಿಕೊಂಡಿದ್ದಾರೆ. **ಶೇ. ೧೬ರಷ್ಟು ದೇವದಾಸಿಯರು ಬಡತನ, ಮೂಢನಂಬಿಕೆ, ಅಂಧಾನುಕರಣೆ ಪ್ರಮುಖ ಕಾರಣವನ್ನು ಗುರುತಿಸಿದ್ದಾರೆ. ಶೇ. ೪೮ರಷ್ಟು ದೇವದಾಸಿಯರು ಅನಕ್ಷರತೆ ಎಂದು ತಮ್ಮ ಅನುಭವವನ್ನು ಹಂಚಿಕೊಡಿದ್ದಾರೆ. ಶೇ. ೨೦ರಷ್ಟು ಅಂಧಾನುಕರಣೆ ಮತ್ತು ಮೂಢನಂಬಿಕೆ ಕಾರಣ ಎಂದಿದ್ದಾರೆ. ಸುಮರು ಶೇ. ೧೦ರಷ್ಟು ದೇವದಾಸಿಯರು ಬಡತನ ಮತ್ತು ಮೂಢನಂಬಿಕೆ ಕಾರಣವೆಂದು ಗುರುತಿಸಿದ್ದಾರೆ. ಶೇ. ೨ರಷ್ಟು ದೇವದಾಸಿಯರು ಮಾತ್ರ ಧಾರ್ಮಿಕತೆಯ ಬಗ್ಗೆ ತಿಳಿಸಿದ್ದಾರೆ.** ಈ ಪ್ರಶ್ನೆಗೆ ಇವರಲ್ಲಿ ವಾಸ್ತವವಾಗಿ ಉತ್ತರವಿಲ್ಲ. ಏಕೆಂದರೆ ಸಮಾಜವು ತನ್ನ ಎಲ್ಲ ನಿರ್ಧಾರಗಳನ್ನು ವಿಧಿಲಿಖಿತವೆಂಬಂತೆ ಪಾಲಿಸುತ್ತಾ ಮತ್ತು ಪಾಲಿಸುವಂತೆ ಮಾಡುತ್ತಾ ಬಂದಿದೆ. ಅಂಧಾನುಕರಣೆ ಮತ್ತು ಬಡತನ ಈ ಪದ್ಧತಿಗೆ ಬಹು ಮುಖ್ಯ ಕಾರಣ. ಇದಲ್ಲದೆ ಸಮಾಜದಲ್ಲಿ ಗಂಡಸಿನ ಅಶ್ರಯದಾತನ ವ್ಯವಸ್ಥೆಯಲ್ಲಿ ಧರ್ಮವು ಸಂಸ್ಕೃತಿಯನ್ನು ತನ್ನಷ್ಟಕ್ಕೆ ತಾನೆ ಅನುರೂಪಗೊಳಿಸಿದೆ. ನಂಬಿಕೆ, ಮೌಲ್ಯಗಳು ಮತ್ತು ಮಾನವನ ನಡವಳಿಕೆಗಳು ಗಂಡಸರಿಂದ ಆಕ್ರಮಣಕ್ಕೊಳಪಟ್ಟಿವೆ.**(ತಾರಾಚಂದ್** ಕೆ.ಸಿ. ೧೯೮೭) ಈ ದೇವದಾಸಿ (ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು. ನಂತರ ಆರ್ಯರ ಮತ್ತು ಜಮೀನುದಾರರ ವಂಚನೆಯಿಂದ ಮತ್ತು ಒತ್ತಾಯದ

ನಡುವೆ ಈ ಪದ್ಧತಿಯನ್ನು ವೈಭವೀಕರಿಸಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು (**ಜೋಗನ್‌ಶಂಕರ್; ದೇವದಾಸಿ ಸಂಪ್ರದಾಯ, ೧೯೮೮**). ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ. ಮತ್ತು ಸಾಂಸ್ಕೃತಿಕ ಆಚರಣೆಗಳಿಂದ ಕೂಡಿದೆ(**ಲಾರೆನ್ ಬೇತ್ ಜಾಕೋಬ್ಸ್**). ಲಿಂಗತ್ವ, ಜಾತಿ ಮತ್ತು ಲೈಂಗಿಕ ತಾರತಮ್ಯತೆ ಯಾವ ರೀತಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾತಿ ಏಣಿಶ್ರೇಣಿಯಲ್ಲಿ ತಳವರ್ಗದ ಸಮುದಾಯಗಳ ಮೇಲೆ ಸಾಂಸ್ಕೃತಿಕವಾಗಿ ಬಲಿಷ್ಠ ಮತ್ತು ಉನ್ನತ ಜಾತಿಗಳು ಹೇಗೆ ತಮ್ಮ ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿವೆ ಎಂಬುದನ್ನು ವಿವರಿಸಿದ್ದಾರೆ.(**ಎಸ್ ಆನಂದಿ, ೨೦೧೩**), ಈ ಪದ್ಧತಿಗೆ ಮೂಲ ಕಾರಣ ಜಮೀನುದಾರ ಮತ್ತು ಪೂಜಾರಿಗಳ(ಪುರೋಹಿತರ) ದ್ರೋಹ ಮತ್ತು ವಂಚನೆಯಿಂದ, ಮೂಢನಂಬಿಕೆ, ಬಡತನಗಳಿಂದ ಈ ಪದ್ಧತಿ ಹೆಚ್ಚು ಚಾಲ್ತಿಗೆ ಬಂತು ಎಂದು ತಿಳಿಸಿದ್ದಾರೆ(**ಜಯಕುಮಾರ್ ಕೆ ಮತ್ತು ದಿಭಾರತಿ ಹಾಲ್ದಾರ್**), ಇತ್ತೀಚಿನ ದಿನಗಳಲ್ಲಿ ದೇವದಾಸಿ ಪದ್ಧತಿಯ ಕಾರಣಕ್ಕೆ ಮೂಡನಂಬಿಕೆ ಇದ್ದರೂ ಸಹ ಬಡತನ ಕುಟುಂಬದಲ್ಲಿ ಎದ್ದುಕಾಣುತ್ತಿರುತ್ತದೆ. ಈ ಕಾರಣವು ಸಹ ಪದ್ಧತಿಗೆ ಪ್ರತ್ಯಕ್ಷ ಕಾರಣವಾಗಿದೆ.(**ಕಬೀರ್‌ಶರ್ಮ: ಬಾರನ್ ಟು ಬಿ ಡೂಮ್ಡ್, ೨೦೧೫**) ತನ್ನ ಎಳೆಯ ವಯಸ್ಸಿನಲ್ಲಿ ತಿಳಿಯದೆ, ತಂದೆ-ತಾಯಿಗಳ ಅಜ್ಞಾನದಿಂದ ದೇವದಾಸಿಯಾದ ಹುಡುಗಿ ಸೂಳೆಯಾಗಿ ತನ್ನ ಬಾಳು ಸಾಗಿಸಿ, ವಯಸ್ಸಾದಂತೆ ರೋಗಿಷ್ಠೆಯಾಗಿ ತನ್ನ ಮನೆಗೆ ಹಿಂದಿರುಗುತ್ತಾಳೆ. ಅಜ್ಞಾನ, ಬಡತನ, ಶೋಷಣೆ, ಸದಾ ಅನಾವೃಷ್ಟಿ ಹೊಂದಿದ ವಾತಾವರಣಗಳೇ ಈ ಪದ್ಧತಿಗೆ ಕಾರಣ(**ಕೆ.ಜಿ. ಗುರುಮೂರ್ತಿ, ೧೯೯೬**) ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಇವರ ಪ್ರಕಾರ ವಂಶಪಾರಂಪರ್ಯವಾಗಿ ೨೬.೪೧%, ಗಂಡುಮಕ್ಕಳಿಲ್ಲವೆಂದು ೨೬.೬೪%, ಅನಾರೋಗ್ಯದ ಕಾರಣ, ೧೩.೯೧%, ಕುಟುಂಬಕ್ಕೆ ದೇವರ ಕಾಟವೆಂದು ೧೧.೨೧%, ತಂದೆ-ತಾಯಿ ನೋಡಿಕೊಳ್ಳಲು, ೩.೦೫%, ಜಡೆ ಬಂದಿದೆಯೆಂದು, ೨.೯%, ಜಗ ಪೂಜಿಸುವ ಸಲುವಾಗಿ, ೨.೫೨%, ಬಡತನ ೧೦.೨೭% ಹಾಗೂ ಇತರೆ ಕಾರಣಗಳು ೨.೭% ಕಂಡುಬಂದಿವೆ. ದೇವದಾಸಿ ಮಾಡಲು ಕಂಡುಬಂದ ಮೇಲಿನ ಕಾರಣಗಳು ಕೇವಲ ಬಾಹ್ಯ ಕಾರಣಗಳಾಗಿದ್ದು, ನಿಜವಾದ ಕಾರಣ ಬಡತನವಾಗಿದೆ. (**ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ**) ಅಂತಿಮವಾಗಿ ದೇವದಾಸಿ ಪದ್ಧತಿಗೆ ನೇರವಾಗಿ ಜಾತಿ ಮತ್ತು ಪುರುಷಪ್ರಾಧಾನ್ಯತೆಗಳು ಕಾರಣವಾಗಿವೆ.(**ಪ್ರತಿಭಾ ಬಿ. ದೇಸಾಯಿ, ೨೦೧೨**) ಈ ಪದ್ಧತಿಗೆ ಬಡತನ, ಮೂಢನಂಬಿಕೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ ಎಂದು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.(**ನಡೋಣಿ ವಿವೇಕಾನಂದ**) ಬಡತನ ಮತ್ತು ಮೂಢನಂಬಿಕೆಯೇ ಈ ಪದ್ಧತಿಗೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ(**ಸಂಜೀವ್ ಕುಮಾರ್ ನಿರ್ಮಲ್ಕಾರ್, ೨೦೦೮**). ಈ ಪದ್ಧತಿಗೆ

ಪ್ರಮುಖ ಕಾರಣಗಳೆಂದರೆ ಆರ್ಥಿಕ ದುಸ್ಥಿತಿ ಮತ್ತು ಹಳೆಯ ಸಂಪ್ರದಾಯಗಳ ಅನುಕರಣೆ ಮತ್ತು ಆಚರಣೆಗಳಾಗಿವೆ. ಅದರೂ ಸಹ ಬಡತನ, ಮೂಡನಂಬಿಕೆ, ಸಮಾಜದ ಇತರೆ ಬಾಹ್ಯ ಅಂಶಗಳು ಕಾರಣವಾಗಿವೆ ಎಂಬ ಅಂಶವು ಸಾಮಾನ್ಯವಾಗಿ ಕಂಡುಬಂದಿದೆ.

**ದೇವದಾಸಿ ಪದ್ಧತಿಯ ಆಚರಣೆಗಳು:** (ಸಮಾಜೋ-ಸಾಂಸ್ಕೃತಿಕ, ಲಲಿತಕಲೆ ಮತ್ತು ಧಾರ್ಮಿಕತೆಗಳ ಹಿನ್ನಲೆಯಲ್ಲಿ): ಪ್ರಸ್ತುತ ಪ್ರಶ್ನೆಯನ್ನು ಎರಡು ರೀತಿಯಲ್ಲಿ ನೋಡಬಹುದು. ಅಂದರೆ ಒಂದು ದೇವದಾಸಿ ಪದ್ಧತಿಯ ಆಚರಣೆಗಳು ಹಾಗೂ ದೇವದಾಸಿಯನ್ನಾಗಿ ಮಾಡುವಾಗ ಇರುವಂತಹ ಆಚರಣೆಗಳು ಹಾಗೆಯೇ ಯಾರು ಈ ಹೊಸ ದೇವದಾಸಿಯನ್ನಾಗಿ ಮಾಡಲು ಮುನ್ನಡೆಸುತ್ತಾರೆ ಎಂಬ ಪ್ರಶ್ನೆಗಳಿಗೆ ಹಲವು ರೀತಿಯ ಉತ್ತರಗಳು ಬಂದಿವೆ. ಸಾಮಾನ್ಯವಾಗಿ ಕೆಲವು ರೀತಿರಿವಾಜುಗಳನ್ನು ಸಮಾಜೋ-ಸಾಂಸ್ಕೃತಿಕ, ಲಲಿತಕಲೆ ಮತ್ತು ಧಾರ್ಮಿಕತೆಗಳ ವಿಧಿಗಳ ಅನುಸಾರವಾಗಿ ನೋಡಲಾಗಿದೆ, ಎಲ್ಲಾ ದೇವದಾಸಿಯರು ಕೊಟ್ಟಂತಹ ಹೇಳಿಕೆಯು; ದೇವರ ಹೆಸರಲ್ಲಿ ಸುರಗಿ ಸುತ್ತಿ, ಕಳಸ ಹಿಡಿದು, ಪಡಲಗಿ ಹಿಡಿದು(ಜೋಗ, ಎಲ್ಲಮ್ಮನ ವಿಗ್ರಹ) ಭಿಕ್ಷೆಯನ್ನು ಬೇಡುವುದು ಇದು ಊರೊಳಗೆ ಹಾಗೂ ಬೇರೆ ಊರುಗಳಲ್ಲಿಯೂ ಸಹ ಇರಬಹುದು. ಹಾಡು ಹಾಡುವುದು, ಕೆಲವರ ಪ್ರಕಾರ ನೃತ್ಯ ಮಾಡುವುದು, ನಾಟಕ ಹಾಗೂ ಸಂಗೀತ ನಡೆಸೊದು ಇತ್ಯಾದಿ ಆಚರಣೆಗಳು ಇವೆ. ಒಮ್ಮೆ ಜೀವನದಲ್ಲಿ ದೇವದಾಸಿಯಾಗಿ ಬಿಟ್ಟರೆ ಮತ್ತೆ ಮದುವೆ ಆಗಂಗಿಲ್ಲ. ಜೀವನ ಪರ್ಯಂತ ಬೇರೆಯವರ ಆಶ್ರಯದಲ್ಲಿ ಬದುಕಬೇಕು. ತಮ್ಮ ಸಂಗಾತಿಯ ಜೊತೆ ಕೊನೆಯವರೆಗೂ ಇಲ್ಲಾಂದ್ರೆ ಹೆಚ್ಚು ಮಂದಿ ಜೊತೆ ಸಹವಾಸ ಮಾಡೋದು ಇದೆ. ಇದೆಲ್ಲ ದೇವರು ಕೊಟ್ಟ ಶಾಪ/ವರ ಹೀಗೆ ಗಮನಕೇಂದ್ರಿತ ಗುಂಪಿನ ಚರ್ಚೆಯಲ್ಲಿ ಮಾತನಾಡಿದ್ದರು. ಕೆಲವು ಕ್ರಿಯಾ ವಿಧಿಗಳನ್ನು ಪಾಲಿಸಬಹುದು, ಆದರೆ ಮದುವೆ ಇಲ್ಲ. ಊರಲ್ಲಿ ಯಾರದೋ ಜೊತೆ ಇರಬೇಕು, ಇಲ್ಲವೇ ತುಂಬಾ ಜನರ ಜೊತೆ ಸಂಬಂಧ ಇಟ್ಟುಕೊಳ್ಳಬೇಕು ಮತ್ತು ತಮ್ಮ ಮಕ್ಕಳಿಗೆ ತಂದೆಯ ಬಗ್ಗೆ ಮಾಹಿತಿ ಇರೋದಿಲ್ಲಾ (ಆಸ್ಮಿತೆನೇ) ಇಲ್ಲದಿರುವುದು ಇವೆಲ್ಲ ಗಂಭೀರವಾದ ಪ್ರಶ್ನೆಗಳು. ಬೂದಿ ಮುಚ್ಚಿದ ಕೆಂಡದಂತೆ ಹೊಗೆ ಬರುತ್ತಲೇ ಇರುತ್ತದೆ. ಈ ಆಚರಣೆಯನ್ನು ಹೊಸ ದೇವದಾಸಿ ಮಾಡುವಾಗ ಹಿರಿಯ ದೇವದಾಸಿಯರು ಸಾಮಾನ್ಯವಾಗಿ ಮುಂದೆ ನಿಂತು ಕಾರ್ಯ ಮುಗಿಸುತ್ತಾರೆ. ಊರಿನಲ್ಲಿ ಅಥವಾ ಹುಲಗಿ ದೇವಸ್ಥಾನದಲ್ಲಿ ಪುಜಾರಿಯು ಈ ಪದ್ಧತಿಯನ್ನು ಮಾಡುವಾಗ ಕಾರ್ಯ ಮಾಡಿ ಕೊಡುತ್ತಾರೆ ಮತ್ತು ಆಯಾ ಸಮುದಾಯದವರು ಮುಂದೆ ನಿಂತು ನಡೆಸಿಕೊಡುವುದು ವಾಡಿಕೆಯಲ್ಲಿತ್ತು ಎಂದು ಪ್ರತಿಕ್ರಿಯಿಸಿದ್ದಾರೆ. ದೇವದಾಸಿ ಪದ್ಧತಿಯನ್ನು ಮತ್ತು ಇದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಧಾರ್ಮಿಕ ವೇಶ್ಯಾವೃತ್ತಿ ಎಂದು ತಿಳಿಯಲಾಗಿತ್ತು, ಪ್ರತಿನಿಧಿರೂಪವಾದ ದೇವದಾಸಿಯೂ, ಸುಂದರ ಕನ್ಯೆಯೂ ಮತ್ತು ಸಂಗೀತ ನೃತ್ಯಾದಿ ಕಲೆಗಳಲ್ಲಿ ಪರಿಣತಳಾಗಿರುತ್ತಿದ್ದಳು. ಸಾರ್ವಜನಿಕರಲ್ಲಿ ಒಳ್ಳೆಯ ಸಲಿಗೆಯ ಮನೋಭಾವನೆಯಿಂದ ಉಚ್ಚ್ರಾಯ ಸ್ಥಿತಿಯಲ್ಲಿ ಸಾಂಸ್ಕೃತಿಕ ನೆಮ್ಮದಿ ಹಾಗೂ ತೃಪ್ತಿಯಿಂದ ಕೂಡಿದ ಜೀವನ ನಡೆಸುತ್ತಿದ್ದಳು. ದೇವರ ಹೆಸರಲ್ಲಿ ಮಹಿಳೆಯರನ್ನು ಅರ್ಪಿಸುವುದು

ಸಾರ್ವತ್ರಿಕ ಆಚರಣೆಯಾಗಿತ್ತು. ಈ ರೂಢಿ ಪದ್ಧತಿಯು ಕಾಲ ಮತ್ತು ವಿವಿಧ ಸಂಸ್ಕೃತಿಗಳ ಹಿನ್ನೆಲೆಗಳಿಂದ ಪ್ರಪಂಚದಲ್ಲಿ ಹಲವು ಕಡೆ ಈ ಪದ್ಧತಿಯಿತ್ತು. ಸಾವಿರಾರು ವರ್ಷಗಳ ಹಿಂದೆ ಮೆಸೊಪೊಟೊಮಿಯ, ಗ್ರೀಕ್, ಈಜಿಪ್ಟ್ ಮತ್ತು ಬ್ಯಾಬಿಲೋನಿಯ ಮುಂತಾದ ದೇಶಗಳಲ್ಲಿ ಧಾರ್ಮಿಕ ಹೆಸರಲ್ಲಿ ಮಹಿಳೆಯರನ್ನು ಅರ್ಪಿಸುವ ಪದ್ಧತಿ ಇತ್ತು ಹಾಗೂ ಈ ಪದ್ಧತಿಯು ತುಂಬಾ ಪವಿತ್ರವೆಂದು ನಂಬಲಾಗಿತ್ತು. ಸಂಶೋಧಕ ಜೇಮ್ಸ್ ಫ್ರೇಜರ್ ಅವರ ಪ್ರಕಾರ ಈ ಪದ್ಧತಿಗೆ ಬಹು ಮುಖ್ಯ ಕಾರಣಗಳನ್ನು ಎರಡು ರೀತಿಯಲ್ಲಿ ವಿವರಿಸಿದ್ದಾನೆ. ಒಂದು ಈ ಪದ್ಧತಿಯ ಬಗ್ಗೆ ಹೊಸ ಮಿಥ್ಯೆಗಳನ್ನು ಸೃಷ್ಟಿಸಿದ್ದು ಮತ್ತು ಪ್ರಚಾರ ಮಾಡಿದ್ದು, ಇನ್ನೊಂದು ಗಂಡಸರ ಬಲವಂತ ಹಾಗೂ ಅಧಿಕಾರಗಳಿಂದ ಈ ಪದ್ಧತಿಯನ್ನು ಹೊಗಳಿರುವುದು. ಹಾಗೆಯೇ ಈ ಪದ್ಧತಿಯ ಬಗ್ಗೆ ಶುದ್ಧ ಮತ್ತು ಅಶುದ್ಧ ಪರಿಕಲ್ಪನೆಗಳ ಕ್ರಿಯಾವಿಧಿಗಳನ್ನು ಪರಿಚಯಿಸಿದ್ದು. ಇನ್ನೊಂದು ಮುಖ್ಯವಾಗಿ ಮಾತೃಪ್ರಧಾನತೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ಈ ಪದ್ಧತಿಗಳ ಆಚರಣೆಗಳನ್ನು ವರ್ಗಾಯಿಸಿದ್ದು ಈ ಪದ್ಧತಿಯ ಉಗಮಕ್ಕೆ ಕಾರಣವಾಗಿದೆ(**ಎವಲ್ಯೂಷನ್ ಆಫ್ ದಿ ದೇವದಾಸಿ ಸಿಸ್ಟಮ್, ವೀಕೀ ಜೆಂಡರ್, ಇಂಟರ್ನೆಟ್**). ದೇವದಾಸಿಯರ ಸಾಂಸ್ಕೃತಿಕ ಕಲೆಗಳನ್ನು ಗೌರವಿಸಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಮಟ್ಟದ ಜೀವನವನ್ನು ನಡೆಸು ವಂತಾಯಿತು(**ಜೋಯಾ ಜೈದಿ**). ದೇವರ ಸೇವೆ ಮತ್ತು ಸಂಗೀತ, ನೃತ್ಯ ಇತ್ಯಾದಿ ಲಲಿತಕಲೆಗಳಲ್ಲಿ ಭಾಗವಹಿಸುತ್ತಿದ್ದರು. ದೇವರ ಸೇವೆಗೆ ಮುತ್ತಿನ ತಾಳಿಯನ್ನು ಕಟ್ಟಿಸಿಕೊಂಡ ಈಕೆಯನ್ನು ವಯೋಮಾನಕ್ಕೆ ಅನುಗುಣವಾಗಿ ಹಾಲು ಮುತ್ತು, ಸೂಳೆ ಮುತ್ತು ಮತ್ತು ಜೋಗತಿ ಮುತ್ತು ಕಟ್ಟಿಸಿಕೊಂಡವರು ಎಂದು ಮೂರು ಭಾಗ ಮಾಡಲಾಗಿದೆ. ಸಂಸ್ಕೃತ ಧಾರ್ಮಿಕ ಸಂಪ್ರದಾಯದಲ್ಲಿ ದೇವದಾಸಿಯರನ್ನು ರಂಭಾ ಮತ್ತು ರೇಣುಕಾ ಎಂದು ಎರಡು ಸಂಪ್ರದಾಯವಾಗಿ ಮಾಡಲಾಗಿದೆ. ಮೊದಲನೆಯ ಗುಂಪು ಲಲಿತಕಲೆಗೆ, ಎರಡನೆಯ ಗುಂಪು ದೈಹಿಕ ಸುಖದ ಸೇವೆಗೆ ಮೀಸಲಿಟ್ಟವರು. ಅಂದರೆ ದೇವರಿಗೆ ರಂಗ ಮತ್ತು ಅಂಗ ಭೋಗ ನೀಡಲು ಮೀಸಲಾದವರು. ಈ ಸಂಪ್ರದಾಯದ ಹೆಸರೇ ಹೇಳುವಂತೆ ರೇಣುಕಾ ಸಂಪ್ರದಾಯದ ದೇವದಾಸಿ ಪದ್ಧತಿ ಪ್ರಚಾರದಲ್ಲಿದೆ. ಇಂದು ಸಂಪ್ರದಾಯ ಬಿಟ್ಟು ಸೂಳೆಗಾರಿಕೆಗೆ ಮಾಡಲು ಹೋಗುವ ಹುಡುಗಿಯರಿಗೆ ರಹದಾರಿಯಾಗಿ ದೇವದಾಸಿ ದೀಕ್ಷೆ ನೀಡಲಾಗುತ್ತಿದೆ. ಐದು ಹಿರಿಯ ಜೊಗತಿಯರು ಹುಡುಗಿಗೆ ಹೊಸ ಹಸಿರು ಸೀರೆ, ಹಸಿರು ಬಳೆ ತೊಡಿಸಿ, ಹಸೆ ಹಾಕಿ ದೇವಸ್ಥಾನದ ದೇವಿ ವಿಗ್ರಹ ಅಥವಾ ದೇವಿಯ ಜಗದ ಮುಂದೆ ಕುಳ್ಳಿರಿಸಿ ಅವಳಿಗೆ ಹರಿಸಿನ ಹಚ್ಚಿ, ಚೌಡಿಕೆ ಬಾರಿಸುತ್ತಾ ಎಲ್ಲಮ್ಮ ದೇವಿಯ ಹಾಡು ಹೇಳುತ್ತಾ ಹಸಿನೂಲಿನಲ್ಲಿ ಪೋಣಿಸಿರುವ ಮೂರು ಬಿಳಿ ಹಾಗೂ ಎರಡು ಕೆಂಪು ಗಾಜಿನ ಮಣಿಗಳ(ಮುತ್ತು ಎನ್ನುತ್ತಾರೆ) ಸರವನ್ನು ದೇವಿಯ ಪೂಜಾರಿ ಪೂಜೆ ಮಾಡಿ ಹಿರಿಯ ಜೋಗತಿಯರಿಗೆ ಕೊಡುತ್ತಾನೆ. ಜೋಗತಿಯರು ಹುಡುಗಿಗೆ ಜೋಗತಿ ನಿಯಮಗಳನ್ನು ಹೇಳಿಸಿ, ಬಿಳಿ, ಕೆಂಪು ಮಣಿಗಳ ಸರವನ್ನು ಅವಳ ಕೊರಳಿಗೆ ಕಟ್ಟುತ್ತಾರೆ. ದೇವಿಯ ವಿಗ್ರಹವಿರುವ ಒಂದು ಬುಟ್ಟಿಯನ್ನು ಪೂಜಿಸಿ ಅವಳಿಗೆ ನೀಡುತ್ತಾರೆ. ಈ ಬುಟ್ಟಿಯನ್ನು ಜಗ(ಜಗತ್ತು ಎನ್ನುವ ಅರ್ಥದಲ್ಲಿ) ಎನ್ನುತ್ತಾರೆ. ಮುತ್ತು ಕಟ್ಟುವ ಕಾರ್ಯ

ನೆರವೇರಿಸಿದ ಐದು ಹಿರಿಯ ಜೋಗತಿಯರಿಗೆ ಮತ್ತು ಪೂಜಾರಿಗೆ ಹೊಸ ಉಡುಗೆ, ಬೇಳೆ, ಬೆಲ್ಲ, ಸಿಹಿ ತಿಂಡಿ, ಕಾಣಿಕೆಯನ್ನು ಹುಡುಗಿಯ ಮನೆಯವರು ಕೊಡುತ್ತಾರೆ. ಹೀಗೆ ಮುತ್ತು ಕಟ್ಟಿಕೊಂಡು ಗ್ರಾಮಕ್ಕೆ ಹಿಂದಿರುಗಿದ ನಂತರ ಹುಡುಗಿಯ ಮನೆಯವರು ಆ ಊರಿನಲ್ಲಿ ವಾಸವಾಗಿರುವ ಪ್ರತಿ ಬಣದ (ಮನೆತನದ) ಹಿರಿಯ ಜೋಗತಿಯರನ್ನು ಕರೆದು ಹಡಲಿಗೆ ತುಂಬಿ ಕನಿಷ್ಠ ರೂ. ೧೦೧ ಕಾಣಿಕೆ ನೀಡಿದ ನಂತರವೇ ಮುತ್ತು ಕಟ್ಟಿಸಿಕೊಂಡ ಹುಡುಗಿ ಜೋಗತಿ ಸ್ಥಾನ ಪಡೆಯುತ್ತಾಳೆ. ಆ ನಂತರವೇ ಗ್ರಾಮದವರು ಧಾರ್ಮಿಕ ವಿಧಿಗಳನ್ನು ನೆರವೇರಿಸಲು ಕರೆಯುತ್ತಾರೆ. ಇದಲ್ಲದೆ ಕೇರಿಯ ಜನರನ್ನು ಕರೆದು ಸಿಹಿ ಅಥವಾ ಮಾಂಸಾಹಾರಿ ಊಟವನ್ನು ಮನೆಯವರು ನೀಡಬೇಕು. ದೇವತೆಯ ರಕ್ಷಣೆ ಬೇಡಿ ಬಂದ ಭಕ್ತರು ಹಿಂದಿನ ಕಾಲದಲ್ಲಿ ಪ್ರತಿರೂಪವಾದ ದೇವದಾಸಿಯೊಡನೆ ದೇವಸ್ಥಾನದಲ್ಲೇ ಲೈಂಗಿಕ ಸಂಬಂಧ ಹೊಂದಬೇಕಿತ್ತು. ಆಗ ಜನರಿಗೆ ಒಳಿತಾಗುತ್ತಿತ್ತು ಎಂಬ ನಂಬಿಕೆಯಿತ್ತು. ಕಾಲಾ ನಂತರ ಸಂಸ್ಕೃತಿ ಮತ್ತು ಪುರುಷಪ್ರಧಾನ ದೇವರುಗಳ ಪ್ರಭಾವದಿಂದ ದಾಸಿಯರನ್ನು ದೇವಸ್ಥಾನದಿಂದ ಹೊರಗೆ ಹಾಕಿದರು. ಹಾಗೆಯೇ ಇದು ಸೂಳೆಯರ ಸ್ಥಾನಕ್ಕೆ ಇಳಿಯಿತು(**ಕೆ.ಈ. ಗುರುಮೂರ್ತಿ,** ೧೯೯೬). ದೇವದಾಸಿ ಪದ್ಧತಿಯ ಮೇಲೆ ಧರ್ಮದ ಕರಾಳ ಹಸ್ತ ಮತ್ತು ಪ್ರಭಾವವನ್ನು ಬೀರಿದೆ. ದೇವದಾಸಿ ಪದ್ಧತಿಯ ಸೂಳೆಗಾರಿಕೆಗೆ ಧರ್ಮದ ಮಾನ್ಯತೆಯನ್ನು ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಗುರುತಿಸಿದ್ದಾರೆ. ಈ ಆಚರಣೆಯು ಭಾರತದ ಕೆಲವು ಭಾಗಗಳಾದ ಮಧ್ಯಭಾರತ, ಪೂರ್ವದ ಪೂರಿಯಲ್ಲಿ, ದಕ್ಷಿಣ ಭಾರತದಲ್ಲಿ ಬಹುಮುಖ್ಯವಾಗಿ ಆಂಧ್ರಪ್ರದೇಶ, ಕರ್ನಾಟಕದಲ್ಲಿ ಗುರುತಿಸಬಹುದು. ಕೆಳಜಾತಿಯ ಜನರನ್ನು ಶೋಷಣೆ ಮಾಡುತ್ತಾ ಹೆಣ್ಣುಮಕ್ಕಳನ್ನು ಶೋಷಣೆ ಮಾಡಲೆಂದೇ ಧರ್ಮದ ಹೆಸರಿನಲ್ಲಿ ಈ ವ್ಯವಸ್ಥೆಯನ್ನು ರೂಪಿಸಲಾಗಿದೆ.

**ದೇವದಾಸಿ ಪದ್ಧತಿ ಪ್ರಸ್ತುತದಲ್ಲಿಯೂ ಸಹ ಇದೆ ಹಾಗೆಯೇ ನಿರಂತರವಾಗಿ ಮುಂದುವರಿಯುತ್ತಾ ಹೋಗುತ್ತಿದೆ ಇದಕ್ಕೆ ಏನು ಕಾರಣ? ಮತ್ತು ಯಾರು ಕಾರಣ ಎಂಬುದರ ಚರ್ಚೆ:** ಪ್ರಸ್ತುತದ ಪ್ರಶ್ನೆಗೆ ಪ್ರಶ್ನಾವಳಿಯಲ್ಲೂ ಹಾಗೂ ಗಮನಕೇಂದ್ರಿತ ಗುಂಪುಚರ್ಚೆಯಲ್ಲೂ ಸಹ ಚರ್ಚೆಗೆ ಒಳಪಟ್ಟಿವೆ. ಹೆಚ್ಚಿನ ದೇವದಾಸಿಯರು ಮೂಢನಂಬಿಕೆ, ಅಜ್ಞಾನ, ಅನಕ್ಷರತೆ, ಅರೆ ತಿಳುವಳಿಕೆ, ಧಾರ್ಮಿಕ ಭಾವನೆ, ದೇವರು ಇತ್ಯಾದಿ ಉತ್ತರಗಳನ್ನು ನೀಡಿದ್ದಾರೆ. ನಮ್ಮ ಬೇಜವಾಬ್ದಾರಿಯು ಸಹ ಕಾರಣವಾಗಿದೆ ಎಂದು ಕೆಲವರು, ಬಡತನ, ಹಸಿವು ಮತ್ತು ಹಣದಾಸೆ ಸಹ ಕಾರಣವಾಗಿದೆ. ಏಕೆಂದರೆ ಈ ಭಾಗದಲ್ಲಿ ಹೆಚ್ಚು ಕೂಲಿ ಸಿಗುವಂತಿಲ್ಲ, ಸಿಕ್ಕಿದರೂ ಕಡಿಮೆ ಸಮಯ, ನಮ್ಮ ಕಾನೂನುಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ ಮತ್ತು ಗಟ್ಟಿಯಾಗಿಲ್ಲ. ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಆದರೆ ಹಳ್ಳಿಗಳಲ್ಲಿ ಇನ್ನೂ ಸಹ ಜೀವಂತವಾಗಿದೆ. ಹೀಗೆ ಅನೇಕ ರೀತಿಯಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಇದಕ್ಕೆ ಪೂರಕವಾದ ಪ್ರಶ್ನೆ ಎಂದರೆ ಯಾರು ನೇರವಾದ ಕಾರಣ ಎಂದು ಕೇಳಿದರೆ ದೇವದಾಸಿಯರ ಉತ್ತರ ಸಮುದಾಯದವರು ಶೇ. ೯೦.೫ರಷ್ಟು ನಮ್ಮ ಸಮುದಾಯವೇ ನೇರವಾದ ಕಾರಣ, ಶೇ. ೧ರಷ್ಟು ಸರ್ಕಾರ ಮತ್ತು ಜಿಲ್ಲಾಡಳಿತವೇ ಕಾರಣ

ಮತ್ತು ಶೇ. ೧.೫೦ರಷ್ಟು ಊರಿನವರು ಕಾರಣವಾಗಿದ್ದಾರೆ ಮತ್ತು ಶೇ. ೦.೫೦ರಷ್ಟು ಧಾರ್ಮಿಕ ಸಂಸ್ಥೆ/ ಮಠಗಳು ಕಾರಣವಾಗಿವೆ ಎಂದು ಉತ್ತರಿಸಿದ್ದಾರೆ. ಗಮನಕೇಂದ್ರಿತ ಗುಂಪಿನ ಚರ್ಚೆಯಲ್ಲಿ ಸಮುದಾಯವೆಂದರೆ ನಮ್ಮ ತಂದೆ-ತಾಯಿ, ಅಣ್ಣ-ತಮ್ಮ ಮತ್ತು ಬಂಧುಬಳಗವು ಸಹ ಪ್ರತ್ಯಕ್ಷ ಇಲ್ಲವೇ ಪರೋಕ್ಷವಾಗಿ ಕಾರಣಗಳಾಗಿವೆ. ಆದರೆ ಇಲ್ಲಿ ಪ್ರಭುತ್ವವು ತನ್ನ ಜವಾಬ್ದಾರಿಯನ್ನು ಮರೆತು ಬಿಟ್ಟಿದೆ ಇಲಾಖೆಗಳು ಸಹ ಇದರ ನಿರ್ಮೂಲನೆ ಕಡೆ ಗಮನಹರಿಸಿಲ್ಲವೆಂದೇ ಹೇಳಬಹುದು. ಇದಕ್ಕೆ ಇನ್ನೂ ಹೆಚ್ಚಿನ ಚರ್ಚೆಯನ್ನು ಅಧ್ಯಾಯಗಳ ಸಮೀಕ್ಷೆಯಲ್ಲಿ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ಸಮಾಜದಲ್ಲಿ ಧರ್ಮ ತುಂಭಾ ಸಂಕೀರ್ಣವಾದ ಮತ್ತು ಮನುಷ್ಯನ ಎಲ್ಲಾ ಚಟುವಟಿಕೆಯಲ್ಲಿ ಸಕ್ರಿಯವಾದ ಪಾತ್ರವನ್ನು ರೂಪಿಸಿಕೊಂಡಿದೆ. ದೇವದಾಸಿ ಸಂಪ್ರದಾಯದ ವಿಕಾಸವು ಭಾರತಕ್ಕೆ ಅರ್ಯರ ಅಗಮನಕ್ಕಿಂತ ಮುಂಚಿತವಾಗಿಯೇ ಇತ್ತು, ದ್ರಾವಿಡರ ಮಾತೃಪ್ರಧಾನ ಸಮಾಜದ ಸ್ಮಾರಕ, ಅವಶೇಷಗಳಲ್ಲಿ ಈ ಪದ್ಧತಿಯನ್ನು ಕಾಣಲಾಗಿದೆ. ದಕ್ಷಣದಲ್ಲಿ ಆರ್ಯರ ಆಕ್ರಮಣದಿಂದ ಸಂಸ್ಕೃತಿಯಲ್ಲೆವು ಸಾಂಸ್ಕೃತೀಕರಣಗೊಂಡು ಮತ್ತು ಬ್ರಾಹ್ಮಣತ್ವದ ತಾತ್ವಿಕತೆಯು ದ್ರಾವಿಡರಲ್ಲಿಯು ಸಹ ಎಲ್ಲಾ ಕಡೆ ವಿಸ್ತರಿಸಿಕೊಂಡಿತು. ಈ ದೇವದಾಸಿ (ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು ನಂತರ ಆರ್ಯರ ಮತ್ತು ಜಮೀನುದಾರಿಗಳ ವಂಚನೆಯಿಂದ ಮತ್ತು ಒತ್ತಾಯದ ನಡುವೆ ಈ ಪದ್ಧತಿ ವೈಭವೀಕರಿಸ ಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು ಎಂದು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ. **(ಜೋಗನ್ ಶಂಕರ್, ೧೯೮೮)**. ಕಾಲ ಕ್ರಮೇಣ ದೇವದಾಸಿಯರು ತಮ್ಮ ಸಂಪ್ರದಾಯಿಕ ಪಾತ್ರ, ಕ್ರಿಯಾವಿಧಿಗಳನ್ನು ಬಿಟ್ಟು, ಸಮಾಜ ಮತ್ತು ದೇವಸ್ಥಾನಗಳಿಂದ ಹೊರಬಂದು ವ್ಯಾಪಾರದ ವೇಶ್ಯಾವಾಟಿಕೆಗೆ ರೂಪಾಂತರಗೊಂಡಿದ್ದಾರೆ. ಅಂಧಾನುಕರಣೆ ಮತ್ತು ಬಡತನ ಈ ಪದ್ಧತಿಗೆ ಬಹು ಮುಖ್ಯ ಕಾರಣ. ಇದಲ್ಲದೆ ಸಮಾಜದಲ್ಲಿ ಗಂಡಸಿನ ಅಶ್ರಯದಾತನ ವ್ಯವಸ್ಥೆಯಲ್ಲಿ ಧರ್ಮವು ಸಂಸ್ಕೃತಿಯನ್ನು ತನ್ನಷ್ಟಕ್ಕೆ ತಾನೆ ಅನುರೂಪಗೊಳಿಸಿದೆ. ನಂಬಿಕೆ, ಮೌಲ್ಯಗಳು ಮತ್ತು ಮಾನವನ ನಡವಳಿಕೆಗಳು ಗಂಡಸರಿಂದ ಆಕ್ರಮಣಕೊಳಪಟ್ಟಿವೆ.**(ತಾರಾಚಂದ್, ೧೯೮೭)**. ಬಡತನ, ಮೂಡನಂಬಿಕೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ ಎಂದು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ. ದೇವದಾಸಿಯರ ಆಚರಣೆಯಲ್ಲಿ ಲೈಂಗಿಕವಾಗಿ ಆಕೆಯನ್ನು ಮಾತ್ರ ಶೋಷಿಸದೆ ಇಡೀ ಕುಂಟುಂಬವನ್ನು ಸಾಂಸ್ಥಿಕವಾಗಿ ಶೋಷಿಸಿದ್ದಾರೆ, ಅದರಲ್ಲೂ ತಳಸಮುದಾಯದಲ್ಲಿ ಮಾತ್ರ ಮತ್ತು ದೇವತೆಯ ಭಾವನೆಯಿಂದ ನಂಬಿಸಿ, ಇವರ ಮಾನಸಿಕ ಸ್ಥಿತಿಗತಿಯನ್ನು ಅರಿತು, ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅಂತರ್ಗತ ಮಾಡಿದ್ದಾರೆ.**(ಜೋಯಾಹೈದಿ)** ದೇವದಾಸಿ ಪದ್ಧತಿ ಸ್ವಾತಂತ್ರ ಬಂದ ಮೇಲೂ ಕೆಲವು ಪ್ರದೇಶಗಳಲ್ಲಿ ಪದ್ಧತಿಯು ಜೀವಂತವಾಗಿದೆ ಹಾಗೂ

ದಲಿತ ಮಹಿಳೆಯರ ಭಾವನಾತ್ಮಕ, ಆರೋಗ್ಯ ಮತ್ತು ಘನತೆಯ ವಿಚಾರಗಳಲ್ಲಿ ಅಡಚಣೆಯುಂಟಾಗಿವೆ. **(ಮ್ಯಾಜಿಬ್ಲ್ಯಾಕ್)**.ಅಂದು ಸೃಷ್ಟಿಯಾದ ಜೋಗತಿ ಸಂಪ್ರದಾಯ ಇಂದಿಗೂ ಮುಂದುವರಿದು ನಮ್ಮೆಲ್ಲರ ಮಧ್ಯೆ ದೇವದಾಸಿ ಹೆಸರಿನಲ್ಲಿ ಉಸಿರಾಡುತ್ತಿದೆ. ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅಂಚಿನಲ್ಲಿದ್ದ ಹರಿಜನ ಕುಟುಂಬಗಳು ಈ ವ್ಯವಸ್ಥೆಗೆ ಸುಲಭವಾಗಿ ಬಲಿಯಾಗುತ್ತಿದ್ದರು. ಈ ಕುಟುಂಬಗಳ ಹೆಣ್ಣುಮಗುವನ್ನು ತಿಳಿಯದ ವಯಸಿನಲ್ಲಿ ಎಲ್ಲಮ್ಮ ದೇವಿಗೆ ಹರಕೆ ಬಿಡುವ ಪದ್ಧತಿ ಮುಂದುವರಿದಿತ್ತು. ರಾಜ್ಯದಲ್ಲಿ ಕಳೆದ ಮೂರು ದಶಕಗಳಿಂದ ಈ ಪದ್ಧತಿ ನಿಷಿದ್ಧವಿದ್ದರೂ ಅದನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುವಲ್ಲಿ ರಾಜ್ಯ ಸರ್ಕಾರ ವಿಫಲವಾಗಿರುವುದು ನಿಜವಾಗಿಯೂ ನಾಚಿಕೆಗೇಡಿನ ವಿಚಾರ. ದೇವದಾಸಿ ಮಹಿಳಾ ವಿಮೋಚನಾ ಸಂಘದ ಪ್ರಕಾರ ರಾಜ್ಯದಲ್ಲಿ ೮೦ ಸಾವಿರಕ್ಕೂ ಹೆಚ್ಚು ಮಂದಿ ದೇವದಾಸಿಯರಿದ್ದಾರೆ. ಆದರೆ ರಾಜ್ಯ ಸರ್ಕಾರ ೧೯೯೩-೯೪ ಹಾಗೂ ೨೦೦೯-೧೦ರಲ್ಲಿ ೪೬,೬೬೦ ಮಹಿಳೆಯರನ್ನು ದೇವದಾಸಿಯರೆಂದು ಗುರುತಿಸಿದೆ.

**ಈ ಪದ್ಧತಿಯ ನಿರ್ಮೂಲನೆಗಾಗಿ ಮತ್ತು ದೇವದಾಸಿಯರಿಗೆ ಅನುಕೂಲವಾಗಲೆಂದು ಯಾವುದಾದರೂ ಸಂಘ-ಸಂಸ್ಥೆ ಕೆಲಸ ನಿರ್ವಹಿಸುತ್ತದೆಯೇ, ಇದ್ದರೆ ಯಾವುದು ಮತ್ತು ಅದರ ಕೆಲಸದ ಸ್ವರೂಪಗಳೇನು ಎಂಬ ಚರ್ಚೆ:** ಶೇ. ೯೫ ಹೆಚ್ಚು ದೇವದಾಸಿಯರ ಸಂಘಟನೆ, ಇವರಿಗೆ ಅನುಕೂಲ ಮಾಡಿಕೊಡಲೆಂದು ಕೆಲಸ ಮಾಡುತ್ತಿವೆ ಎಂದು ತಿಳಿಸಿದ್ದಾರೆ. ಅವುಗಳೆಂದರೆ ದೇವದಾಸಿ ಸಂಘಟನೆ(ಜಿಲ್ಲಾ ದೇವದಾಸಿ ಪುನರ್ವಸತಿ ಕಾರ್ಯಕ್ರಮದಡಿಯಲ್ಲಿ ದೇವದಾಸಿ ಸ್ವಯಂ ಸೇವಕರು ಸಂಘಗಳನ್ನು ಮಾಡಿದ್ದಾರೆ. ದೇವದಾಸಿ ವಿಮೋಚನಾ ವೇದಿಕೆ ಹಳ್ಳಿಗಳಲ್ಲಿ ಕೆಲವು ದಲಿತ ಕಾರ್ಯಕರ್ತರು ಮತ್ತು ಮಾಧ್ಯಮದವರು ಬರುತ್ತಿರುತ್ತಾರೆ. ಸರ್ಕಾರೇತರ ಸಂಘ ಸಂಸ್ಥೆಗಳು(ಎನ್‌ಜಿ ಒಗಳು) ಸಹ ಈ ಭಾಗಗಳಲ್ಲಿ ಕೆಲಸ ಮಾಡುತ್ತಿವೆ. ಸಂರಕ್ಷ, ಸುರಕ್ಷ, ವಿಸ್ತಾರ, ಸಮೂಹ, ಸಮತ ಮತ್ತು ಯುನಿಸೆಫ್ ಮುಂತಾದವುಗಳು ಕೆಲವು ಹಳ್ಳಿಗಳಲ್ಲಿ ದೇವದಾಸಿಯರ ಬಗ್ಗೆ ಕೆಲಸ ಮಾಡುತ್ತಿವೆ. ಆದರೆ ಇವು ಯಾವೊಂದು ಸಹ ಅವರ ಹಕ್ಕು ಮತ್ತು ಅಭಿವೃದ್ಧಿಯ ಪರವಾಗಿ ಒತ್ತುಕೊಟ್ಟಿಲ್ಲ. ಬರೀ ಅವರ ಅಜೆಂಡಾಗಳನ್ನು ಅನುಷ್ಠಾನಗೊಳಿಸಲು ಒಂದು ಕಾರ್ಯಕ್ರಮವಾಗಿ ಬರುತ್ತಾರೆ ಮತ್ತು ನಮ್ಮೊಂದಿಗೆ ನಿರಂತರವಾಗಿ ನಿಲ್ಲುವುದಿಲ್ಲ. ಸರ್ಕಾರವೇ ನಮ್ಮನ್ನು ನಿರ್ಲಕ್ಷ್ಯತನದಿಂದ ನೋಡುವುದರಿಂದ ಬೇರೆ ಯಾರು ಏನು ಮಾಡಿಯಾರು? ಎಂಬ ಪ್ರಶ್ನೆಗಳನ್ನು ಹಾಕಿದ್ದಾರೆ. ಈ ಎಲ್ಲ ವಿಚಾರಗಳು ಗಮನಕೇಂದ್ರಿತ. ಗುಂಪಿನ ಚರ್ಚೆಗಳಲ್ಲಿ ಚರ್ಚೆಯಾಗಿವೆ. ಪ್ರಶ್ನಾವಳಿಯ ಸಂದರ್ಶನಗಳಲ್ಲಿಯೂ ಸಹ ಕಂಡು ಬಂದಿದೆ. ಸಂಘ ಸಂಸ್ಥೆ ಮತ್ತು ಸಂಘಟನೆಗಳ ಕೆಲಸದ ಸ್ವರೂಪವು ಸಹ ಸುಸ್ಥಿರತೆಯನ್ನು ಕಾಯ್ದಿಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಕಾರ್ಯಕ್ರಮಗಳು ಕೇವಲ ಬೀದಿ ನಾಟಕ, ಜನಜಾಗೃತಿಯನ್ನು ಮೂಡಿಸುತ್ತಿವೆ. ಆದರೆ ಕಾನೂನಾತ್ಮಕವಾಗಿ ಕೆಲಸ ಮಾಡುತ್ತಿಲ್ಲ. ಸರ್ಕಾರಿ ಸೌಲಭ್ಯಗಳನ್ನು ಒದಗಿಸುತ್ತಿವೆ. ಆದರೆ ಸಂಪೂರ್ಣ ನಿರ್ಮೂಲನೆಗಾಗಿ

ಕೆಲಸಗಳು ಆಗಿಲ್ಲ. ದೇವರ ಹೆಸರಿನಲ್ಲಿ ದಲಿತ ಹೆಣ್ಣುಮಕ್ಕಳನ್ನು ಅರ್ಪಿಸುವ/ ಬಿಡುವ ಪದ್ಧತಿಯನ್ನು ಸಂಪೂರ್ಣವಾಗಿ ತೊಡೆದುಹಾಕಬೇಕು ಎನ್ನುವ ಹೋರಾಟದ ಕಿಚ್ಚನ್ನು ಸಮುದಾಯಕ್ಕೆ ಬಿಟ್ಟು ಮತ್ತು ತಾನು ಕಾರ್ಯಕರ್ತರಾಗಿ ಕೆಲಸ ನಿರ್ವಹಿಸುತ್ತಿದ್ದ ಸ್ವಯಂ ಸೇವಾಸಂಸ್ಥೆಯಾದ ರೂರಲ್ ವುಮೆನ್ ಲಿಬರೇಷನ್ ಮೂವ್‌ಮೆಂಟ್ ತನ್ನ ಹೋರಾಟವನ್ನು ಮುನ್ನಡೆಸುತ್ತಿದೆ.[೭] **(ಆನಂದಿ,೨೦೧೩).** ಬೆಳಗಾವಿ ಜಿಲ್ಲೆಯ ದೇವದಾಸಿ ಪದ್ಧತಿ ನಿರ್ಮೂಲನಾ ಪ್ರಯತ್ನವನ್ನು ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ(ಮಾಸ್) ಯವರು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಹಲವು ರೀತಿಯ ಪ್ರಯತ್ನಗಳು ನಡೆದಿವೆ. ಸರ್ಕಾರದ ಕಾಯ್ದೆ ಕಾರ್ಯಕ್ರಮಗಳು, ಸಂಘಟನೆಯ ತುಡಿತ ಮಿಡಿತಗಳು ಹಾಗೂ ಅನೇಕ ಅಶಾದಾಯಕ ಪ್ರಾಮಾಣಿಕ ಪ್ರಯತ್ನಗಳು ಸಹ ಆಗಿವೆ. ಅದರೆ ಕೆಲವು ಪ್ರಯತ್ನಗಳು ಹೆಚ್ಚು ಸಫಲವಾಗಿಲ್ಲವಾದರೂ ವ್ಯರ್ಥವೂ ಸಹ ಆಗಿಲ್ಲ. ದೇವದಾಸಿ ಪದ್ಧತಿಯಲ್ಲಿ ಬಲಿಯಾಗಿ ಬದುಕುತಿದ್ದ ನಾವುಗಳು ಬರೀ ಕೇವಲ ಫಲಾನುಭವಿಗಳ ಸ್ಥಾನ ಪಡೆದಿದ್ದು ಒಂದು ದುರಂತವಾಗಿತ್ತು. ಹಾಗೆ ನೋಡಿದರೆ ಪದ್ಧತಿಯ ನಿರ್ಮೂಲನೆ ದೂರದ ದಾರಿಯಾಗಿತ್ತು. ದೇವದಾಸಿ ಪುನರ್ವಸತಿ ಯೋಜನೆಯಲ್ಲಿ ಮಾಸಾಶನ, ವಸತಿ ಮತ್ತು ಕೆಲವು ಸಾಲ ಸೌಲಭ್ಯಗಳನ್ನು ಮಾತ್ರ ಹಾಗೂ ಇವೆಲ್ಲವು ತಾತ್ಕಾಲಿಕವಾದ ಜೀವನೋಪಾಯವನ್ನು ನೀಡಿದ್ದಷ್ಟೇ ಹೊರತು ಈ ಪದ್ಧತಿಯ ಮೇಲಿನ ಜನರ ಮನೋಭಾವನೆ ಮತ್ತು ನಂಬಿಕೆಗಳನ್ನು ಬದಲಾಯಿಸುವಲ್ಲಿ ಯಾವ ಪರಿಣಾಮವನ್ನು ಬೀರಲಿಲ್ಲ. ಅಂದು ಸೃಷ್ಟಿಯಾದ ಜೋಗತಿ ಸಂಪ್ರದಾಯ ಇಂದಿಗೂ ಮುಂದುವರಿದು ನಮ್ಮೆಲ್ಲರ ಮಧ್ಯೆ ದೇವದಾಸಿ ಹೆಸರಿನಲ್ಲಿ ಉಸಿರಾಡುತ್ತಿದೆ. ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅಂಚಿನಲ್ಲಿದ್ದ ಹರಿಜನ ಕುಟುಂಬಗಳು ಈ ವ್ಯವಸ್ಥೆಗೆ ಸುಲಭವಾಗಿ ಬಲಿಯಾಗುತ್ತಿದ್ದರು. ಈ ಕುಟುಂಬಗಳ ಹೆಣ್ಣುಮಗುವನ್ನು ತಿಳಿಯದ ವಯಸಿನಲ್ಲಿ ಎಲ್ಲಮ್ಮ ದೇವಿಗೆ ಹರಕೆ ಬಿಡುವ ಪದ್ಧತಿ ಮುಂದುವರಿದಿತ್ತು. ದೇವದಾಸಿ ಪದ್ಧತಿ ಮುಖ್ಯವಾಗಿ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರದ ದಕ್ಷಿಣದ ಜಿಲ್ಲೆಗಳಲ್ಲಿ ಆಚರಣೆಯಲ್ಲಿತ್ತು. ಸಾಮಾಜಿಕ ಕಳಕಳಿಯುಳ್ಳ ಜನರ ಪ್ರಯತ್ನದಿಂದಾಗಿ ೧೯೮೨ರಲ್ಲಿ ಈ ಪದ್ಧತಿಯ ಆಚರಣೆಯನ್ನು ನಿಷೇಧಿಸಿ ಕರ್ನಾಟಕ ಸರ್ಕಾರವು ಕಾಯ್ದೆಯನ್ನು ರೂಪಿಸಿ, ೧೯೮೪ರಿಂದ ಜಾರಿಗೆ ತಂದಿತು. ಆದರೆ ಧಾರ್ಮಿಕ ನಂಬಿಕೆಯ ಕವಚವಿದ್ದ ಈ ವ್ಯವಸ್ಥೆಯನ್ನು ಕಾಯ್ದೆ ಕಾಯಲಿಲ್ಲ. ಸವದತ್ತಿಯ ಎಲ್ಲಮ್ಮನ ದೇವಸ್ಥಾನವು ದೇವದಾಸಿಯರನ್ನು ಉತ್ಪಾದಿಸುವ ಕಾರ್ಖಾನೆಯಾಗಿತ್ತೆಂದು ಕೆಲವು ಸ್ವಯಂ ಸೇವಾ ಸಂಸ್ಥೆಗಳು ಧ್ವನಿ ಎತ್ತಿದವು.[೮] **(ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ)** ಹೀಗೆ ಸುಮಾರು ವಿಚಾರಗಳು ಚರ್ಚೆಗೆ ಬಂದಿವೆ ಮತ್ತು ಅಧ್ಯಯನ ಸಮೀಕ್ಷೆಯಲ್ಲಿ ಇನ್ನೂ ಹಲವಾರು ವಿಚಾರಗಳನ್ನು ಚರ್ಚೆ ಮಾಡಲಾಗಿದೆ.

**ದೇವದಾಸಿಯರಿಗೆ ಈ ಪದ್ಧತಿಯ ಬಗ್ಗೆ ಇದ್ದ ಭಾವನೆಗಳು ಮತ್ತು ಅದರ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆ ಚರ್ಚೆ:** ಶೇ ೨೦ರಷ್ಟು ಹೆಚ್ಚು ಭಯದ ಭಾವನೆಯಿದೆ. ಶೇ. ೪೦ಕ್ಕೂ ಹೆಚ್ಚು

ದುಃಖವನ್ನು ತೋಡಿಕೊಂಡಿದ್ದಾರೆ ಮತ್ತು ಶೇ. ೪೦ಕ್ಕೂ ಹೆಚ್ಚು ಜನರು ಕೋಪವನ್ನು ತೋರಿಸಿದ್ದಾರೆ. ಅಂದರೆ ಈ ಪ್ರಶ್ನೆಗೆ ಉತ್ತರವೆಂದರೆ ನಮಗೆ ಈ ಪದ್ಧತಿ ಬೇಡವೇ ಬೇಡ ಎಂಬುದಾಗಿ ಪ್ರತ್ಯಕ್ಷವಾಗಿ, ನೇರವಾಗಿ ಸಮಾಜಕ್ಕೆ ಮತ್ತು ಸರ್ಕಾರಕ್ಕೆ ಎಚ್ಚರಿಕೆ ಕೊಟ್ಟಿದ್ದಾರೆ. ಈ ಪ್ರಶ್ನೆಗೆ ಸಂಬಂಧಿಸಿದಂತೆ ಈ ಪದ್ಧತಿಯ ಬಗ್ಗೆ ಎಲ್ಲರೂ ಸಹ ನಕಾರಾತ್ಮಕವಾಗಿ ಹೇಳಿದ್ದಾರೆ. ತುಂಬಾ ಕೆಟ್ಟದ್ದು, ಅನುಕೂಲವಿಲ್ಲ, ನಮ್ಮ ಘನತೆ, ಹಕ್ಕು, ಏನು ಸಿಗುವುದಿಲ್ಲ. ಸಮಾಜದಲ್ಲಿ ಸೂಳೆ ಎಂಬ ಪಟ್ಟ, ನಮ್ಮ ಕಷ್ಟ ಹೇಳತೀರದು, ನಾವು ಮಾನಸಿಕವಾಗಿ ದೈಹಿಕವಾಗಿ ನೊಂದಿದ್ದೇವೆ, ಒಟ್ಟಾರೆ ಈ ಪದ್ಧತಿಯಿಂದ ತೊಂದರೆಯಾಗಿದೆ. ಆದರೆ ಸರ್ಕಾರಗಳು ಯಾಕೆ ಈ ವಿಚಾರಗಳನ್ನು ಗಂಭೀರವಾಗಿ ಪರಿಗಣಿಸದೇ ಇದ್ದಾರೆ. ದೇವದಾಸಿ ಪದ್ಧತಿಗೆ ಬಲಿಯಾದ ನಂತರ ಉದ್ಭವಿಸಬಹುದಾದ ಕೆಟ್ಟ ಪರಿಣಾಮಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಅಂದರೆ ಈ ಪದ್ಧತಿಗೆ ಬಲಿಯಾದ ನಂತರ ವೇಶ್ಯಾವೃತ್ತಿಗೆ ಪರವಾನಿಗೆ ಮತ್ತು ಸಾಮಾಜಿಕ ಮನ್ನಣೆ ಸಿಕ್ಕಿದಂತಾಗುತ್ತದೆ. ದೇವದಾಸಿಯು ಕೆಳಮಟ್ಟದ ಜೀವನವನ್ನು ನಡೆಸಿಕೊಂಡು ಹೊಸ ರೋಗಗಳಿಗೆ ತುತ್ತಾಗಿ ತಮ್ಮ ಮಕ್ಕಳಿಗೆ ಕಾನೂನಾತ್ಮಕವಾಗಿ ತಂದೆಯಿಲ್ಲದೆ ಜೈವಿಕವಾಗಿ ತಂದೆಯಿದ್ದರೂ ಯಾವುದೇ ಜವಾಬ್ದಾರಿಯನ್ನು ತೆಗೆದುಕೊಳ್ಳದೆ ಇಡೀ ಬದುಕು ಈ ಮಹಿಳೆಯ ಮೇಲೆ ಬೀಳುವುದರಿಂದ ನಿಕೃಷ್ಟವಾಗಿ ಜೀವನವನ್ನು ನಡೆಸುವ ಸ್ಥಿತಿಗೆ ಬರುತ್ತಾರ್ೆ(**ಪ್ರತಿಭಾ ದೇಸಾಯಿ, ೨೦೧೨**). ಸಾಮಾಜಿಕ ಮತ್ತು ಸಾಂಸ್ಕೃತಿಕ ಯಾಜಮಾನಿಕೆಯಿಂದ ನೊಂದು-ಬೆಂದು ತಮ್ಮ ಐಡೆಂಟಿಟಿಯನ್ನು ಕಲಾವಿದರನ್ನಾಗಿ ಮಾರ್ಪಡಿಸಿದ ಹಿನ್ನೆಲೆ ಮತ್ತು ಮಹಿಳೆ ಯಾವಾಗಲೂ ಎರಡನೇ ದರ್ಜೆಯ ವ್ಯಕ್ತಿಯಾಗಿ ನೋಡುವ ಸಮಾಜ ಅದರಲ್ಲಿ ವಿಶೇಷವಾಗಿ ಕಲೆಯನ್ನು ಕಲಿಸುವಲ್ಲಿನ ತಾರತಮ್ಯ ಮತ್ತು ಕಲಿತ ಮೇಲೆ ಅದರ ನಿರ್ವಹಣೆಯಲ್ಲಿನ ರಾಜಕಾರಣ ಎಲ್ಲವನ್ನು ಪ್ರತ್ಯಕ್ಷವಾಗಿ ಕಾಣಬಹುದು. ಇತ್ತ ಕಲಾವಿದರೂ ಅಲ್ಲದೇ ಅತ್ತ ಸಾಂಪ್ರದಾಯಕ ವೃತ್ತಿಯನ್ನು ನಿರ್ವಹಿಸದೇ ತ್ರಿಶಂಕು ಸ್ಥಿತಿಯಲ್ಲಿ ಬೇರೆ ನಗರಗಳಿಗೆ ಹೋಗಿ ಮೈಮಾರಿಕೊಳ್ಳುವ ದುಸ್ಥಿತಿ ಕೆಲವರಿಗೆ ಒದಗಿ ಬಂದಿರುವ ಸಂಗತಿಗಳನ್ನು ಸಹ ನೋಡಬಹುದು.[೧೦](**ಶೈಲಜ ಹಿರೇಮಠ, ೨೦೧೧**). ದೇವದಾಸಿ ಪದ್ಧತಿಯು ಧಾರ್ಮಿಕ ನಂಬಿಕೆಯ ಅಧಾರದಲ್ಲಿ ಜಾತಿಯ ಚೌಕಟ್ಟಿನೊಳಗೆ ಹೆಣ್ಣುಮಕ್ಕಳನ್ನು ಮಾನಸಿಕ, ದೈಹಿಕ ಮತ್ತು ಲೈಂಗಿಕವಾಗಿ ಶೋಷಣೆ ಮಾಡುವ ಹುನ್ನಾರವೇ ಆಗಿದೆ ಮೇಲ್ನೋಟಕ್ಕೆ ಬಡತನ ಇದ್ದರೂ ಧಾರ್ಮಿಕ ಮತ್ತು ಜಾತಿ ರಾಜಕಾರಣದ ಬಲೆಗೆ ಸಿಲುಕಿ ತನ್ನ ಸ್ಥಾನವನ್ನು ಗಟ್ಟಿಮಾಡಿಕೊಂಡಿದೆ. ಲೈಂಗಿಕ ವೃತ್ತಿ ಜಗತ್ತಿನ ತುತ್ತು ಅನ್ನಕ್ಕಾಗಿ ಈ ಕಾರ್ಯಕರ್ತೆಯರು ನಡೆಸುವ ನಿರಂತರ ಹೋರಾಟದ ಬದುಕನ್ನು ಹಾಗೂ ಅವರು ಅನಿವಾರ್ಯವಾಗಿ ಬೀದಿಗಿಳಿಯಬೇಕಾಗಿ ಬಂದ ದುರಂತವನ್ನು ಹೃದಯಕ್ಕೆ ತಟ್ಟುವಂತಹ ಸನ್ನಿವೇಶಗಳನ್ನು ಈ ಕಾದಂಬರಿಯಲ್ಲಿ ನಿರೂಪಿಸಲಾಗಿದೆ. ಉತ್ತರಕರ್ನಾಟಕದ ದೇವದಾಸಿ ಪದ್ಧತಿಯಿಂದ ಹಿಡಿದು ಬೆಂಗಳೂರಿನ ಫ್ಲೈಓವರ್ ಕೆಳಗೆ, ಬೀದಿ ಬೀದಿಯ ಬದಿಗಳಲ್ಲಿ ಮೈಮಾರಿಕೊಂಡು ಬದುಕು ಸಾಗಿಸುವ ಇವರು ಈ ಸಮಾಜದಲ್ಲಿ ಬಲಿಪಶುಗಳಾಗಿ ಅನುಭವಿಸುತ್ತಿರುವ ರೋಗರುಜಿನಗಳ ತಾಕಲಾಟಗಳನ್ನು ಅನುಭವಿಸುತ್ತಿದ್ದಾರೆ[೧೧](**ಹನುಂಮತ ಹಾಲಿಗೇರಿ**). ದೇವದಾಸಿಯರ

ಆರೋಗ್ಯದ ಸ್ಥಿತಿ ಚಿಂತಾಜನಕವಾಗಿದೆ. ಲೈಂಗಿಕ ಮತ್ತು ಸಂತಾನೋತ್ಪತ್ತಿಗೆ ಸಂಬಂಧಿಸಿದಂತೆ ರೋಗಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ಹಾಗೆಯೇ ಈ ರೋಗಗಳ ಕಿರಿ ವಯಸ್ಸಿನ ದೇವದಾಸಿಯರಿಗೂ ಸಹ ಅಂಟಿಕೊಂಡಿವೆ(**ಅಂತರ್ಜಾಲ**). ಇದರ ಸಂಪೂರ್ಣ ನಿರ್ಮೂಲನೆಯ ಅವಶ್ಯಕತೆಯಿದೆ ಎಂದು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ ಮತ್ತು ಚರ್ಚೆಯಲ್ಲಿ ತಮ್ಮ ದುಃಖವನ್ನು ತೋಡಿಕೊಂಡಿದ್ದಾರೆ. ಅಂದರೆ ದೇವದಾಸಿ ಪದ್ಧತಿಯಿಂದ ಯಾವುದೇ ತರದ ಸಾಮಾಜಿಕ ಮತ್ತು ಘನತೆಯ ಹಿನ್ನಲೆಯಲ್ಲಿ ನೋಡುವ ಒಂದೂ ಅನುಕೂಲಗಳು ಆಗಿಲ್ಲವೆಂದೇ ಹೇಳಲು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ದೇವದಾಸಿಯರ ಸಾಮಾಜಿಕ ಹಿನ್ನೆಲೆಯ ಮಾಹಿತಿ**

**ಕೋಷ್ಟಕ ೪.೨.೬. ದೇವದಾಸಿಯರ ಜಾತಿ ಮತ್ತು ಉಪಜಾತಿಯ ಚರ್ಚೆ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಪರಿಶಿಷ್ಟ ಜಾತಿ | ೧೯೧ | ೯೫% |
| ೨ | ಪರಿಶಿಷ್ಟ ಪಂಗಡ | ೮ | ೪.೫% |
| ೩ | ಇತರೆ ಹಿಂದುಳಿದ ವರ್ಗ(ಪ್ರವರ್ಗ-೧) | ೧ | ೦.೫% |
| | **ಒಟ್ಟು** | ೨೦೦ | ೧೦೦% |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಮೇಲೆ ಗಮನಿಸಿದಂತೆ ಜಾತಿ ಗುರುತಿಸುವಾಗ ಶೇ. ೯೫ಕ್ಕಿಂತ ಅಧಿಕವಾಗಿ ದೇವದಾಸಿಯರು ಪರಿಶಿಷ್ಟ ಜಾತಿಯಲ್ಲಿ ಅಂದರೆ ಬೋವಿ(ವಡ್ಡರು), ಹೊಲೆಯ ಮತ್ತು ಮಾದಿಗ ಸಮುದಾಯಗಳು ಈ ಜಾತಿಯ ಪಟ್ಟಿಯಲ್ಲಿ ಸೇರುತ್ತವೆ. ಮತ್ತೆ ಶೇ. ೪.೫ರಷ್ಟು ಪರಿಶಿಷ್ಟ ಪಂಗಡ(ವರ್ಗ) ಸಮುದಾಯಕ್ಕೆ, ಶೇ ೦.೫ರಷ್ಟು ಇತರೆ ಹಿಂದುಳಿದ ವರ್ಗ(ಪ್ರವರ್ಗ೧) ಸೇರುತ್ತವೆ. ಇಲ್ಲಿ ಈ ಎಲ್ಲಾ ಸಮುದಾಯಗಳು ಸರ್ಕಾರದ ಮತ್ತು ಕಾನೂನಿನ ಅಡಿಯಲ್ಲಿ ಸಮಾನ ಅವಕಾಶಗಳನ್ನು ಪಡೆಯುತ್ತಾರೆ. ಆದರೆ ಹಳ್ಳಿಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಇವರು ಯಾವುದೇ ಕಾರಣಕ್ಕೂ ಸಮಾನರಲ್ಲ ಮತ್ತು ಇವರ ನಡುವೆ ಜಾತಿ ತಾರತಮ್ಯತೆ ಎದ್ದುಕಾಣುತ್ತದೆ. ದೇವದಾಸಿಯರ ಅರ್ಪಣೆಯು ಯಾವಾವ ಸಮುದಾಯವು ತಮ್ಮ ಪಾಲನ್ನು ಪಡೆದುಕೊಂಡಿವೆ ಅಂದರೆ ಜಾತಿಯ ಹಿನ್ನೆಲೆಯಲ್ಲಿ ಗಮನಿಸಿದಾಗ ದೇವದಾಸಿಯರ ಅನುಭವದಲ್ಲಿ ಮಾದಿಗ ಮತ್ತು ಛಲವಾದಿ ಸಮುದಾಯಗಳು ಹೆಚ್ಚಾಗಿ ಈ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ. ಹಾಗೆಯೇ ನಾಯಕ ಜನಾಂಗದವರು ಈ ಪದ್ಧತಿಯನ್ನು ಪಾಲಿಸುತ್ತಾ ಬಂದಿದ್ದಾರೆ. ಹಾಗೆಯೇ ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಕೇಂದ್ರಿತ ಗುಂಪಿನ ಚರ್ಚೆ ಅಥವಾ ಲಕ್ಷ್ಯಕ್ಕೊಳಪಟ್ಟ ಗುಂಪಿನ ಚರ್ಚೆಯಲ್ಲಿ ಬಂದಂತಹ ವಿಚಾರವೆಂದರೆ

ಮೇಲೆ ತಿಳಿದ ಹಿರಿಯ ದೇವದಾಸಿಯರು ಕೊಟ್ಟ ಹೇಳಿಕೆಯ ಪ್ರಕಾರ ಹಿಂದುಳಿದ ಸಮುದಾಯಗಳು ಮತ್ತು ನವಾಬರು(ಮುಸ್ಲಿಮರು) ಸಹ ಈ ಪದ್ಧತಿಯನ್ನು ಪಾಲಿಸುತ್ತಿದ್ದರು. ಒಬ್ಬ ಹಿರಿಯ ದೇವದಾಸಿ ಹೇಳಿಕೆಯ ಪ್ರಕಾರ "ಬೇರೆ ಮಂದಿ ದೇವದಾಸಿಯರಿದ್ದರು. ಆದರೆ ಈ ನವಾಬರು ಯಾಕೆ ಬಿಡುತ್ತಿದ್ದರು ಎಂಬುದು ಗೊತ್ತಿಲ್ಲಾರಿ" ಎಂದು ಪ್ರತಿಕ್ರಿಯಿಸಿದರು. ಹಾಗೆಯೇ ಇಡೀ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಮೂರು ಜಾತಿಯವರನ್ನು ಬಿಟ್ಟರೆ ಬೇರೆ ಯಾರೂ ಸಿಗಲಿಲ್ಲ. ಆದರೆ ಅಧ್ಯಯನದ ಕೊನೆಯ ಹಂತದಲ್ಲಿ ದೇವದಾಸಿ ಪುನರ್ವಸತಿ ಕಾರ್ಯಕ್ರಮದ ಅಧಿಕಾರಿಗಳೊಟ್ಟಿಗೆ ಚರ್ಚಿಸುವಾಗ ಕೊಪ್ಪಳ ಜಿಲ್ಲೆಯಲ್ಲಿ ಇತರೆ ಹಿಂದುಳಿದ ಸಮುದಾಯಗಳಲ್ಲಿ ಆದ ಗಂಗಾಮತಸ್ಥ/ಕೋಲಿ/ಬೆಸ್ತರು ಸಮುದಾಯದಲ್ಲಿ ದೇವದಾಸಿ ಪದ್ಧತಿ ಇರುವುದು ಗೊತ್ತಾಯಿತು ಸುಮಾರು ೨೫ ರಿಂದ ೩೦ ದೇವದಾಸಿ ಮಹಿಳೆಯರು ಇದ್ದಾರೆ ಎಂದು ತಿಳಿಸಿದರು.[೧೨]**(ದಾದಾ ಸಾಬ್, ದೇ ಪು ಕಾ, ತಾಲೋಕು ಅಧಿಕಾರಿ, ಕೊಪ್ಪಳ ತಾಲೋಕು, ೨೦೧೮)** ಈ ವಿಚಾರವಾಗಿ ಸೈದ್ಧಾಂತಿಕ ಚೌಕಟ್ಟಿನ ಅಧ್ಯಾಯದಲ್ಲಿ ಇಂತಹ ವಿಚಾರಗಳನ್ನು ಗಂಭೀರವಾಗಿ ಚರ್ಚಿಸಲಾಗಿದೆ. ದಕ್ಷಿಣದಲ್ಲಿ ಆರ್ಯರ ಆಕ್ರಮಣದಿಂದ ಸಂಸ್ಕೃತಿಯಲ್ಲೆವು ಸಂಸ್ಕೃತೀಕರಣಗೊಂಡು ಮತ್ತು ಬ್ರಾಹ್ಮಣತ್ವದ ತಾತ್ವಿಕತೆಯು ದ್ರಾವಿಡರಲ್ಲಿಯು ಸಹ ಎಲ್ಲ ಕಡೆ ವಿಸ್ತರಿಸಿಕೊಂಡಿತು. ಈ ದೇವದಾಸಿ(ಜೋಗತಿ ಅಥವಾ ಬಸವಿ) ಪದ್ಧತಿಯು ದ್ರಾವಿಡರ ಪದ್ಧತಿಯಲ್ಲಿ ಯಲ್ಲಮ್ಮ ದೇವಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು. ನಂತರ ಆರ್ಯರ ಮತ್ತು ಜಮೀನುದಾರರ ವಂಚನೆಯಿಂದ ಮತ್ತು ಒತ್ತಾಯದ ನಡುವೆ ಈ ಪದ್ಧತಿಯನ್ನು ವೈಭವೀಕರಿಸಲಾಯಿತು. ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು[೧೩]**(ಜೋಗನ್‌ಶಂಕರ್; ದೇವದಾಸಿ ಸಂಪ್ರದಾಯ, ೧೯೮೮)**. ಅದರಲ್ಲೂ ತಳಸಮುದಾಯದಲ್ಲಿ ಮಾತೃ ಮತ್ತು ದೇವತೆಯ ಭಾವನೆಯಿಂದ ನಂಬಿಸಿ ಇವರ ಮಾನಸಿಕ ಸ್ಥಿತಿಗತಿಯನ್ನು ಅರಿತು, ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅಂತರ್ಗತ ಮಾಡಿದ್ದಾರೆ.[೧೪] **(ಜೋಯಾ ಜೈದಿ)** ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಂಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ. ಮತ್ತು ಸಾಂಸ್ಕೃತಿಕ ಆಚರಣೆಗಳಿಂದ ಕೂಡಿದೆ**(ಲಾರೆನ್ ಬೇತ್ ಜಾಕೋಬ್ಸ್)**. ದೇವದಾಸಿ ಪದ್ಧತಿ ಸ್ವಾತಂತ್ರ್ಯ ಬಂದ ಮೇಲೂ ಕೆಲವು ಪ್ರದೇಶಗಳಲ್ಲಿ ಈ ಪದ್ಧತಿಯು ಜೀವಂತವಾಗಿದೆ ಹಾಗೂ ದಲಿತ ಮಹಿಳೆಯರ ಭಾವನಾತ್ಮಕ, ಆರೋಗ್ಯ ಮತ್ತು ಘನತೆಯ ವಿಚಾರಗಳಲ್ಲಿ ಅಡಚಣೆಯುಂಟಾಗಿವೆ[೧೫] **(ಮ್ಯಾಜೀ ಬ್ಲಾಕ್, ೨೦೦೭)**. ಉದ್ದೇಶಪೂರ್ವಕವಾಗಿ ದೇವದಾಸಿ ಪದ್ಧತಿಯು ಕೆಳಜಾತಿಯ ಮಹಿಳೆಯರನ್ನು ಮತ್ತು ಸಮುದಾಯವನ್ನು ಹತೋಟಿಯಲ್ಲಿಡಲು ಹಾಗೂ ಶೋಷಣೆಯನ್ನು ಮಾಡಲು ಸ್ಥಳೀಯ ಉನ್ನತ ಜಾತಿ ಮತ್ತು ವರ್ಗದವರು ರೂಢಿ ಸಂಪ್ರದಾಯಗಳನ್ನು ಪಾಲಿಸುವಂತೆ ಮಾಡುತ್ತಿದ್ದರು. ಕೆಳಜಾತಿಯವರ ಸ್ವ-ಗೌರವ ಮತ್ತು ಸ್ವಾಭಿಮಾನವು ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಗಳಿಸುವಂತೆ ಮಾಡುವುದೇ ಇವರ ಉದ್ದೇಶವಾಗಿತ್ತು.[೧೬]**(ಜಮನ್ದಾಸ್,)**. ಅಂಬೇಡ್ಕರ್ ಅವರು ಸಹ ೧೯೩೬ ಜೂನ್ ತಿಂಗಳಿನಲ್ಲಿ ಬಾಂಬೆಯಲ್ಲಿ ಹಲವು ಸಭೆಗಳನ್ನು ಉದ್ದೇಶಿಸಿ

ಮಾತನಾಡಿದ್ದರು. ಅದರಲ್ಲಿ ಮುಖ್ಯವಾಗಿ ಕಮಾಟಿಪುರದ ವೃತ್ತಿನಿರತವಾಗಿ ಮತ್ತು ದೇವದಾಸಿ ಪದ್ಧತಿಯ ಹಿನ್ನೆಲೆಯಿಂದ ಬಂದು ವೇಶ್ಯಾವೃತ್ತಿಯನ್ನು ಮಾಡುತ್ತಿದ್ದವರು ಮತ್ತು ದೇವದಾಸ/ ಜೋಗಯ್ಯ/ಹಿಜಡಾಗಳೂ ಸಹ ಸಭೆಯಲ್ಲಿ ಹಾಜರಿದ್ದರು ಅಂಬೇಡ್ಕರ್ ಅವರು ಈ ಪದ್ಧತಿಯ ಬಗ್ಗೆ ಮತ್ತು ಮಹರ್ ಜಾತಿಯಲ್ಲಿ ಹುಟ್ಟಿ ಇಂತಹ ವೃತ್ತಿಯನ್ನು ಆಯ್ಕೆ ಮಾಡಿಕೊಂಡವರನ್ನು ಕಟುವಾಗಿ ಟೀಕಿಸಿದರು. ಹೊಲೆಯ(ಮಹಾರ), ಮಾದಿಗ(ಮಾಂಗ), ತಳವಾರ, ಕಬ್ಬಲಿಗ, ದಾಸ, ಬೇಡ, ಕೋಳಿ, ನಾಯಕ, ಕುರುಬ(ದನಗರ), ಕುಣಬಿ, ಭಂಡಾರಿ ಮೊದಲಾದ ಜಾತಿ ಜನಾಂಗಗಳಲ್ಲಿ ಈ ಪದ್ಧತಿಯನ್ನು ಪಾಲಿಸಿಕೊಂಡು ಬರಲಾಗಿದೆ[೧೭](**ಉತ್ತಮ ಕಾಂಬಳೆ; ೨೦೧೩**). ದಲಿತರಾಗಿರುವ ಅರುಂಧತಿಯಾರ್ ಸಮುದಾಯದಲ್ಲಿ ತಮ್ಮ ಕುಲದೇವತೆಗಳ ಹೆಸರಲ್ಲಿ ಹೆಣ್ಣುಮಕ್ಕಳನ್ನು ಮಾತಮ್ಮನಿಗೆ ಆರ್ಪಿಸುವುದು ವಾಡಿಕೆ. ಇಲ್ಲಿಯ ದೇವಿಯನ್ನು ತನ್ನ ಅನುಮತಿಯಿಲ್ಲದೆ ದೇವರಿಗೆ ಆರ್ಪಿಸಿ ಉನ್ನತ ಜಾತಿಯ ಮತ್ತು ತನ್ನ ಸಮುದಾಯದ ಗಂಡಸರು ತಮ್ಮ ಕಾಮತೃಷೆಯನ್ನು ತೀರಿಸಿಕೊಳ್ಳುತ್ತಿದ್ದರು. ದೇವರ ಹೆಸರಿನಲ್ಲಿ ದಲಿತ ಹೆಣ್ಣುಮಕ್ಕಳನ್ನು ಆರ್ಪಿಸುವ/ ಬಿಡುವ ಪದ್ಧತಿ ಇತ್ತು. ಲಿಂಗತ್ವ, ಜಾತಿ ಮತ್ತು ಲೈಂಗಿಕ ತಾರತಮ್ಯತೆ ಯಾವ ರೀತಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾತಿ ಏಣಿಶ್ರೇಣಿಯಲ್ಲಿ ತಳವರ್ಗದ ಸಮುದಾಯಗಳ ಮೇಲೆ ಸಾಂಸ್ಕೃತಿಕವಾಗಿ ಬಲಿಷ್ಠ ಮತ್ತು ಉನ್ನತ ಜಾತಿಗಳು ಹೇಗೆ ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಂಡಿವೆ ಎಂಬುದನ್ನು ವಿವರಿಸಿದ್ದಾರೆ.[೧೮](**ಎಸ್. ಆನಂದಿ, ೨೦೧೩**). ದಕ್ಷಿಣ ಭಾರತದಲ್ಲಿ ಜಾತಿಪದ್ಧತಿ ಪ್ರಸ್ತುತದಲ್ಲಿಯೂ ಸಹ ಸಾಂಸ್ಥಿಕ ರೂಪದ ತಾರತಮ್ಯವನ್ನು ಮೇಲ್ವರ್ಗದ ಪುರುಷರಿಂದ ಕೆಳಜಾತಿಯ ಮಹಿಳೆಯರು ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಜಾತಿಯಾಧಾರಿತವಾದ ಕೀಳುಮಟ್ಟದ ವೃತ್ತಿಯಲ್ಲಿ ಹಲವಾರು ಮಹಿಳೆಯರು ಆಚರಣೆಯನ್ನು ಮಾಡುತ್ತಿದ್ದಾರೆ. ದೇವಸ್ಥಾನದಲ್ಲಿ ಪೂಜಾರಿಯು ದಲಿತ ಸಮುದಾಯಕ್ಕೆ ಇಲ್ಲಸಲ್ಲದ ಕಥೆಯನ್ನು ಕಟ್ಟಿ ದೇವರಿಗೆ ದಲಿತ ಯುವತಿಯರನ್ನು ಆರ್ಪಿಸಲು ಪರೋಕ್ಷವಾಗಿ ಅಣಿಮಾಡಿ ಅದರ ಆಚರಣೆಯನ್ನು ಮಾಡುತ್ತಿದ್ದರು. ಶೇಕಡ ೯೯ರಷ್ಟು ದಲಿತ, ಅದಿವಾಸಿ ಹಾಗೂ ಹಿಂದುಳಿದ ಜಾತಿಗಳಿಂದ ಬಂದವರಾಗಿದ್ದಾರೆ.[೧೯](**ಕಬೀರ್ ಶರ್ಮ, ೨೦೧೫**). ದಲಿತರಲ್ಲಿ ಹೊಲೆಯರು, ಮಾದಿಗರು, ಸಮಗಾರ ಮತ್ತು ಭೋವಿ ಸಮುದಾಯದವರು ಈ ಪದ್ಧತಿಗೆ ಬಲಿಯಾಗಿದ್ದಾರೆ.[೨೦](**ಪ್ರತಿಭಾ ಬಿ. ದೇಸಾಯಿ, ೨೦೧೨**). ಬುಡಕಟ್ಟಿನ ದೇವದಾಸಿಯರ ಬದುಕು ಗತಕಾಲದಲ್ಲಿ ಚೆನ್ನಾಗಿತ್ತು ಎಂದು ವೈಭವೀಕರಿಸಿದ್ದಾರೆ(**ಶ್ರೀಮತಿ ಟಿ. ಕೊತ್ತಮ್ಮ, ೨೦೦೭**). ದೇವದಾಸಿ ಪದ್ಧತಿಯು ಹೆಚ್ಚು ದಲಿತರಲ್ಲಿ ದಲಿತ ಸಮುದಾಯದವರು. ಬಡತನ ಮತ್ತು ಮೂಢನಂಬಿಕೆಯೇ ಈ ಪದ್ಧತಿಗೆ ಪ್ರಮುಖ ಕಾರಣ. ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಸಮಾಜದಲ್ಲಿ ಸರಿಯಾದ ಅಂತಸ್ತನ್ನು ಹೊಂದಿಲ್ಲ(**ಸಂಜೀವ್ ಕುಮಾರ್ ನಿರ್ಮಲ್ಕಾರ್, ೨೦೦೮**). ಈ ಪದ್ಧತಿಯಲ್ಲಿ ದಲಿತ ಸಮುದಾಯದ ಹೆಣ್ಣುಮಕ್ಕಳು ಹೆಚ್ಚಾಗಿ ಬಲಿಯಾಗಿದ್ದಾರೆ. ಇವರ ಸಾಮಾಜಿಕ ಆರ್ಥಿಕ ಸ್ಥಿತಿಗತಿಯು ತುಂಬಾ ಚಿಂತಾಜನಕವಾಗಿದೆ[೨೧](**ಎನ್. ಗಾಯತ್ರಿ; ೧೯೯೬**). ಹಿಂದೂ, ಬೌದ್ಧ ಮತ್ತು ಜೈನ ಹಾಗೇ ಕ್ರೈಸ್ತರಲ್ಲಿಯೂ ಸಹ ಯೋಗಿನಿಯರನ್ನು

ದೇವರ ಕಾರ್ಯಕ್ಕೆ ಬಿಡುತ್ತಿದ್ದರು.(**ಗುರುಮೂರ್ತಿ, ೧೯೯೬**) ಭಾರತದಲ್ಲಿ ಹಿಂದುಗಳಲ್ಲದೇ ಜೈನ್, ಬುದ್ಧಿಸಂಗಳಲ್ಲಿಯೂ ಸಹ ಈ ಪದ್ಧತಿಯನ್ನು ನೋಡಬಹುದು ಎಂದು ಚೀನಿಯಾತ್ರಿಕ ಚಾ-ಹು-ಕ್ವಾ ಅಭಿಪ್ರಾಯಪಟ್ಟಿದ್ದಾನೆ[೨](**ತಾರಾಚಂದ್ ಕೆ.ಸಿ., ೧೯೮೭**). ಇಲ್ಲಿ ಈ ಎಲ್ಲ ಸಮುದಾಯಗಳು ಸರ್ಕಾರದ ಮತ್ತು ಕಾನೂನಿನ ಅಡಿಯಲ್ಲಿ ಸಮಾನ ಅವಕಾಶಗಳನ್ನು ಪಡೆಯುತ್ತದೆ. ಆದರೆ ಹಳ್ಳಿಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಇವರು ಯಾವುದೇ ಕಾರಣಕ್ಕೂ ಸಮಾನರಲ್ಲ ಇವರ ನಡುವೆ ಜಾತಿತಾರತಮ್ಯತೆ ಎದ್ದು ಕಾಣುತ್ತದೆ. ಇತರೆ ಅಧ್ಯಯನಗಳನ್ನು ಗಮನಿಸಿದರೆ ದೇವದಾಸಿ ಪದ್ಧತಿಯು ಮಾದಿಗ ಮತ್ತು ಹೊಲೆಯ ಸಮುದಾಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅಧ್ಯಯನಕ್ಕೆ ಒಳಪಟ್ಟ ಕ್ಷೇತ್ರದಲ್ಲಿ ಹೆಚ್ಚಿನದಾಗಿ ದಲಿತರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ದೇವದಾಸಿ ಪದ್ಧತಿಗೆ ಅವರ ಜಾತಿಯ ವಿಚಾರವಾಗಿ ಎಲ್ಲ ದೇವದಾಸಿಯರು ಏನು ಗೊತ್ತಿಲ್ಲ ಎನ್ನುವ ನೇರ ಉತ್ತರ ದೊರಕಿದೆ. ಅದರೆ ಹೆಚ್ಚು ಮಾದರಲ್ಲಿ(ಮಾದಿಗ) ಈ ಪದ್ಧತಿಯಿದೆ ಎಂದು ಗುಂಪುಚರ್ಚೆಯ ವೇಳೆ ತಿಳಿಸಿದ್ದಾರೆ. ಹೀಗೆ ಅಧ್ಯಯನದಲ್ಲಿ ಜಿಲ್ಲೆಯಲ್ಲಿದ್ದ ವಾಸ್ತವ ಅಂಶಗಳನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ದೇವದಾಸಿಯರನ್ನು ಊರಿನವರು ಮತ್ತು ತಮ್ಮ ಜಾತಿಯನ್ನು ಒಳಗೊಂಡಂತೆ ಯಾವ ರೀತಿಯಲ್ಲಿ ನೋಡುತ್ತಾರೆ, ದೇವಸ್ಥಾನದ ಪ್ರವೇಶ ಮುಂತಾದವುಗಳ ಚರ್ಚೆ:** ಊರಿನಲ್ಲಿ ಹೆಚ್ಚು ತಾರತಮ್ಯದಿಂದ ನೋಡಿದ್ದಾರೆ ಮತ್ತು ಬೆರಳೆಣಿಕೆಯಷ್ಟು ಮಾತ್ರ ಗೌರವದಿಂದ ನೋಡಿರಬಹುದು. ದೇವದಾಸಿಯರಿಗೆ ಊರಿನವರಿಂದ ಯಾವುದಾದರೂ ದೌರ್ಜನ್ಯ ನಡೆದಿದೆಯೇ, ಯಾರಿಂದ ಮತ್ತು ಯಾವ ಕಾರಣಕ್ಕಾಗಿ ಆಗಿದೆ ಎಂಬುದನ್ನು ನೋಡಿದಾಗ ಈ ವಿಚಾರವಾಗಿ ಶೇಕಡ ೮೦%ಕ್ಕೂ ಹೆಚ್ಚು ಯಾವುದೇ ತರದ ದೌರ್ಜನ್ಯವಾಗಿಲ್ಲ. ಆದರೆ ಶೇಕಡ ೨೦%ರಷ್ಟು ಮಂದಿಯು ಹೌದು ನಮಗೆ ದೌರ್ಜನ್ಯವಾಗಿದೆ, ಅದು ಯಾವ ತರದ ದೌರ್ಜನ್ಯವೆಂದರೆ ಮಾನಸಿಕ ದೌರ್ಜನ್ಯ ಅಂದರೆ ದೇವದಾಸಿ ಎಂಬ ಹೆಸರಿನಲ್ಲಿ ಅವರಿಗೆ ಮತ್ತು ಅವರ ಮಕ್ಕಳಿಗೆ ಮಾನಸಿಕ ಹಿಂಸೆಯ ತರದ ದೌರ್ಜನ್ಯಗಳು ಆಗಿವೆ. ಇವೆಲ್ಲವನ್ನು ಊರಿನವರು ಮತ್ತು ತಮ್ಮ ಸ್ವಂತ ಸಮುದಾಯದವರು ಮಾಡಿರುತ್ತಾರೆ ಎಂದು ತಮ್ಮ ಅಭಿಪ್ರಾಯವನ್ನು ಚರ್ಚೆಯಲ್ಲಿ ತಿಳಿಸಿದ್ದಾರೆ. ಯಾರು ಸಹ ಯಾವುದೇ ದೂರನ್ನು ನೀಡಿಲ್ಲ ಮತ್ತು ವರದಿಯಾಗಿಲ್ಲ. ಎಲ್ಲ ಕಡೆ ನಮ್ಮ ಮೇಲೆ ಯಾವುದೇ ರೀತಿ ತಾರತಮ್ಯ ನಡೆದರೂ ಸಹ ಯಾರೂ ಸಹ ಧ್ವನಿ ಎತ್ತಿಲ್ಲವೆಂದು ಚರ್ಚೆಯಲ್ಲಿ ಹೇಳಿಕೊಂಡಿದ್ದಾರೆ.

**ಆರೋಗ್ಯಕ್ಕೆ ಸಂಬಂಧಿಸಿದಂತೆ ಚರ್ಚೆ:** ಎಲ್ಲರೂ ಸಹ ಯಾವತರದ ಕಾಯಿಲೆಯಿಲ್ಲವೆಂದು ತಿಳಿಸಿದ್ದಾರೆ. ಕೆಲವರು ಸಾಮಾನ್ಯವಾದ ಕಾಯಿಲೆಗಳು ಶೀತ, ನೆಗಡಿ, ಜ್ವರ, ವಾಂತಿ-ಭೇದಿ ಮುಂತಾದ ಕಾಯಿಲೆಗಳೆಂದು ತಿಳಿಸಿದ್ದಾರೆ. ಈ ವಿಚಾರವಾಗಿ ನಾವು ಮೌಖಿಕವಾಗಿ ಸರ್ಕಾರಿ ಮತ್ತು ಅಲ್ಲಿನ ಕೆಲವು ಸಮುದಾಯದ ನಾಯಕರನ್ನು ವಿಚಾರಿಸಿದಾಗ ಎಲ್ಲರೂ ಸಹ ಸರ್ಕಾರಿ ಆಸ್ಪತ್ರೆಗೆ ಹೊಗುತ್ತಾರೆ. ಸುಮಾರು ಜನರಿಗೆ ಲೈಂಗಿಕ ತರದ ರೋಗಗಳು ಮತ್ತು ಎಚ್ಐವಿ ಮತ್ತು

ಏಡ್ಸ್ ತರದ ಕಾಯಿಲೆಗಳಿವೆ ಎಂದು ಅಲ್ಲಲ್ಲಿ ಹೇಳಿದ್ದಾರೆ. ಬೀದಿ ಬೀದಿಯ ಬದಿಗಳಲ್ಲಿ ಮೈಮಾರಿಕೊಂಡು ಬದುಕು ಸಾಗಿಸುವ ಇವರು ಈ ಸಮಾಜದಲ್ಲಿ ಬಲಿಪಶುಗಳಾಗಿ ಅನುಭವಿಸುತ್ತಿರುವ ರೋಗರುಜಿನಗಳ ತಾಕಲಾಟಗಳನ್ನು ಅನುಭವಿಸುತ್ತಿದ್ದಾರೆ[೨೩](**ಹನುಂಮತ ಹಾಲಿಗೇರಿ**), ದೇವದಾಸಿಯರ ಆರೋಗ್ಯದ ಸ್ಥಿತಿ ಚಿಂತಾಜನಕವಾಗಿದೆ. ಲೈಂಗಿಕ ಮತ್ತು ಸಂತಾನೋತ್ಪತ್ತಿಗೆ ಸಂಬಂಧಿಸಿದಂತೆ ರೋಗಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ಹಾಗೆಯೇ ಈ ರೋಗಗಳ ಕಿರಿ ವಯಸ್ಸಿನ ದೇವದಾಸಿಯರಿಗೂ ಸಹ ಅಂಟಿಕೊಂಡಿವೆ(**ಅಂತರ್ಜಾಲ**). ದೇವದಾಸಿಯು ಕೆಳಮಟ್ಟದ ಜೀವನವನ್ನು ನಡೆಸಿಕೊಂಡು ಹೊಸರೋಗಗಳಿಗೆ ತುತ್ತಾಗಿದ್ದಾರೆ.(**ಪ್ರತಿಭಾ ದೇಸಾಯಿ, ೨೦೧೨**). ಮಹಿಳೆಯರ ಭಾವನಾತ್ಮಕ, ಆರೋಗ್ಯ ಮತ್ತು ಘನತೆಯ ವಿಚಾರಗಳಲ್ಲಿ ಅಡಚಣೆಯುಂಟಾಗಿವೆ[೨೪](**ಮ್ಯಾಜೀ ಬ್ಲಾಕ್, ೨೦೦೭**). ಜಿಲ್ಲೆಯಲ್ಲಿ ಎಲ್ಲರೂ ಸರ್ಕಾರಿ, ಖಾಸಗಿ, ಆರ್‌ಎಮ್‌ಪಿ ಮುಂತಾದ ಕಡೆ ತಮ್ಮ ಆರೋಗ್ಯವನ್ನು ತೋರಿಸುತ್ತಾರೆ. ಆಸ್ಪತ್ರೆಗಳೆಲ್ಲವೂ ನಗರಕೇಂದ್ರಿತ ಮತ್ತು ಪಟ್ಟಣ ಮತ್ತು ಗ್ರಾಮೀಣ ಭಾಗದಲ್ಲಿ ಹೋಬಳಿ ಹಂತದಲ್ಲಿ ಮಾತ್ರ ಆಸ್ಪತ್ರೆಗಳನ್ನು ಕಾಣಬಹುದು ದೇವದಾಸಿಯರು ವಾಸಿಸುವ ಸ್ಥಳದಿಂದ ಒಂದು ಕಿಲೋಮೀಟರಿಂದ ೧೦ ಕಿ.ಮೀವರೆಗೆ ಹೋಗಬೇಕು. ಇದಕ್ಕೆ ಸಂಬಂಧಿಸಿದಂತೆ ಆಶಾ ಕಾರ್ಯಕರ್ತರು, ಆರೋಗ್ಯ ಕಾರ್ಯಕರ್ತರು ಮತ್ತು ಕುಟುಂಬದ ಸದಸ್ಯರೊಂದಿಗೆ ಚರ್ಚಿಸುತ್ತಾರೆ. ಮೇಲಿನ ಕೆಲವು ಅಧ್ಯಯನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ದೇವದಾಸಿಯರಿಗೆ ಕೆಲವು ಲೈಂಗಿಕ ಕಾಯಿಲೆಗಳು ಇರಬಹುದು ಎಂಬ ಅನುಮಾನಿತ ಸತ್ಯದ ಅಂಶವನ್ನು ಗುರುತಿಸಲಾಗಿದೆ.

**ದೇವದಾಸಿಯರ ಮದುವೆಗೆ ಸಂಬಂಧಿಸಿದ ಚರ್ಚೆ:** ಸಮಾಜವು ಮತ್ತು ತಮ್ಮ ಸಮುದಾಯವು ಒಪ್ಪುವಂತಹ ಮದುವೆಯಾಗಿಲ್ಲ. ಕಾರಣಗಳನ್ನು ಕೇಳಿದರೆ ದೇವದಾಸಿಯರು ಮದುವೆಯಾಗಿಲ್ಲ, ಮದುವೆಯಾಗುವಂತಿಲ್ಲ, ಮುತ್ತು ಕಟ್ಟಿದ್ದರಿಂದ ಮತ್ತು ಈಗಾಗಲೇ ತಾಳಿ ಕೊರಳಲ್ಲಿರುವುದರಿಂದ ತಮ್ಮ ಗಂಡ ದೇವರು ಮಾತ್ರವೆಂದು ಮಾನಸಿಕವಾಗಿ ಒಪ್ಪಿತವಾಗಿರುವುದರಿಂದ ಮದುವೆಯ ಮಾತು ಬರುವುದಿಲ್ಲ. ದೇವರ ಹೆಸರಲ್ಲಿ ದೇವಸ್ಥಾನಕ್ಕೆ ಮಹಿಳೆಯರನ್ನು ಅರ್ಪಿಸುವುದು, ತನ್ನ ಇಡೀ ಜೀವನವನ್ನು ಮುಡುಪಾಗಿಡಬೇಕಾಗಿತ್ತು. ದೇವತೆಯ ಭಾವನೆಯಿಂದ ನಂಬಿಸಿ ಇವರ ಮಾನಸಿಕ ಸ್ಥಿತಿಗತಿಯನ್ನು ಅರಿತು, ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅಂತರ್ಗತ ಮಾಡಿದ್ದಾರೆ. ಬದುಕು ಸಾರ್ವಜನಿಕವಾಗಿ ಪ್ರಾರಂಭವಾಗಿ ಸಾರ್ವಜನಿಕವಾಗಿ ಕೊನೆಗೊಳ್ಳುತ್ತಿತ್ತು. ಇಲ್ಲಿ ದೇವದಾಸಿಯರ ಸಾಂಸ್ಕೃತಿಕ ಕಲೆಗಳನ್ನು ಗೌರವಿಸಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಮಟ್ಟದ ಜೀವನವನ್ನು ನಡೆಸುವಂತಾಯಿತು.[೨೫](**ಜೋಯಾ ಜೈದಿ**) ದೇವದಾಸಿ ಪದ್ಧತಿಯಲ್ಲಿ ದೇವತೆ/ರಿಗೆ ಅರ್ಪಿಸಿಕೊಂಡರೆ ಇನ್ನಾವುದೇ ಕಾರಣದಿಂದ ಪರಪುರುಷರನ್ನು ಮದುವೆಯಾಗುವಂತಿಲ್ಲ. ಜೊತೆಗೆ ತನ್ನ ವಯಸ್ಸು ಇರುವವರೆಗೂ ಪರಪುರುಷರ ಲೈಂಗಿಕ ತೃಷೆಯನ್ನು ತೀರಿಸುವ ಗುಲಾಮಗಿರಿಯಾಗಿರಬೇಕು. ದೇವಸ್ಥಾನದಲ್ಲಿ ಪೂಜಾರಿಯು ದಲಿತ ಸಮುದಾಯಕ್ಕೆ ಇಲ್ಲಸಲ್ಲದ ಕಥೆಯನ್ನು ಕಟ್ಟಿ ದೇವರಿಗೆ ದಲಿತ ಯುವತಿಯರನ್ನು ಅರ್ಪಿಸಲು ಪರೋಕ್ಷವಾಗಿ ಅಣಿಮಾಡಿ

ಅದರ ಆಚರಣೆಯನ್ನು ಮಾಡುತ್ತಿದ್ದರು.[೨೬](ಕಬೀರ್‌ಶರ್ಮ: ಬಾರನ್ ಟು ಬಿ ಡೂಮ್ಡ್, ೨೦೧೫). ದಲಿತ ಸಮುದಾಯದಲ್ಲಿ ಹೆಣ್ಣು ಮಗುವನ್ನು ಎಲ್ಲಮ್ಮ ಇಲ್ಲವೇ ಇನ್ನಾವುದೊ ಹೆಣ್ಣುದೇವತೆಗೆ ಹರಕೆ ಬಿಡುತ್ತಾರೆ. ಹರಕೆಯನ್ನು ಕೆಲವೊಮ್ಮೆ ಮಗು ಹುಟ್ಟುವ ಮೊದಲೇ ಅಥವಾ ಹುಟ್ಟಿದ ನಂತರವು ಬಿಡಬಹುದು. ಒಟ್ಟಾರೆ ಮಗುವಿಗೆ ಪ್ರಾಪಂಚಿಕ ತಿಳುವಳಿಕೆ ಬರುವ ಮೊದಲು ಸುಮಾರು ೧೧ ವರ್ಷದೊಳಗಾಗಿ ಹೆಣ್ಣು ಮಗುವನ್ನು ದೇವಿಗೆ ಅರ್ಪಣೆ ಮಾಡುತ್ತಾರೆ. ಹೀಗೆ ಅರ್ಪಣೆಯಾದ ಮೇಲೆ ಅವಳು ಯಾರನ್ನು ಮದುವೆಯಾಗುವ ಹಾಗಿಲ್ಲ. ಅರ್ಪಣೆಯಾದವಳನ್ನು ಸ್ಥಳೀಯರು ಜೋಗತಿ ಎಂದು ಗುರುತಿಸಿದರೆ ಸರಕಾರವು ದೇವದಾಸಿ ಎಂದು ಪರಿಗಣಿಸಿದೆ. ಬ್ರಹ್ಮಚರ್ಯೆಗೆ ಹೆಚ್ಚು ಮಹತ್ವ ಕೊಡದೆ ಜನಪದ ಧರ್ಮಗಳಲ್ಲಿ ದೇವರ ಸೇವೆಗೆ ನೇಮಕಗೊಂಡ ಸ್ತ್ರೀಯು ಲೈಂಗಿಕವಾಗಿ ಜಾಗೃತಗೊಂಡರೆ ಮಾತ್ರ ಆಕೆ ಪವಿತ್ರಳು ಎಂಬ ಆರ್ಥದಲ್ಲಿ ಒಬ್ಬ ದೇವತೆಗೆ ದಾಸಿಯನ್ನು ನೇಮಿಸಿ ಆಕೆಯನ್ನು ದೇವರ ಪ್ರತಿರೂಪವೆಂದು ತಿಳಿದು ಈ ಪ್ರತಿರೂಪ ನಿಜವಾಗಿ ಲೈಂಗಿಕವಾಗಿ ಜಾಗೃತಳಾಗಬೇಕು. ಆಗ ತಮ್ಮ ಬೇಡಿಕೆ ಈಡೇರುತ್ತದೆಂದು ನಂಬಿದರು. ಇದರಿಂದಾಗಿ ದೇವತೆಯ ರಕ್ಷಣೆ ಬೇಡಿ ಬಂದ ಭಕ್ತರು ಹಿಂದಿನ ಕಾಲದಲ್ಲಿ ಪ್ರತಿರೂಪವಾದ ದೇವದಾಸಿಯೊಡನೆ ದೇವಸ್ಥಾನದಲ್ಲೇ ಲೈಂಗಿಕ ಸಂಬಂಧ ಹೊಂದಬೇಕಿತ್ತು. ಇದು ಪ್ರತಿವಾದಿಗಳಿಂದ ಬಂದಂತಹ ಚರ್ಚೆ ಮತ್ತು ಪ್ರಶ್ನಾವಳಿಯ ಮೂಲಕ ತಿಳಿಸಿದ ಮಾಹಿತಿಯು ಸಹ ಇದಾಗಿದೆ. ಆದರೆ ಕೆಲವು ಅಲ್ಲಲ್ಲಿ ಮದುವೆಯಾದ ಮಾಹಿತಿಗಳು ಸಹ ಕೇಳಿ ಬಂದಿವೆ. ಅದು ಅತಿ ವಿರಳ ಮತ್ತು ಪ್ರಗತಿಪರ ಸಂಘ ಸಂಸ್ಥೆಗಳ ಪರಿಶ್ರಮ ಮತ್ತು ದೇವದಾಸಿಯರ ಪರವಾಗಿ ಕೆಲಸ ಮಾಡುವ ಸಂಘಸಂಸ್ಥೆಗಳ ಫಲದ ಅಂತಿಮ ಪರಿಣಾಮವೂ ಸಹ ಇರಬಹುದು. ಆದರೆ ಅಧ್ಯಯನಕ್ಕೆ ಒಳಪಟ್ಟ ಪ್ರದೇಶದಲ್ಲಿ ಯಾವುದೇ ಮದುವೆಗಳು ನಡೆದಿಲ್ಲ ಎಂದು ತಿಳಿಸಿದ್ದಾರೆ ಮತ್ತು ಇತರೆ ಅಧ್ಯಯನಗಳಲ್ಲಿಯೂ ಸಹ ವರದಿಯಾಗಿಲ್ಲ.

**ದೇವದಾಸಿಯರ ಮಕ್ಕಳ ಬಗ್ಗೆ:** ಮೇಲೆ ತಿಳಿಸಿದಂತೆ ದೇವದಾಸಿಯರಿಗೆ ಮದುವೆ ಇಲ್ಲ. ಆದರೆ ಅವರು ತಮ್ಮ ವೈಯಕ್ತಿಕ ಜೀವನವನ್ನು ತಮಗೆ ಇಷ್ಟ ಬಂದ ಪುರುಷರೊಟ್ಟಿಗೆ ಮತ್ತು ದೇವದಾಸಿಯಾಗಿ ಮಾಡುವಾಗ ಬೆಂಬಲಿಸಿದ ಮತ್ತು ಆ ಕುಟುಂಬದ ಆರ್ಥಿಕ ಜವಾಬ್ದಾರಿಯನ್ನು ಹೊತ್ತ ತಮ್ಮದೇ ಸಮುದಾಯ ಅಥವಾ ಬೇರೆ ಸಮುದಾಯದ ಪುರುಷರ ಸಂಬಂಧದಿಂದ ಹುಟ್ಟಿದ ಮಕ್ಕಳ ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಶೇಕಡ ೯೨ರಷ್ಟು ದೇವದಾಸಿಯರಿಗೆ ಮಕ್ಕಳಿದ್ದಾರೆ. ಹಾಗೆಯೇ ಶೇಕಡ ೮ ರಷ್ಟು ದೇವದಾಸಿಯರಿಗೆ ಮಕ್ಕಳಿಲ್ಲ, ಮಕ್ಕಳ ಚಿತ್ರಣವನ್ನು ಗಮನಿಸಿದರೆ ಒಂದು ಹೆಣ್ಣು, ಒಂದು ಗಂಡು, ಒಂದು ಗಂಡು ಮತ್ತು ಒಂದು ಹೆಣ್ಣು, ಒಂದು ಹೆಣ್ಣು ಮತ್ತು ಎರಡು ಗಂಡು, ಒಂದು ಹೆಣ್ಣು ಮತ್ತು ಮೂರು ಗಂಡು, ಒಂದು ಹೆಣ್ಣು ಮತ್ತು ನಾಲ್ಕು ಗಂಡು ಹೀಗೆ ಒಂದು ಗಂಡು ಮತ್ತು ಎರಡು ಹೆಣ್ಣು, ಒಂದು ಗಂಡು ಮತ್ತು ಮೂರು ಹೆಣ್ಣು ಹೀಗೆ ಮತ್ತು ಬರೀ ಹೆಣ್ಣು ಮತ್ತು ಬರೀ ಗಂಡುಮಕ್ಕಳಿರುವ ಮಾಹಿತಿಯಿದೆ. ಇಲ್ಲಿ ಅವರ

ಖಾಸಗಿ ಜೀವನದ ಬಗ್ಗೆ ಹೆಚ್ಚು ಚರ್ಚೆ ನಡೆದಿಲ್ಲ. ಮಕ್ಕಳ ವಯಸ್ಸನ್ನು ನೋಡಿದರೇ ೪ ವರ್ಷದಿಂದ ೬೦ ವರ್ಷದವರೆಗೆ ಇದ್ದಾರೆ. ಅಂದರೆ ದೇವದಾಸಿಯರು ಚಿಕ್ಕ ವಯಸ್ಸಿನವರು ಇದ್ದಾರೆ ಎನ್ನುವ ಸೂಚಕ ಇಲ್ಲಿದೆ.

**ದೇವದಾಸಿಯರ ಮಕ್ಕಳ ಶಾಲೆಗೆ ಹೋಗುವವರ ಪ್ರಮಾಣ:** ಶೇಕಡ ೨೬ರಷ್ಟು ಮಕ್ಕಳು ಮಾತ್ರ ಶಾಲೆಗೆ ಹೋಗಿದ್ದಾರೆ ಮತ್ತು ಹೋಗುತ್ತಿದ್ದಾರೆ. ಶೇಕಡ ೬೬ರಷ್ಟು ಮಕ್ಕಳು ಶಾಲೆಗೆ ಹೊಗಿಲ್ಲ ಮತ್ತು ಹೋಗುತ್ತಿಲ್ಲ ಅಂದರೆ ಅಧಿಕ ಪ್ರಮಾಣದಲ್ಲಿ ಶಾಲೆಯಿಂದ ಹೊರಗೆ ಇದ್ದಾರೆ. ಈಗ ಓದುತ್ತಿರುವವರು ಎಲ್ಲರೂ ಸಹ ಸರ್ಕಾರಿ ಶಾಲೆಯಲ್ಲಿ ಓದುತ್ತಿದ್ದಾರೆ ಮತ್ತು ಓದಿದ್ದಾರೆ. ಶೇಕಡ ೧೧.೫ರಷ್ಟು ಪ್ರಾಥಮಿಕ ಶಾಲೆಯಲ್ಲಿ, ಶೇಕಡ ೩.೫ರಷ್ಟು ಪ್ರೌಢಶಾಲೆಯಲ್ಲಿ, ಶೇಕಡ ೮.೫ರಷ್ಟು ಕಾಲೇಜು ಶಿಕ್ಷಣವನ್ನು ಮಾಡುತ್ತಿದ್ದಾರೆ, ಹಾಗೇ ಶಾಲೆಗೆ ಹೋಗಲು ಸಾಧ್ಯವಾಗಿಲ್ಲದ ಕಾರಣಗಳೆಂದರೆ; ವಯಸ್ಸಿನ ವ್ಯತ್ಯಾಸ, ಆಸಕ್ತಿಯಿಲ್ಲದಿರುವುದು, ಆರ್ಥಿಕ ಕಾರಣ ಮತ್ತು ತಂದೆಯ ಹೆಸರನ್ನು ಕೇಳಿದ್ದರಿಂದ ಅವಮಾನದಿಂದ ಮುಂತಾದ ಕಾರಣಗಳನ್ನು ಹೇಳಿದ್ದಾರೆ. ಶಾಲೆಯಲ್ಲಿ ತಂದೆಯ ಹೆಸರನ್ನು ಮತ್ತು ತಾಯಿಯ ಹೆಸರನ್ನು ಕೇಳುತ್ತಿದ್ದರು. ಸರ್ಕಾರದ ಆದೇಶದ ನಂತರ ತಾಯಿಯ ಹೆಸರನ್ನು ಮಾತ್ರ ನೋಂದಣಿಯ ಸಮಯದಲ್ಲಿ ಕೇಳುತ್ತಾರೆ. ಶೇಕಡ ೩೧ರಷ್ಟು ಮಕ್ಕಳಿಗೆ ಯಾವುದೇ ತಾರತಮ್ಯವಾಗಿಲ್ಲ. ಶೇಕಡ ೭.೫ರಷ್ಟು ಶಾಲೆಯಲ್ಲಿ ಜಾತಿ ಮತ್ತು ದೇವದಾಸಿಯ ಹಿನ್ನೆಲೆಯಿಂದ ಅವಮಾನವಾಗಿದೆ, ನಿಂದನೆಯಾಗಿದೆ. ೦.೫ರಷ್ಟು ಏನು ಗೊತ್ತಾಗಿಲ್ಲವೆಂದು ಉತ್ತರಿಸಿದ್ದಾರೆ. ತಂದೆಯಿಲ್ಲವೆಂದು ಹೆಚ್ಚಾಗಿ ಅವಮಾನವಾಗಿದೆ, ದೇವದಾಸಿಯ ಮಕ್ಕಳೆಂದು ಅವಮಾನವಾಗಿದೆ ಮತ್ತು ಮಾನಸಿಕ ಕಿರಿಕಿರಿಯಾಗಿದೆ ಎಂದು ತಿಳಿಸಿದ್ದಾರೆ.

## ಆರ್ಥಿಕ ಸ್ಥಿತಿಗತಿ ಮೇಲಿನ ಚರ್ಚೆ

**ಕೋಷ್ಟಕ ೪.೨.೭. ವರಮಾನದ ಮೂಲದ ಮಾಹಿತಿ**

| ಕ್ರಸಂ. | ವರಮಾನದ ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಸರ್ಕಾರಿ ಕೆಲಸ | ೩ | ೧.೫% |
| ೨ | ಕೂಲಿ (ಹೊಲ-ಮನೆ ಕೆಲಸ/ಉದ್ಯೋಗ ಖಾತರಿ ಕೆಲಸ ಒಳಗೊಂಡಂತೆ) | ೧೫೬ | ೭೮% |
| ೩ | ಖಾಸಗಿ (ಫ್ಯಾಕ್ಟರಿ/ಅಂಗಡಿ/ಹೋಟೆಲ್) | ೩ | ೧.೫% |
| ೪ | ಇತರೆ (ಏನೂ ಕೆಲಸವಿಲ್ಲ/ಮಕ್ಕಳ ಪಾಲನೆ/ ವಯಸ್ಸಿನ ಇತಿಮಿತಿ) | ೩೮ | ೧೯% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಇವರ ವರಮಾನಕ್ಕನುಗುಣವಾಗಿ ಕೆಲಸ ಕಾರ್ಯಗಳನ್ನು ಗಮನಿಸಿದರೆ ದೇವದಾಸಿಯರು ವಿವಿಧ ರೀತಿಯ ಕೂಲಿ ಕೆಲಸ ಕಾರ್ಯಗಳನ್ನು ತಮ್ಮ ಜೀವನೋಪಾಯಕ್ಕಾಗಿ ಮಾಡುತ್ತಿದ್ದಾರೆ. ಅದರಲ್ಲಿ ೧% ರಷ್ಟು ಸರ್ಕಾರಿ ಹುದ್ದೆಯಲ್ಲಿದ್ದಾರೆ. ಅಂದರೆ ಯಾವುದೇ ದೊಡ್ಡ ಕೆಲಸವಲ್ಲ ಅದು ಪೌರಕಾರ್ಮಿಕರಾಗಿ, ಶೇಕಡ ೭೮ರಷ್ಟು ಕಟ್ಟಡ ಕಟ್ಟುವ, ಹೊಲ ಮನೆ ಕೆಲಸ, ಉದ್ಯೋಗ ಖಾತ್ರಿಯ, ಕೂದಲನ್ನು ಸ್ವಚ್ಛಮಾಡುತ್ತಾರೆ(ತಿರುಪತಿಯಿಂದ ಬರುವ ಕೂದಲಿನ ದೊಡ್ಡ ದೊಡ್ಡ ಗಂಟುಗಳನ್ನು ಬಿಡಿಸಿ ಎಳೆ ಎಳೆಯಾಗಿ ಸ್ವಚ್ಛ ಮಾಡಲಾಗುವುದು), ೧.೫%ರಷ್ಟು ಖಾಸಗಿ ಫ್ಯಾಕ್ಟರಿ, ಅಂಗಡಿ ಮತ್ತು ಹೋಟೆಲ್‌ಗಳಲ್ಲಿ ಸ್ವಚ್ಛತೆ ಕೆಲಸ, ೧೯%ರಷ್ಟು ಏನೂ ಕೆಲಸವಿಲ್ಲದೆ ಮಕ್ಕಳ ಪಾಲನೆಯಲ್ಲಿ ತೊಡಗಿದ್ದಾರೆ. ಕೆಲಸವನ್ನು ಗಮನಿಸಿದರೆ ಪ್ರತಿ ದಿನವೂ ಸಹ ಕೂಲಿ ಸಿಗುವುದಿಲ್ಲ, ಮಳೆ ಚೆನ್ನಾಗಿ ಬಂದರೆ ಮಾತ್ರ ಇಲ್ಲವಾದರೆ ವಲಸೆಯೇ ಇವರ ಪಾಲಿಗೆ ಗತಿ. ಇಲ್ಲಿ ಕೂಲಿಯ ಮೊತ್ತ ಪ್ರತಿ ದಿನಕ್ಕೆ ೬೦ರಿಂದ ೧೦೦ರವರೆಗೆ ಇದೆ. ಉಳಿದ ವಯಸ್ಸಾದ ದೇವದಾಸಿಯರು ಏನನ್ನೂ ಸಹ ಮಾಡಲಾಗದೆ ತಮ್ಮ ಮಕ್ಕಳ ಸಹಾಯದಿಂದ ಅರೆ ಜೀವನ ನಡೆಸುತ್ತಾರೆ. ಸರ್ಕಾರದಿಂದ ಬರುವ ಮಾಸಾಶನ ಯಾವುದೇ ಖರ್ಚಿಗೂ ಸಾಕಾಗುವುದಿಲ್ಲ ಮತ್ತು ಸರ್ಕಾರದಿಂದ ನಿರಂತರವಾಗಿಯೂ ಬರುವುದಿಲ್ಲ. ಅದ್ದರಿಂದ ಇವರ ವರಮಾನದ ಪರಿಧಿಯು ತುಂಬಾ ಚಿಕ್ಕದಿದೆ ಮತ್ತು ಅಭಿವೃದ್ಧಿಯ ಯಾವ ಆಯಾಮದಲ್ಲೂ ಸಹ ಇವರನ್ನು ಗುರುತಿಸಲು ಕಷ್ಟವೆನಿಸಬಹುದು.

## ಕೋಷ್ಟಕ ೪.೨.೮. ವರಮಾನ/ಅದಾಯ ಮತ್ತು ಖರ್ಚುಗಳ ವಿವರ

| ಕ್ರ.ಸಂ. | ಆದಾಯದ ವಿವರ | ಪ್ರತಿವಾದಿಗಳು | ಶೇ | ಖರ್ಚಿನ ವಿವರ ದಿನನಿತ್ಯದ ನಿರ್ವಹಣೆಗಾಗಿ | ಪ್ರತಿವಾದಿಗಳು | ಶೇ |
|---|---|---|---|---|---|---|
| ೧ | ರೂ. ೭೦೦ರಿಂದ ೮೦೦ | ೨ | ೧% | ರೂ. ೧೦೦ರಿಂದ ೧೭೫ | ೨೯ | ೧೪.೫% |
| ೨ | ರೂ. ೧೦೧ರಿಂದ ೧೭೫ | ೭೦ | ೩.೫% | ರೂ. ೧೭೫ಕ್ಕು ಹೆಚ್ಚು | ೯೯ | ೪೯.೫% |
| ೩ | ರೂ. ೧೭೬ರಿಂದ ೨೦೦ | ೮೪ | ೪೨% | ರೂ. ೨೦೦ | ೨೮ | ೧೪% |
| ೪ | ರೂ. ೨೫೦ | ೧ | ೦.೫% | ರೂ. ೨೫೦ | ೬ | ೩% |
| ೫ | ರೂ. ೩೦೦ | ೩ | ೧.೫% | ರೂ. ೩೦೦ರಿಂದ ೪೦೦ | ೭ | ೩.೫% |
| ೬ | ರೂ. ೫೦ ರಿಂದ ೧೦೦ | ೧೭ | ೮.೫% | ರೂ. ೫೦ರಿಂದ ೧೦೦ | ೧೭ | ೮.೫% |
| ೭ | ಯಾವ ಆದಾಯವು ಇಲ್ಲ | ೨೩ | ೧೧.೫% | ಯಾವ ಖರ್ಚು ಇಲ್ಲ | ೧೪ | ೭% |
| | | ೨೦೦ | ೧೦೦% | | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ದೇವದಾಸಿಯರ ಆದಾಯ/ವರಮಾನ ಮತ್ತು ಖರ್ಚಿಗೂ ಅಜಗಜಾಂತರ ವ್ಯತ್ಯಾಸವಿದೆ. ೧%ರಷ್ಟಿಗಿಂತ ಕಡಿಮೆ ರೂ. ೭೦೦-೮೦೦ ದಿನಕ್ಕೆ ವರಮಾನ ಪಡೆಯುತ್ತಾರೆ (ಸರ್ಕಾರಿ ನೌಕರಿ; ಪೌರಕಾರ್ಮಿಕರು). ಹಾಗೆಯೇ ದಿನಕ್ಕೆ ೮.೫%ರಷ್ಟು ಅಧಿಕ ರೂ ೫೦-೧೦೦ ಕಡಿಮೆ ವರಮಾನ ಹೊಂದಿದ್ದಾರೆ. ೭೭%ರಷ್ಟು ರೂ. ೧೦೦-೨೦೦ ಆದಾಯ ಪಡೆಯುತ್ತಾರೆ. ೧೧.೫%ರಷ್ಟು ಯಾವ ಆದಾಯವನ್ನು ಹೊಂದಿಲ್ಲ. ಇದಕ್ಕೆ ಮೇಲಿನ ವಿಶ್ಲೇಷಣೆಯನ್ನು ಗಮನಿಸಿದರೆ ತಿಳಿಯುತ್ತದೆ. ಅದೇ ರೀತಿ ಖರ್ಚಿನ ಅಂಶವನ್ನು ಗಮನಿಸಿದರೆ ಸುಮಾರು ೭೯%ರಷ್ಟು ಅಧಿಕ ರೂ. ೧೦೦-೨೦೦ ದಿನಕ್ಕೆ ಖರ್ಚು ಮಾಡುತ್ತಾರೆ. ಹಾಗೆಯೇ ರೂ. ೨೫೦-೪೦೦ವರೆಗೆ ದಿನಕ್ಕೆ ೬.೫%ರಷ್ಟು ಮಾತ್ರ ಖರ್ಚು ಮಾಡುವ ಸಾಮರ್ಥ್ಯ ಹೊಂದಿದ್ದಾರೆ ಅದಕ್ಕೆ ಸಮಂಜಸ ಕಾರಣಗಳಿರಬಹುದು. ೮.೫%ರಷ್ಟು ರೂ. ೫೦-೧೦೦ ದಿನಕ್ಕೆ ಖರ್ಚು ಮಾಡುತ್ತಾರೆ ಮತ್ತು ೭%ರಷ್ಟು ಯಾವುದೇ ಖರ್ಚು ಮಾಡುವುದಿಲ್ಲ. ಅಂದರೆ ವರಮಾನಕ್ಕೆ ತಕ್ಕಂತೆ ಖರ್ಚು ಬೆನ್ನ ಹಿಂದೆಯೇ ಇರುತ್ತದೆ, ಇಲ್ಲಿಯವರೆಗಿನ ಅಧ್ಯಯನಗಳನ್ನು ಗಮನಿಸಿದರೆ ವರಮಾನಕ್ಕಿಂತ ಖರ್ಚಿನ ಬಾಬ್ತು ಮಾತ್ರ ಅಧಿಕವಾಗಿರುತ್ತದೆ ಎಂಬುದು ಸಾರ್ವತ್ರಿಕ ಸತ್ಯವಾಗಿದೆ.

**ಕೋಷ್ಟಕ ೪.೨೯. ಸಾಲದ ಮಾಹಿತಿ: ಸಾಲದ ತಗೆದುಕೊಂಡ ಮೊತ್ತ ಮತ್ತು ಯಾರಿಂದ ಮತ್ತು ಯಾತಕ್ಕಾಗಿ ಸಾಲ ಮಾಡಲಾಗಿದೆ**

| ಕ್ರ.ಸಂ. | ಸಾಲ ಯಾರಿಂದ | ಸಾಲದ ಮೊತ್ತ (ರೂ.ಗಳಲ್ಲಿ) | ಒಟ್ಟು ಪ್ರತಿವಾದಿಗಳು | ಶೇ |
|---|---|---|---|---|
| ೧ | ಬ್ಯಾಂಕ್ | ೨೦೦೦೦ | ೦೧ | ೦.೫% |
| ೨ | ಸ್ವಸಹಾಯ ಸಂಘ | ೫೦೦-೩೦೦೦ | ೦೮ | ೪% |
| ೩ | ಖಾಸಗಿ ಲೇವಾದೇವಿಗಾರರು | ೫೦೦೦-೪೦೦೦ | ೩೦ | ೧೫% |
| ೪ | ಊರಿನ ಬೇರೆ ಜಾತಿಯವರು (ಗೌಡರು/ಹಣವಿದ್ದವರು/ಶ್ರೀಮಂತರು/ ರೈತರು/ಇತರೆ) | ೫೦೦-೨೦೦೦೦ | ೫೬ | ೨೮% |
| ೫ | ಸಾಲ ತಗೆದುಕೊಂಡಿಲ್ಲ(ದುಡಿಮೆ ಮತ್ತು ವಯಸ್ಸಿನ ಇತಿಮಿತಿ) | ೦೦ | ೧೦೫ | ೫೨.೫% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ದೇವದಾಸಿಯರ ಆದಾಯ ಮತ್ತು ಖರ್ಚಿಗೆ ಪೂರಕವಾಗಿ ಅವರು ಪ್ರತಿದಿನ ತಮ್ಮ ಜೀವನೋಪಾಯಕ್ಕೆ ಸಂಬಂಧಿಸಿದಂತೆ ಸಾಲವನ್ನು ಸಹ ಮಾಡಿದ್ದಾರೆ. ೪೮% ರಷ್ಟಕ್ಕಿಂತ ಅಧಿಕ ದೇವದಾಸಿಯರು ತಮ್ಮ ಜೀವನಕ್ಕೆ ಸಾಲವನ್ನು ಮಾಡಿದ್ದಾರೆ. ಹಾಗೆಯೇ ೫೨%ರಷ್ಟು ಯಾವುದೇ ಸಾಲದ ಗೋಜಿಗೆ ಹೋಗಿಲ್ಲ. ಬ್ಯಾಂಕಿನಿಂದ ಸಾಲವನ್ನು ಕೇವಲ ೦.೫%ರಷ್ಟು ಮಾತ್ರ ಬ್ಯಾಂಕಿನ ಮೂಲಕ ರೂ. ೨೦೦೦೦/- ಸಾಲಸೌಲಭ್ಯ ದೊರೆತಿದೆ. ೪%ರಷ್ಟು ಸ್ವಸಹಾಯ ಸಂಘಗಳಿಂದ ರೂ. ೫೦೦-೩೦೦೦ವರೆಗೆ ಸಾಲ, ೧೫%ಕ್ಕಿಂತ ಅಧಿಕ ತಮ್ಮ ಸಾಲಕ್ಕಾಗಿ ಸ್ಥಳೀಯ ಲೇವಾದೇವಿಗಾರರ ಹತ್ತಿರ ರೂ ೪೦೦೦-೫೦೦೦/-ವರೆಗೆ ಅಧಿಕ ಬಡ್ಡಿಗೆ ಸಾಲ, ೨೮%ಕ್ಕಿಂತ ಹೆಚ್ಚಿನ ಜನರು ತಮ್ಮ ಊರುಗಳಲ್ಲಿ ಗೌಡರು, ಹಣವಂತರು ಮತ್ತು ರೈತರಿಂದ ರೂ.೫೦೦-೨೦೦೦೦ವರೆಗೆ ಬಡ್ಡಿ ಇಲ್ಲವೇ ಬಡ್ಡಿರಹಿತ ಸಾಲವನ್ನು ಪಡೆದಿದ್ದಾರೆ. ಅಧಿಕ ಸಂಖ್ಯೆಯಲ್ಲಿ ಹೆಚ್ಚಿನ ಸಾಲವನ್ನು ಪಡೆಯಲು ಸಾಧ್ಯವಿಲ್ಲದ ಕಾರಣ ಇವರು ಮತ್ತೆ ತಿರುಗಿ ಸಾಲವನ್ನು ಕೊಡುತ್ತಾರೋ/ಇಲ್ಲವೋ, ಯಾವುದೇ ಆಧಾರವಿಲ್ಲದೆ ಇರುವುದು, ಬ್ಯಾಂಕುಗಳು ಸಹ ಸಾಲವನ್ನು ಕೊಡದಿರುವುದು ಮತ್ತು ಸರ್ಕಾರಿ ಸಾಲವು ಸಹ ಸರಿಯಾಗಿ ಲಭ್ಯವಾಗಿಲ್ಲ. ಸಾಮಾನ್ಯವಾಗಿ ಸಾಲವನ್ನು ಮಕ್ಕಳ ಆರೋಗ್ಯ, ಹಬ್ಬ ಹರಿದಿನ, ಜಾತ್ರೆ, ಮಕ್ಕಳ ಮದುವೆ ಮತ್ತು ಬೆರಣಿಕೆಯಷ್ಟು ಮಕ್ಕಳ ವಿದ್ಯಾಭ್ಯಾಸಕ್ಕೆ ಸಾಲವನ್ನು ತೆಗೆದುಕೊಂಡಿದ್ದಾರೆ.

**ಕೋಷ್ಟಕ ೪.೨.೧೦. ಸ್ವಂತ ಮನೆಯ ವಿವರ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಪಕ್ಕಾ ಮನೆ(ಸಿಮೆಂಟ್ ಬಳಸಿದ) | ೧೪೮ | ೭೪% |
| ೨ | ಮಣ್ಣಿನ ಮನೆ | ೮ | ೪% |
| ೩ | ಸೀಟಿನ ಮನೆ(ಕಬ್ಬಿಣದ ಮತ್ತು ಸಿಮೆಂಟ್, ಇತರೆ) | ೪೧ | ೨೦.೫% |
| ೪ | ಮನೆ ಇಲ್ಲ | ೩ | ೧.೫% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ದೇವದಾಸಿಯರ ಮನೆ ಸ್ಥಿತಿಗತಿಯನ್ನು ಇಲ್ಲಿ ನೋಡಿದಾಗ ೭೪%ರಷ್ಟು ಪಕ್ಕಾ ಅಂದರೆ ಸಿಮೆಂಟು ಬಳಸಿದ ಮನೆಗಳು, ೪%ರಷ್ಟು ಮಣ್ಣಿನ ಮನೆಗಳು, ೨೦.೫%ರಷ್ಟು ಸೀಟಿನ ಮನೆಗಳು ಅಂದರೆ, ಕಬ್ಬಿಣ ಮತ್ತು ಸಿಮೆಂಟನ್ನು ಬಳಸಿದ ಮನೆಗಳು, ಹಾಗೆಯೇ ೧.೫%ರಷ್ಟು ಮನೆಗಳೇ ಇಲ್ಲ ಅಂದರೆ ಯಾವುದೇ ತರದ ಸ್ವಂತ ಜಾಗ ಮತ್ತು ಮನೆಗಳು ಇರುವುದಿಲ್ಲ. ಇವರೆಲ್ಲರೂ ಪಕ್ಕದ ಮನೆಯಲ್ಲಿ ಮತ್ತು ಸಂಬಂಧಿಕರ ಮನೆಗಳಲ್ಲಿ ವಾಸವಾಗಿದ್ದಾರೆ. ಈ ವಿಷಯದಲ್ಲಿ ಇವರ

ಸ್ಥಿತಿಗತಿ ಹೇಳತೀರದು. ಸರ್ಕಾರದ ಯೋಜನೆಗಳಲ್ಲಿ ದೇವದಾಸಿಯರ ಹೆಸರಿನಲ್ಲಿ ಸ್ವಂತ ಜಾಗವಿದ್ದರೆ ವಸತಿ ಯೋಜನೆಯು ಗ್ರಾಮ ಪಂಚಾಯಿತಿಯ ಮೂಲಕ ದೊರೆಯುತ್ತದೆ. ಇಲ್ಲದೆ ಇದ್ದರೆ ಯಾವುದೇ ಮನೆಗೆ ಸಂಬಂಧಿಸಿದ ಯೋಜನೆಯಾಗಲೀ, ಸೌಲಭ್ಯವಾಗಲೀ ಸಿಗುವುದಿಲ್ಲ. ಇದಕ್ಕೆ ಸಂಬಂಧಿಸಿದಂತೆ ಇತರೆ ಅಧ್ಯಯನಗಳನ್ನು ಗಮನಿಸಿದರೆ ೧.೫%ಕ್ಕಿಂತ ಅಧಿಕವಾಗಿ ಜಿಲ್ಲೆಯಲ್ಲಿ ದೇವದಾಸಿಯರಿಗೆ ಮನೆಗಳು ಇರುವುದಿಲ್ಲ. ಇಂತಹ ಸೌಲಭ್ಯಗಳನ್ನು ಸಂಘಟನೆಯ ಮತ್ತು ಸಂಘ–ಸಂಸ್ಥೆಗಳ ಸಂಪರ್ಕವಿರುವ ದೇವದಾಸಿಯರು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ ಮತ್ತು ಅಧಿಕಾರಿಗಳಿಗೆ ಇಂತಿಷ್ಟು ಹಣವನ್ನು ಕೊಡುವುದರ ಮೂಲಕವು ಸಾಧ್ಯವಾಗಿದೆ. ಇನ್ನೊಂದು ತಾಂತ್ರಿಕ ಮತ್ತು ನಿರ್ಲಕ್ಷ್ಯಕ್ಕೊಳಗಾಗಿರುವ ಸಂಗತಿಯೆಂದರೆ ದೇವದಾಸಿಯರು ಪರಿಶಿಷ್ಟ ಜಾತಿ ಮತ್ತು ಪಂಗಡದವರಾಗಿದ್ದರೂ ಕೂಡ ಇವರಿಗೆ ಸಿಗುವ ಸೌಲಭ್ಯವು ಸಿಕ್ಕಿಲ್ಲ. ಕಾರಣವೆಂದರೆ ದೇವದಾಸಿಯರಿಗೆ ಬೇರೆ ಯೋಜನೆಯಿದೆ, ಅದರಲ್ಲಿ ಬರುತ್ತದೆ, ಆದ್ದರಿಂದ ಇಲ್ಲಿ ಸಿಗುವುದಿಲ್ಲ ಎನ್ನುವ ಸರ್ಕಾರದ ಅಧಿಕಾರಿಗಳ ನಿರ್ಲಕ್ಷ್ಯವು ಸಹ ಕಾರಣವಾಗಿದೆ.

**ಕೋಷ್ಟಕ ೪.೨.೧೧. ವಿದ್ಯುತ್ ಸಂಪರ್ಕದ ಸೌಲಭ್ಯ ಮತ್ತು ಯಾವ ಮೂಲದ್ದು**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ವಿದ್ಯುತ್ ಇಲ್ಲ | ೩ | ೧.೫% |
| ೨ | ವಿದ್ಯುತ್ ಇದೆ | ೧೯೭ | ೯೮.೫% |
| | ಒಟ್ಟು | ೨೦೦ | ೧೦೦% |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ದೇವದಾಸಿಯರ ಸ್ವಂತ ಮನೆಗಳಲ್ಲಿ ವಿದ್ಯುತ್ ಸೌಲಭ್ಯ ಮತ್ತು ಅದರ ಮೂಲವನ್ನು ನೋಡಿದಾಗ ೯೮.೫%ರಷ್ಟು ಮನೆಗಳಲ್ಲಿ ಸೌಲಭ್ಯವಿದೆ. ಹಾಗೆಯೇ ೧.೫%ರಷ್ಟು ಯಾವುದೇ ಸೌಲಭ್ಯವಿಲ್ಲ. ಇದರ ಮೂಲವನ್ನು ಗಮನಿಸಿದಾಗ ದೇವದಾಸಿಯರ ಮನೆಗಳಲ್ಲಿ ೧೯%ರಷ್ಟು ಸರ್ಕಾರದ ಯೋಜನೆಗಳಿಂದ ಸಿಕ್ಕಿದೆ. ಉಳಿದ ೮೧%ರಷ್ಟು ಸೌಲಭ್ಯವನ್ನು ಖಾಸಗಿಯಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಿದ್ಯುತ್ ಹಾಕಿಸಿಕೊಂಡಿದ್ದಾರೆ. ನಂತರ ತಮ್ಮ ಮನೆಗಳಲ್ಲಿ ಅಗತ್ಯ ಮತ್ತು ವಿದ್ಯುನ್ಮಾನ ವಸ್ತುಗಳ ಮಾಹಿತಿಯನ್ನು ಗಮನಿಸಿದರೆ ೮೮%ರಷ್ಟು ಮನೆಗಳಲ್ಲಿ ರೇಡಿಯೋ, ಟಿವಿ, ಫ್ಯಾನು ಮುಂತಾದ ಇವತ್ತಿನ ಕಾಲಕ್ಕೆ ತಕ್ಕಂತೆ ಮತ್ತು ಅಗತ್ಯ ವಸ್ತುಗಳನ್ನು ಬಳಸುತ್ತಿದ್ದಾರೆ. ಉಳಿದ ೧೨%ರಷ್ಟು ಯಾವುದೇ ತರದ ಅಗತ್ಯ ಮತ್ತು ವಿದ್ಯುನ್ಮಾನ ವಸ್ತುಗಳನ್ನು ಬಳಸುತ್ತಿಲ್ಲ.

**ಕೋಷ್ಟಕ ೪.೨.೧೨. ಶೌಚಾಲಯ ಸೌಲಭ್ಯದ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಇಲ್ಲ | ೧೪೮ | ೭೪% |
| ೨ | ಇದೆ | ೫೨ | ೨೬% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ದೇವದಾಸಿಯರ ಮನೆಗಳಲ್ಲಿ ಶೌಚಾಲಯಗಳ ಮಾಹಿತಿಯನ್ನು ಗಮನಿಸಿದರೆ ತುಂಬ ದುರಂತ ಅಂದರೆ ೭೪%ರಷ್ಟು ಯಾವುದೇ ತರದ ಶೌಚಾಲಯವನ್ನು ಹೊಂದಿಲ್ಲ. ಇದಕ್ಕೆ ಪರ್ಯಾಯವಾಗಿ ಬಯಲು ಶೌಚಾಲಯವನ್ನು ಅವಲಂಬಿಸಿದ್ದಾರೆ. ಉಳಿದ ೨೬%ರಷ್ಟು ಇತ್ತೀಚೆಗೆ ಶೌಚಾಲಯಗಳನ್ನು ಗ್ರಾಮ ಪಂಚಾಯಿತಿಯಲ್ಲಿ ಸಿಗುವ ಅನುದಾನದಿಂದ ಮತ್ತು ಕಡ್ಡಾಯವಾಗಿ ಮನೆಯ ಸೌಲಭ್ಯ ದೊರೆಯ ಬೇಕಾದರೆ ಇದೊಂದು ಮಾನದಂಡವಾಗುತ್ತವುದರಿಂದ ಶೌಚಾಲಯದ ಸಂಸ್ಕೃತಿಗೆ ಹೊಂದಿಕೊಳ್ಳುತ್ತಿದ್ದಾರೆ. ಇದು ಇವರ ಒಬ್ಬರ ಸಮಸ್ಯೆಯಲ್ಲ. ಇಡೀ ಹೈದರಾಬಾದ್ ಕರ್ನಾಟಕದ ಸಮಸ್ಯೆಯೂ ಆಗಿದೆ. ಪ್ರಸ್ತುತದಲ್ಲಿ ಇರುವ ಶೌಚಾಲಯಗಳಲ್ಲಿ ೮೧%ರಷ್ಟು ಸರ್ಕಾರಿ ಯೋಜನೆಯಿಂದ ಮತ್ತು ಕೇವಲ ೧೯%ರಷ್ಟು ತಮ್ಮ ಸ್ವಂತ ಹಣದಿಂದ ಶೌಚಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ.

**ಕೋಷ್ಟಕ ೪.೨.೧೩. ಭೂಮಿಯ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಭೂಮಿ ಇದೆ | ೩೩ | ೧೬.೫% |
| ೨ | ಭೂಮಿ ಇಲ್ಲ | ೧೬೭ | ೮೩.೫% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ದೇವದಾಸಿಯರ ಭೂಮಿ ಅಥವಾ ಜಮೀನುಗಳ ಸ್ಥಿತಿಗತಿಯನ್ನು ಇಲ್ಲಿ ನೋಡಿದರೆ ೮೩.೫%ರಷ್ಟು ಯಾವುದೇ ತರದ ಜಮೀನು ಅಥವಾ ಭೂಮಿ ಇರುವುದಿಲ್ಲ. ೧೬.೫%ರಷ್ಟು ಮಾತ್ರ ಭೂಮಿಯನ್ನು ಹೊಂದಿದ್ದಾರೆ. ಇವರು ಸರ್ಕಾರಿ ಸೌಲಭ್ಯದಿಂದ ಮತ್ತು ತಮ್ಮ ತಂದೆ ತಾಯಿಗಳ ಪಿತ್ರಾರ್ಜಿತ ಕೊಡುಗೆಯಿಂದ ಈ ಭೂಮಿಯನ್ನು ಹೊಂದಿದ್ದಾರೆ. ಮತ್ತು ಸಕಾರದ ಕಡೆಯಿಂದ ೦.೫%ರಷ್ಟು ಮಾತ್ರ ಭೂಮಿ ದೊರೆತಿದೆ. ಆದರೆ ಭೂಮಿಯು ತಮ್ಮ ವಾಸವಿರುವ ಜಾಗದಿಂದ ಸುಮಾರು ೫ರಿಂದ ೧೦ ಕಿ.ಲೊ ಮೀಟರ್ ದೂರದಲ್ಲಿವೆ ಎಂದು ಗುಂಪುಚರ್ಚೆಯಲ್ಲಿ ತಮ್ಮ ಕಷ್ಟಗಳನ್ನು

ಹಂಚಿಕೊಂಡರು. ಉಳಿದ ಭೂಮಿಯು ತಮ್ಮ ಕುಟುಂಬದವರಿಂದ ಬಂದಿದೆ ಎಂದಿದ್ದಾರೆ. ಈ ಎಲ್ಲಾ ಭೂಮಿಗಳಿಗೆ ನೀರಾವರಿ ಸೌಲಭ್ಯವಿಲ್ಲ. ಬರೀ ಮಳೆಯಾಧಾರಿತ. ಅದು ಕೊಪ್ಪಳ ಜಿಲ್ಲೆಯಲ್ಲಿ ಕಡಿಮೆ ಪ್ರಮಾಣದ ಮಳೆಯಾಗುವುದರಿಂದ ಹೆಚ್ಚು ಕಾಲವು ಬರಗಾಲವಾಗಿರುತ್ತದೆ. ಭೂಮಿಯು ಆರ್ಥಿಕ ಸಂಪತ್ತು ಮತ್ತು ಘನತೆಯ ಸಂಕೇತವಿರುವ ಆಸ್ಮಿತೆ ಆದ್ದರಿಂದ ಭೂಮಿಯನ್ನು ಹೊಂದುವ ಯಾವುದೇ ಪ್ರಯತ್ನಗಳು ಈ ಸಮುದಾಯದಲ್ಲಿಲ್ಲ. ಐತಿಹಾಸಿಕ ಅಧ್ಯಯನಗಳ ಪ್ರಕಾರ ರಾಜರು ಹೆಚ್ಚು ಭೂಮಿಯನ್ನು ಬಳುವಳಿಯಾಗಿ/ಕೊಡುಗೆಯಾಗಿ ನೀಡಿದ್ದಾರೆ ಮತ್ತು ದೇವದಾಸಿಯರ ಹೆಸರಿನಲ್ಲಿ ಕೆರೆ-ಕಟ್ಟೆಗಳಿವೆ ಎಂಬ ಮಾಹಿತಿಯಿದೆ. ಆದರೆ ಪ್ರಸ್ತುತದಲ್ಲಿ ಬದುಕುತ್ತಿರುವ ಈ ಸಮುದಾಯವು ಇವೆಲ್ಲಾ ಅವಕಾಶಗಳಿಂದ ವಂಚಿತವಾಗಿವೆ.

**ಕೋಷ್ಟಕ ೪.೨.೧೪. ಬ್ಯಾಂಕಿನ ಶೇವಣಿಯ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಬ್ಯಾಂಕ್ ಖಾತೆ ಇದೆ | ೩೮ | ೧೯% |
| ೨ | ಇಲ್ಲ | ೧೬೨ | ೮೧% |
| | ಒಟ್ಟು | ೨೦೦ | ೧೦೦% |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಮೇಲಿನ ಕೋಷ್ಟಕವನ್ನು ಗಮನಿಸಿದರೆ ದೇವದಾಸಿಯರು ೧೯%ರಷ್ಟು ಮಾತ್ರ ಬ್ಯಾಂಕ್ ಖಾತೆಗಳನ್ನು ಹೊಂದಿದ್ದಾರೆ. ಉಳಿದ ೮೧%ರಷ್ಟು ಯಾವುದೇ ತರದ ಖಾತೆಯನ್ನು ಹೊಂದಿಲ್ಲ. ಅದರಲ್ಲಿ ೧೪.೬%ರಷ್ಟು ಮಾತ್ರ ಗ್ರಾಮೀಣ ಬ್ಯಾಂಕಿನಲ್ಲಿ ತಮ್ಮ ಉಳಿತಾಯ ಖಾತೆಯನ್ನು ಹೊಂದಿದ್ದಾರೆ. ೦.೩೮%ರಷ್ಟು ವಿಜಯ ಬ್ಯಾಂಕಿನಲ್ಲಿ ಖಾತೆಗಳಿವೆ. ಇದನ್ನು ಗಮನಿಸಿದಾಗ ದೇವದಾಸಿಯರ ಆರ್ಥಿಕ ವ್ಯವಹಾರ ಮತ್ತು ಇವರ ಅಭಿವೃದ್ಧಿಯನ್ನು ಸೂಕ್ಷ್ಮವಾಗಿ ನೋಡಿದರೆ ತುಂಬಾ ಗಂಭೀರ ಸ್ಥಿತಿಯಲ್ಲಿದ್ದಾರೆ ಎಂದು ತಿಳಿದು ಬರುತ್ತದೆ.

**ಕೋಷ್ಟಕ ೪.೨.೧೫. ಸ್ವಸಹಾಯ ಸಂಘದಲ್ಲಿ ಸದಸ್ಯತ್ವದ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಸದಸ್ಯತ್ವ ಇದೆ | ೪೧ | ೨೦.೫% |
| ೨ | ಇಲ್ಲ | ೧೫೯ | ೭೯.೫% |
| | ಒಟ್ಟು | ೨೦೦ | ೧೦೦ |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ದೇವದಾಸಿಯರು ಸಂಘ-ಸಂಸ್ಥೆ ಮತ್ತು ಸಂಘಟನೆಯನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ ತುಂಬಾ ಶೋಚನೀಯ ಸ್ಥಿತಿಯಿರುವುದು ಕಂಡುಬರುತ್ತದೆ. ೨೦.೫%ರಷ್ಟು ಮಾತ್ರ ಸ್ವಸಹಾಯ ಸಂಘಗಳಲ್ಲಿ ಸದಸ್ಯತ್ವ ಪಡೆದಿದ್ದಾರೆ. ಉಳಿದ ೭೯.೫%ರಷ್ಟು ಯಾವುದೇ ತರದ ಸದಸ್ಯತ್ವವನ್ನು ಹೊಂದಿಲ್ಲ. ಸದಸ್ಯತ್ವ ಹೊಂದಿರುವ ದೇವದಾಸಿಯರು ಸ್ತ್ರೀಶಕ್ತಿ ಸಂಘಗಳಲ್ಲಿ ೧೮%ರಷ್ಟು ಸದಸ್ಯತ್ವ ಇದೆ ಮತ್ತು ದೇವದಾಸಿ ಮತ್ತು ದಲಿತ ಸಮುದಾಯದ ಸಂಘಗಳಲ್ಲಿ ೨.೫%ರಷ್ಟು ಮಾತ್ರ ಸದಸ್ಯತ್ವ ಹೊಂದಿದ್ದಾರೆ. ಇವೆಲ್ಲವೂ ಸಹ ಅಯಾ ಹಳ್ಳಿಗಳಿಗೆ ಮಾತ್ರ ಸೀಮಿತವಾಗಿವೆ. ಸದಸ್ಯತ್ವ ಇರುವವರು ೧೭%ರಷ್ಟು ಉಳಿತಾಯ ಮಾಡುತ್ತಾರೆ. ಉಳಿದ ೮೩%ರಷ್ಟು ಯಾವುದೇ ಉಳಿತಾಯದ ಪ್ರಕ್ರಿಯೆ ಇರುವುದಿಲ್ಲ. ಉಳಿತಾಯ ಮಾಡುವವರು ರೂ. ೧೦ ರಿಂದ ೪೦೦ರವರೆಗೆ ವಾರ, ೧೦ ದಿನ ಮತ್ತು ತಿಂಗಳಿಗೊಮ್ಮೆ ಉಳಿತಾಯ ಮಾಡುತ್ತಾರೆ, ಉಳಿತಾಯ ಮಾಡುವವರಲ್ಲಿ ೮೫.೫%ರಷ್ಟು ಸಾಲ ಸೌಲಭ್ಯವನ್ನು ಪಡೆದಿರುತ್ತಾರೆ. ಉಳಿದ ೧೪.೫%ರಷ್ಟು ಯಾವುದೇ ಸಾಲ ಪಡೆದಿಲ್ಲ. ಸಾಲವನ್ನು ರೂ. ೨೦೦೦ರಿಂದ ೨೦೦೦೦ರವರೆಗೆ ಪಡೆದಿದ್ದಾರೆ ಮತ್ತು ಆ ಹಣವನ್ನು ಮನೆಯ ಖರ್ಚು, ವ್ಯಾಪಾರ, ಮಕ್ಕಳ ಶಿಕ್ಷಣ ಮತ್ತು ಮಕ್ಕಳ ಮದುವೆಗಳಿಗೆ ಬಳಸಿದ್ದಾರೆ. ಅಲ್ಲದೆ ಮೇಲೆ ಚರ್ಚಿಸಿದ ರೀತಿ ಸಾಲವನ್ನು ಇತರೆ ಮಾರ್ಗಗಳಿಂದ ಪಡೆದು ತಮ್ಮ ಕಷ್ಟಗಳಿಗೆ ಬಳಸಿಕೊಳ್ಳುತ್ತಾರೆ. ಸ್ವಸಹಾಯ ಸಂಘ ಮಹಿಳೆಯರ ಸ್ವಾವಲಂಬನೆ ಮತ್ತು ಸಶಕ್ತೀಕರಣಕ್ಕೆ ಮೂಲ. ಆದರೆ ಈ ಸಮುದಾಯವು ಆಂತಹ ಅಭಿವೃದ್ಧಿಗೆ ಪೂರಕವಾಗಿರುವ ಪ್ರಕ್ರಿಯೆಯಲ್ಲಿ ಕೇವಲ ಬೆರಳೆಣಿಕೆಯಷ್ಟೆ ಸಾಧ್ಯವಾಗಿದೆ.

## ದೇವದಾಸಿಯರಿಗೆ ಸಂಬಂಧಪಟ್ಟಂತೆ ಕಾಯ್ದೆ-ನಿಯಂತ್ರಣ ಮತ್ತು ಅಭಿವೃದ್ಧಿ ಯೋಜನೆಗಳು

**ಕೋಷ್ಟಕ ೪.೨.೧೬. ದೇವದಾಸಿಯರಿಗೆ ಸಂಬಂಧಪಟ್ಟಂತೆ ಯಾವುದಾದರೂ ಕಾಯ್ದೆ-ಕಾನೂನುಗಳು ಮತ್ತು ಅದರ ಸಂಕ್ಷಿಪ್ತ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಕಾನೂನು ಇದೆ(ಗೊತ್ತಿದೆ): ದೇವದಾಸಿ ಬಿಡುವಂತಿಲ್ಲ, ಕಾನೂನುಬಾಹಿರ, ದಂಡ ಹಾಕುತ್ತಾರೆ ಮತ್ತು ಕೇಸು ಹಾಕಿ ಜೈಲಿಗೆ ಕಳುಹಿಸುತ್ತಾರೆ. | ೧೮೫ | ೯೨.೫% |
| ೨ | ಇಲ್ಲ (ಗೊತ್ತಿಲ್ಲ) | ೧೫ | ೭.೫% |
| | ಒಟ್ಟು | ೨೦೦ | ೧೦೦% |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ದೇವದಾಸಿಯರಿಗೆ ಅವರ ಹಕ್ಕು ಮತ್ತು ಅಭಿವೃದ್ಧಿ ಕುರಿತಂತೆ ಮತ್ತು ಹೊಸದಾಗಿ ಹೆಣ್ಣುಮಕ್ಕಳನ್ನು ದೇವದಾಸಿಯಾಗಿ ಅರ್ಪಿಸುವುದನ್ನು ನಿಯಂತ್ರಿಸುವ ಕುರಿತ ಚರ್ಚೆ. ೯೨.೫%ರಷ್ಟು ದೇವದಾಸಿಯರಿಗೆ ಕಾನೂನಿನ ಬಗ್ಗೆ ಸಾಮನ್ಯವಾಗಿ ಗೊತ್ತಿದೆ. ಅಂದರೆ ದೇವದಾಸಿ ಬಿಡುವಂತಿಲ್ಲ, ಕಾನೂನುಬಾಹಿರ, ದಂಡ ಹಾಕುತ್ತಾರೆ ಮತ್ತು ಕೇಸು ಹಾಕಿ ಜೈಲಿಗೆ ಕಳುಹಿಸುತ್ತಾರೆ ಎಂಬ ಕೆಲವು ಮಾಹಿತಿಗಳ ಮೂಲಕ ಇತ್ತೀಚಿನ ದಿನಗಳಲ್ಲಿ ಅರಿವು ಉಂಟಾಗಿದೆ. ಉಳಿದ ೭.೫%ರಷ್ಟು ದೇವದಾಸಿಯರಿಗೆ ಯಾವುದೇ ತರದ ಮಾಹಿತಿಯಿಲ್ಲ. ಅಂದರೆ ಈ ಪದ್ಧತಿ ಕಾನೂನಿನ ಚೌಕಟ್ಟಿನೊಳಗೆ ಬರುತ್ತದೆ ಮತ್ತು ಕಾನೂನಿನಲ್ಲಿ ಇದು ಅಪರಾಧ ಎಂಬ ವಾಸ್ತವ ಸಂಗತಿ ಗೊತ್ತಿಲ್ಲ. ಆದರೆ ಇವರಿಗೆ ಗೊತ್ತಿಲ್ಲ ಎನ್ನುವ ಪ್ರಾಮಾಣಿಕತೆ ಇವರಲ್ಲಿದೆ. ಆದರೆ ಪ್ರಭುತ್ವದ ಜವಾಬ್ದಾರಿಯು ಸಹ ಇದರಲ್ಲಿ ಅಡಗಿದೆ. **ಕರ್ನಾಟಕ ದೇವದಾಸಿಯರ(ಸಮರ್ಪಣಾ ನಿಷೇಧ) ಕಾಯ್ದೆ ೧೯೮೨ ಮತ್ತು ತಿದ್ದುಪಡಿ ೨೦೦೯-೧೦:** ಈ ಕಾಯ್ದೆ ಬರುವುದಕ್ಕೆ ಮುಂಚೆ ಹಲವು ರೀತಿಯ ಕಾನೂನು ಮತ್ತು ಸುಧಾರಣಾ ಕ್ರಮಗಳು ಇದ್ದವು. ಅವೆಲ್ಲವೂ ಸಹ ಅಯಾ ಕಾಲಘಟ್ಟಕ್ಕೆ ಸೀಮಿತವಾಗಿದ್ದವು. ಈ ಕಾಯ್ದೆಯ ಪ್ರಕಾರ ದೇವದಾಸಿ ಎಂದರೆ ಯಾವುದೇ ದೇವಿ, ಪ್ರತಿಮೆ, ಪೂಜಾ ವಸ್ತು, ದೇವಾಲಯ ಮತ್ತಿತರ ಧಾರ್ಮಿಕ ಸಂಸ್ಥೆಗಳು ಮತ್ತು ಯಾವುದೇ ದೇವರ ಹೆಸರಿನಿಂದ ಬಳಸಿ, ಅರ್ಪಿಸಲಾಗುವ ಮಹಿಳೆ ದೇವದಾಸಿ ಆಗಿ ಅರ್ಪಿಸಿಕೊಳ್ಳುವ ಮುನ್ನ ಅಥವಾ ಅಮೇಲೆ ನಡೆಯುವ ಆಚರಣೆ ಮತ್ತು ಎಲ್ಲಾ ಪ್ರಕಾರದ ಅರ್ಪಣೆಗೆ ಒಪ್ಪಿರುವಳೋ ಅಥವಾ ಇಲ್ಲವೋ ಎಂಬುದು ಮುಖ್ಯವಲ್ಲ. ಈ ತೆರನಾದ ಆಚರಣೆಯು ಕಾನೂನುಬಾಹಿರವೆಂದು, ಆಮೇಲೆ ದೇವದಾಸಿಯರ ಸಮಾರಂಭವನ್ನು ಆಚರಿಸುತ್ತಾರೋಯಾರು, ಅದಕ್ಕೆ ಒಪ್ಪಿಗೆ ನೀಡುತ್ತಾರೋ, ಭಾಗವಹಿಸುತ್ತಾರೋ ಅಥವಾ ಸಹಾಯ ಮಾಡುತ್ತಾರೋ ಅವರಿಗೆ ಮೂರು ವರ್ಷಗಳ ಜೈಲುವಾಸ ಮತ್ತು ಎರಡು ಸಾವಿರ ದಂಡ ಮತ್ತು ಹುಡುಗಿಗೆ ಸಹಾಯ ಮಾಡುವ ತಂದೆ ತಾಯಿಗಳು, ಪೋಷಕರು ಅಥವಾ ಸಂಬಂಧಿಗಳಾದರೆ ಐದು ವರ್ಷ ಮತ್ತು ಐದು ಸಾವಿರ ದಂಡ ನೀಡಬೇಕು ಎಂದು ಕಾಯ್ದೆ ಹೇಳುತ್ತದೆ. ಕಾಯ್ದೆಯಲ್ಲಿ ಎರಡು ಪ್ರಮುಖ ಭಾಗಗಳಿವೆ. ಒಂದು ಈ ಪದ್ಧತಿ ಅಪರಾಧವೆಂದು ಪರಿಗಣಿಸಿ ಅದನ್ನು ನಿಷೇಧಿಸಿ ಶಿಕ್ಷೆ ಮತ್ತು ದಂಡವನ್ನು ವಿಧಿಸಿರುವುದು, ಮತ್ತೊಂದು ದೇವದಾಸಿಯರ ಪುನರ್ವಸತಿ ಕಾರ್ಯಕ್ರಮ. ದೇವದಾಸಿಯರ ಬದುಕನ್ನು ಉತ್ತಮ ಪಡಿಸುವಲ್ಲಿ ಒಂದು ಉತ್ತಮ ಬೆಳವಣಿಗೆಯಾಗಿದೆ. ತಿದ್ದುಪಡಿಯ ಭಾಗವಾಗಿ ಸೆಕ್ಷನ್ ೩ ಎ, ೩ ಡಿಯನ್ನು ಹೆಚ್ಚಿನ ಅಧಿಕಾರ ನೀಡಲು ಸೇರಿಸಲಾಗಿದೆ. ಈ ಅಪರಾಧಕ್ಕೆ ಕಠಿಣ ಶಿಕ್ಷೆಯನ್ನು ನೀಡುವ ಅಧಿಕಾರ ಹಾಗೂ ಆ ತರದ ಪ್ರಕ್ರಿಯೆ ಮಾಡಲು ಸ್ವಯಂ ನಿರ್ಧಾರವನ್ನು (ಸುಮಟೋ) ಕೈಗೊಳ್ಳುವ ಅಧಿಕಾರವನ್ನು ಜಿಲ್ಲಾ ದಂಡಾಧಿಕಾರಿಗಳಿಗೆ ನೀಡಲಾಗಿದೆ. ಸೆಕ್ಷನ್ ೩ ಡಿ ಅಡಿಯಲ್ಲಿ ವಿಶೇಷ ಅಧಿಕಾರಿಗಳನ್ನು ನೇಮಿಸಬಹುದು, ಸಾಕ್ಷ್ಯಗಳನ್ನು ಸಂಗ್ರಹಿಸಬಹುದು.. ಸೆಕ್ಷನ್ ೩ಬಿ ಅಡಿ ಅಪಾಯದಿಂದ ಪಾರು ಮಾಡುವುದು, ರಕ್ಷಣೆ, ಆರೈಕೆ ಮಾಡುವುದು, ಸಮಾಲೋಚನೆ ನಡೆಸುವುದು, ಆರ್ಥಿಕವಾಗಿ ಸಬಲರನ್ನಾಗಿಸುವುದು, ತಾತ್ಕಾಲಿಕ ಆಶ್ರಯ ಕಲ್ಪಿಸುವಂತಹ ಒಳಗೊಂಡ ಪುನರ್ವಸತಿ

ಹೇಳುತ್ತದೆ. ಕಾಯ್ದೆಗಳು ಬರೀ ಕಾಗದದಲ್ಲೇ ಉಳಿದು ಬರೀ ಶಿಕ್ಷೆ ಮತ್ತು ದಂಡಗಳಿಗೆ ಸೀಮಿತ ವಾಗಿದೆ. ಆದರೆ ಅವರ ಸಮುದಾಯ ಮತ್ತು ಕುಟುಂಬಗಳ ಹಿಂದಿರುವ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಮನಸ್ಥಿತಿಯ ಅಂಶಗಳನ್ನು ಕಾಯ್ದೆ ಒಳಗೊಂಡಿಲ್ಲದಿರುವುದು ಒಂದು ದೊಡ್ಡ ಹಿಂದೇಟಾಗಿದೆ. ಕಾಯ್ದೆ ೧೯೮೨ರಲ್ಲಿ ಮತ್ತು ಅದಕ್ಕಿಂತ ಅಂದರೆ ಸ್ವಾತಂತ್ರ್ಯಪೂರ್ವ ಕಾಲದಲ್ಲೇ ಹಲವು ರೀತಿಯಲ್ಲಿ ಜಾರಿಯಾಗಿವೆ.[೨](**ಸಮರ್ಪಣಾ ನಿಷೇಧ ಕಾಯ್ದೆ ೧೯೮೨ ಮತ್ತು ತಿದ್ದುಪಡಿ ೨೦೦೯-೧೦**) ಆದರೆ ೧೯೮೨ರ ನಂತರ ದೇವದಾಸಿಯರ ಸಂಖ್ಯೆ ದ್ವಿಗುಣಗೊಂಡಿದೆ. ಅಂದರೆ ೧೯೯೩-೯೪ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ರಾಜ್ಯದಲ್ಲಿ ಬರೀ ೨೨೮೭೩ ಜನ ದೇವದಾಸಿಯರಿದ್ದಾರೆಂದು ತಿಳಿದು ಬಂದಿದೆ. ನಂತರ ೨೦೦೯-೧೦ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ೨೩೭೮೭ ಜನ ಹೆಚ್ಚುವರಿಯಾಗಿ ಇದ್ದಾರೆಂದು ತಿಳಿದುಬಂದಿದೆ. ಅಂದರೆ ಕರ್ನಾಟಕದಲ್ಲಿ ಒಟ್ಟು ೪೬೬೬೦ ಜನ ದೇವದಾಸಿಯರಿದ್ದರೆಂದು, ಇದರಲ್ಲಿ ೬೧೬೬ ಜನ ದೇವದಾಸಿಯರು ಸತ್ತುಹೋಗಿದ್ದಾರೆಂದು ತಿಳಿದುಬಂದಿದೆ. ಉದಾಹರಣೆಗೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೬೦೩೫ ಜನ ದೇವದಾಸಿಯರೆಂದು ತಿಳಿದುಬಂದಿದೆ ಆದರೆ ಪುನರ್ವಸತಿಯ ಯೋಜನೆಯು ಬರೀ ೨೯೨೫ ಜನ ಪಡೆಯುತ್ತಿದ್ದಾರೆ ಉಳಿದ ೩೧೧೦ ಜನ ದೇವದಾಸಿಯರಿಗೆ ಸಿಗುತ್ತಿಲ್ಲ ಎಂದು ಕಣ್ಣು ಮುಚ್ಚಿಕೊಂಡು ಹೇಳಬಹುದು. ಹಾಗೆಯೇ ಕೆಲವು ಸಂಘಟನೆಗಳ ಪ್ರಕಾರ ಲಕ್ಷಕ್ಕೂ ಹೆಚ್ಚು ಜನ ದೇವದಾಸಿಯ ರಿದ್ದಾರೆಂದು ಮತ್ತು ಸದ್ಯದಲ್ಲೂ ಸಹ ಕದ್ದುಮುಚ್ಚಿ ಮುತ್ತು ಕಟ್ಟಿಸುವುದು ಸಹ ನಿಂತಿಲ್ಲ ಎನ್ನುವುದು ಸಹ ಸತ್ಯವಾಗಿದೆ[೨೪](**ದು. ಸರಸ್ವತಿ ಮತ್ತು ಪ್ರೊ.ಆರ್ ಸುನಂದಮ್ಮ, ಮಹಿಳೆ-ಕಾನೂನು-ಪರಿಹಾರ ೨೦೧೭**). ಆದರೆ ಎಲ್ಲೂ ಸಹ ಪ್ರಾಮಾಣಿಕವಾದ ಪ್ರಯತ್ನವಾಗಿಲ್ಲ. ಇಲ್ಲಿಯವರೆಗಿನ ವರದಿ, ಅಧ್ಯಯನಗಳನ್ನು ಗಮನಿಸಿದರೆ ಮತ್ತು ಸರ್ಕಾರದ ಅಂಕಿಸಂಖ್ಯೆಗಳನ್ನು ಗಮನಿಸಿದರೆ ಕಾನೂನಾತ್ಮಕವಾಗಿ ಹೆಚ್ಚಿನ ಕೆಲಸಗಳು ಸಾಧ್ಯವಾಗಿಲ್ಲ.

**ಕೋಷ್ಟಕ ೪.೨.೧೭. ದೇವದಾಸಿ ಪುನರ್ವಸತಿ ಯೋಜನೆಯಿಂದ ಸೌಲಭ್ಯ ಪಡೆದ, ಪಡೆದಿಲ್ಲದಿರುವುದಕ್ಕೆ ಕಾರಣ, ಏನೇನು ಸಿಗುತ್ತಿದೆ, ಮಾಸಾಶನದ ಮತ್ತು ಒಟ್ಟು ಯೋಜನೆಯ ಬಗ್ಗೆ ಮಾಹಿತಿ**

| ಕ್ರಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಸೌಲಭ್ಯ ಸಿಕ್ಕಿದೆ | ೧೪೬ | ೭೩% |
| ೨ | ಸಿಕ್ಕಿಲ್ಲ | ೫೪ | ೨೭% |
| | ಒಟ್ಟು | ೨೦೦ | ೧೦೦% |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಮೇಲಿನ ಚರ್ಚೆಯು ದೇವದಾಸಿಯರಿಗೆ ಮತ್ತು ಅವರ ಹಕ್ಕು ಮತ್ತು ಅಭಿವೃದ್ಧಿಯ ಪ್ರಕ್ರಿಯೆಗೆ ಪ್ರಮುಖ ಪಾತ್ರವನ್ನು ವಹಿಸಿದೆ. ದೇವದಾಸಿ ಪುನಶ್ಚೇತನ ಕಾರ್ಯಕ್ರಮವನ್ನು ತೆಗೆದುಕೊಂಡರೆ ಹೇಳಿಕೊಳ್ಳುವಂತಹ ಮಹತ್ವದ ಕಾರ್ಯಗಳೇನೂ ಆಗಿಲ್ಲ. ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಬಂದಂತಹ ಪ್ರತಿವಾದಿಗಳಲ್ಲಿ ಅಂದರೆ ಸಾಮಾಜಿಕವಾಗಿ ಮತ್ತು ಸರ್ಕಾರದ ದಾಖಲೆಯಲ್ಲಿರುವ ದೇವದಾಸಿಯರು ೭೩%ರಷ್ಟು ಮಾತ್ರ ದೇವದಾಸಿ ಪುನರ್ವಸತಿ ಯೋಜನೆಯಡಿಯಲ್ಲಿ ಫಲಾನುಭವಿಗಳಾಗಿದ್ದಾರೆ. ಉಳಿದ ೨೭%ರಷ್ಟು ಇದರಡಿಯಲ್ಲಿ ಮತ್ತು ದೇವದಾಸಿಯರ ಅನುದಾನ ಇಲ್ಲವೇ ಪುನರ್ವಸತಿ ಯೋಜನೆಯಲ್ಲಿ ಬಂದಿಲ್ಲ. ಇದಕ್ಕೆ ಕಾರಣವೇನೆಂದರೆ ೪೫ ವರ್ಷ ವಯಸ್ಸು ಆಗಿರಬೇಕು. ಇಲ್ಲದಿದ್ದರೆ ಯಾವ ಸೌಲಭ್ಯವೂ ಸಹ ಸಿಗುವುದಿಲ್ಲ. ತಾಂತ್ರಿಕವಾಗಿ ದೋಷ ಮತ್ತು ಅಧಿಕಾರಿಗಳ ನಿಲಕ್ಷ್ಯದಿಂದ ಪಟ್ಟಿಯಲ್ಲಿ ಉಳಿದ ದೇವದಾಸಿಯರನ್ನು ಕೈಬಿಟ್ಟಿರುವುದು ಮತ್ತು ಕೊಪ್ಪಳ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಯಾವುದೇ ಸೌಲಭ್ಯ ಸಿಕ್ಕಿರುವುದಿಲ್ಲ. ಇಲ್ಲಿ ಯಾರ ಒಬ್ಬರ ಹೆಸರು ಪಟ್ಟಿಯಲ್ಲಿ ಇಲ್ಲವಾಗಿದೆ ಎಂದು ನೊಂದ ದೇವದಾಸಿಯರು ತಮ್ಮ ಕಷ್ಟಗಳನ್ನು ಹಳ್ಳಿಗೆ ಹೋದವರ ಜೊತೆ ಮತ್ತು ಸಂಶೋಧನಾ ಗುಂಪು ಚರ್ಚೆಯಲ್ಲಿ  ಹಂಚಿಕೊಂಡಿದ್ದಾರೆ. ಸರ್ಕಾರಿ ಸೌಲಭ್ಯಗಳು ಸಿಕ್ಕಿವೆ. ಅದರಲ್ಲಿ ಪ್ರತಿ ತಿಂಗಳು ಮಾಸಾಶನ ರೂ. ೫೦೦ರಂತೆ ೨ರಿಂದ ೬ ತಿಂಗಳಿಗೊಮ್ಮೆ ಕೊಡಲಾಗುವುದು. ವಸತಿ ಇಲ್ಲದವರಿಗೆ ವಸತಿ ಸೌಲಭ್ಯವನ್ನು ರಾಜೀವ್ ಗಾಂಧಿ ವಸತಿ ನಿಗಮವು ಗ್ರಾಮಪಂಚಾಯಿತಿಯ ಮೂಲಕ ಕೊಡುತ್ತದೆ. ಕಾಲಕ್ಕೆ ತಕ್ಕಂತೆ ಅನುದಾನದ ಮೊತ್ತ ಬದಲಾವಣೆಯಾಗುತ್ತದೆ. ಅದರಲ್ಲಿ ದೇವದಾಸಿ ಪುನರ್ವಸತಿ ಯೋಜನೆಯಡಿಯಲ್ಲಿ ದೊರೆತವರಲ್ಲಿ ೯೭.೩೩%ರಷ್ಟು ಮಾತ್ರ ವಸತಿಸೌಲಭ್ಯ ಸಿಕ್ಕಿದೆ, ಉಳಿದ ೨.೬೬%ರಷ್ಟು ಮಂದಿಗೆ ದೊರೆತಿಲ್ಲ. ವಸತಿ ಸೌಲಭ್ಯದಲ್ಲಿ ಕೆಲವು ಷರತ್ತುಗಳಿವೆ. ದೇವದಾಸಿಯರ ಹೆಸರಲ್ಲಿ ಜಾಗವಿರಬೇಕು ಇಲ್ಲವೆಂದರೆ ಅವರಿಗೆ ಮನೆ ಸಿಗುವುದಿಲ್ಲ. ಹಾಗೆಯೇ ಭೂಮಿ ಒಡೆತನದ ಯೋಜನೆಯಲ್ಲಿಯೂ ಸಹ ಯಾವುದೇ ಪ್ರಗತಿದಾಯಕವಾಗಿ ಕೆಲಸವಾಗಿಲ್ಲ. ಅದರೂ ಸಹ ಕೆಲವರಿಗೆ ಸಿಕ್ಕಿದೆ ಎನ್ನುವ ಒಳ್ಳೆಯ ವಿಚಾರವೂ ಸಹ ಇದೆ. ೨%ರಷ್ಟು ಮಾತ್ರ ಭೂಮಿಯ ಸೌಲಭ್ಯ ದೊರೆತಿದೆ ಅದರಲ್ಲೂ ಸಹ ಊರಿನಿಂದ ತುಂಬಾ ದೂರದಲ್ಲಿ ಸಿಕ್ಕಿದೆ ಮತ್ತು ಬರೀ ಮಳೆಯಾಧಾರವಾದ ಬೇಸಾಯ ಮಾಡಬಹುದು. ಉಳಿದ ೯೮%ರಷ್ಟು ದೇವದಾಸಿಯರಿಗೆ ಭೂಮಿ ದೊರೆತಿಲ್ಲ. ಭೂಮಿ ಒಂದು ಆರ್ಥಿಕ ವರ್ಧನೆಯ ಸಂಕೇತ ಮತ್ತು ಸಾಮಾಜಿಕ ಘನತೆಯ ಅಂಶವಾಗಿದೆ. ಆದರೆ ಈ ವಿಚಾರದಲ್ಲಿ ದೇವದಾಸಿಯರು ತುಂಬಾ ಹಿಂದೆ ಉಳಿದಿದ್ದಾರೆ. ಸಾಲಸೌಲಭ್ಯವನ್ನು ನೋಡಿದರೆ ೬೭.೮೦ರಷ್ಟು ಮಾತ್ರ ಸಾಲ ದೊರೆತಿದೆ. ಅಂದರೆ ರೂ.೨೦೦೦೦ವರೆಗೆ ಮಾತ್ರ ದೊರೆತಿದೆ. ಉಳಿದ ೩೨.೨೦%ರಷ್ಟು ಮಂದಿಗೆ ಯಾವುದೇ ರೀತಿಯ ಸಾಲವು ದೊರೆತಿಲ್ಲ. ಇನ್ನೊಂದು ಕಾರಣವೆಂದರೆ ಬ್ಯಾಂಕುಗಳು ಸಾಲ ಕೊಡಲು ಒಪ್ಪಿದರೆ ಮಾತ್ರ ಇಲ್ಲದಿದ್ದರೆ ಅದೂ ಇಲ್ಲ. ದೇವದಾಸಿಯರು ಸಂಘದಲ್ಲಿ ಸದಸ್ಯತ್ವದ ಮಾಹಿತಿಯನ್ನು ನೋಡಿದಾಗ ಕೇವಲ ೨೧.೯೧%ರಷ್ಟು ಮಾತ್ರ ಪುನರ್ವಸತಿ ಯೋಜನೆಯ ವತಿಯಿಂದ ಮಾಡಿದ ಸಂಘಗಳಲ್ಲಿ ತಮ್ಮ ಸದಸ್ಯತ್ವವನ್ನು ಹೊಂದಿದ್ದಾರೆ. ೭೮.೦೮%ರಷ್ಟು ಸದಸ್ಯತ್ವವನ್ನು ಹೊಂದಿಲ್ಲ ಇದು ಒಂದು ಸಹ ಇವರ ಅಭಿವೃದ್ಧಿಯನ್ನು

ಅಳಿಯಲು ಸಹಾಯವಾಗಬಲ್ಲದು. ಹೀಗೆ ದೇವದಾಸಿಯ ಪುನರ್ವಸತಿ ಯೋಜನೆಯನ್ನು ಪರಿಶೀಲಿಸಿದಾಗ ಅದರ ಸಾಧಕ ಬಾಧಕಗಳು ನಮ್ಮ ಕಣ್ಮುಂದೆ ಇವೆ. ಹಾಗೆಯೇ ಈ ಯೋಜನೆಯಡಿ ಯಲ್ಲಿ ಈ ಪದ್ಧತಿಯ ನಿರ್ಮೂಲನೆಯ ಕಾರ್ಯಕ್ರಮದ ಭಾಗವಾಗಿ ಕಾರ್ಯಕ್ರಮವಿದೆ. ಆದರೆ ಕೆಲವು ಜಾತ್ರೆ ಅದರಲ್ಲೂ ಹುಲಿಗಿ ಜಾತ್ರೆಯಲ್ಲಿ ಮತ್ತು ಇತರೆ ಊರ ಜಾತ್ರೆಗಳಲ್ಲಿ ಈ ಪದ್ಧತಿಯ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮವಿರುತ್ತದೆ. ಆದರೆ ಈ ಕಾರ್ಯಕ್ರಮದ/ಯೋಜನೆಯ ಕಟ್ಟುನಿಟ್ಟಿನ ಕಾನೂನಿನ ಕಾರ್ಯಾಚರಣೆ ನಡೆದಿಲ್ಲ. ಇಡೀ ಜಿಲ್ಲೆಯಲ್ಲಿ ಅಧ್ಯಯನದ ವ್ಯಾಪ್ತಿಯಲ್ಲಿ ಹೊಸದಾಗಿ ದೇವದಾಸಿಯರನ್ನು ಮಾಡಿದಾಗ ಯಾವುದೇ ಪ್ರಕರಣಗಳು ದಾಖಲಾಗಿಲ್ಲ. ಮತ್ತೊಂದು ಸಂಗತಿಯೆಂದರೆ ಸಂಶೋಧನಾ ಸಮಯದಲ್ಲಿ ೩ ಹೊಸ ಪ್ರಕರಣಗಳು ಬೆಳಕಿಗೆ ಬಂದಿವೆ. ಆದರೆ ಪೊಲೀಸ್ ಕಚೇರಿಗಳಲ್ಲಿ ಪ್ರಕರಣ ದಾಖಾಲಾಗಿಲ್ಲ. ಅದರೆ ಅಲ್ಲಿನ ಹಿರಿಯರ, ಪೋಲಿಸರ ಮತ್ತು ಪಂಚಾಯಿತಿ ಸದಸ್ಯರ ಮತ್ತು ಕೆಲವು ಸಂಘ ಸಂಸ್ಥೆಗಳ ಮೂಲಕ ತಪ್ಪೊಪ್ಪಿಗೆ ಬರೆಸಿಕೊಡುವುದರ ಮೂಲಕ ಪ್ರಕರಣ ಹಿಂದಕ್ಕೆ ಪಡೆಯಲಾಗಿದೆ ಅಥವಾ ಸಂಧಾನಕ್ಕೊಳಪಡಿಸಿ ಬಗೆಹರಿಸಿ ಆ ಹೆಣ್ಣುಮಕ್ಕಳಿಗೆ ಸರ್ಕಾರಿ ಬೆಂಬಲದಲ್ಲಿ ಶಿಕ್ಷಣವನ್ನು ಒದಗಿಸಲಾಗಿದೆ ಎನ್ನುವ ಉದಾಹರಣೆಗಳು ದೊರೆತಿವೆ(ಕಾನೂನಿಗೆ ಮತ್ತು ಯೋಜನೆಗೆ ಸಂಬಂಧಿಸಿದಂತೆ ೩ನೇ ಅಧ್ಯಾಯದಲ್ಲೂ ಸಹ ವಿಸ್ತೃತ ವಾಗಿ ಚರ್ಚಿಸಲಾಗಿದೆ). ಪುನರ್ವಸತಿಯನ್ನು ಅವಲೋಕಿಸಿದಾಗ ದೇವದಾಸಿ ಪದ್ಧತಿಯ ನಿಯಂತ್ರಣದ ಕಾರ್ಯಕ್ರಮಗಳು ಮತ್ತು ಸರ್ಕಾರದ ಕಲ್ಯಾಣ ಕಾರ್ಯಕ್ರಮಗಳನ್ನು ನೋಡಿದರೆ ಏನೇನು ಸಾಲದು. ೧೯೮೨ರಲ್ಲಿ ದೇವದಾಸಿಯರ ಅರ್ಪಣಾ ನಿಷೇಧದ ಕಾಯ್ದೆಯನ್ನು ಜಾರಿಗೆ ತಂದು ದೇವದಾಸಿ ಪುನರ್ವಸತಿ ಕಾರ್ಯಕ್ರಮವನ್ನು ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಡಿಯಲ್ಲಿ ಸೇರಿಸಲಾಯಿತು. ಅದರಲ್ಲಿ ೪೫ ವರ್ಷ ಮೇಲ್ಪಟ್ಟವರಿಗೆ ತಿಂಗಳ ಮಾಸಾಶನವು(ಈ ಅಧ್ಯಯನದ ಸಮಯದಿಂದ) ಪ್ರಾರಂಭದಲ್ಲಿ ರೂ. ೪೦೦ ಇತ್ತು. ಪ್ರಸ್ತುತದಲ್ಲಿ ೧೦೦೦ ನಂತರ ೧೫೦೦ಕ್ಕೆ ಹೆಚ್ಚಿಸಿದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೨೯೨೫ ಮಾಜಿ ದೇವದಾಸಿಯರಿಗೆ ಮಾತ್ರ ಮಾಸಾಶನ ದೊರೆಯುತ್ತಿದೆ. ಪ್ರಸ್ತುತದಲ್ಲಿ ಎರಡು ಸಮೀಕ್ಷೆಗಳ ಒಟ್ಟು ಸಂಖ್ಯೆ ೬೦೩೫. ಈ ಒಂದೇ ಜಿಲ್ಲೆಯಲ್ಲಿ ಮಾಜಿ ದೇವದಾಸಿಯರು ಇದ್ದಾರೆ ಮೊದಲು ೧೯೯೩-೯೪ರ ಸಮೀಕ್ಷೆಯಲ್ಲಿ ೧೦ ಜಿಲ್ಲೆಗಳಲ್ಲಿ ೨೨೮೭೩ ದೇವದಾಸಿಯರು ಮಾತ್ರ ಇದ್ದರು. ೨೦೧೦-೧೧ರಲ್ಲಿ ೧೪ ಜಿಲ್ಲೆಗಳಲ್ಲಿ ಈ ಪದ್ಧತಿ ಕಂಡುಬಂದಿದೆ. ಹಾಗೆಯೇ ೨೩೭೮೭ ದೇವದಾಸಿಯರು ಇದ್ದಾರೆ. ಪ್ರಸ್ತುತದಲ್ಲಿ ಒಟ್ಟು ೪೬೬೬೦ ದೇವದಾಸಿಯರು ಕರ್ನಾಟಕದ ರಾಜ್ಯದಲ್ಲಿ ಇದ್ದಾರೆ. ಇದು ಸರ್ಕಾರಿ ಲೆಕ್ಕ. ಆದರೆ ಸಂಘ ಸಂಸ್ಥೆಗಳು ನೀಡಿರುವ ಮತ್ತು ಹೇಳಿಕೆ ಕೊಟ್ಟಿರುವ ಪ್ರಕಾರ ವಿವಿಧ ರೀತಿಯ ಅಂಕಿಸಂಖ್ಯೆಗಳನ್ನು ನೊಡಬಹುದು. ವಸತಿ ಸೌಲಭ್ಯವು ಗ್ರಾಮಪಂಚಾಯಿತಿಯ ಮೂಲಕ ಅಗತ್ಯವಿರುವ ದೇವದಾಸಿಯರಿಗೆ ಆದ್ಯತೆಯ ಮೇರೆಗೆ ಆಯ್ಕೆ ಮಾಡುತ್ತಾರೆ. ಪ್ರಸ್ತುತ ರೂ. ೧೫೦೦೦೦ ಸಹಾಯದ ಮೊತ್ತ. ಆದರೆ ಇಲ್ಲಿ ಒಂದು ದ್ವಂದ್ವವು ಸಹ ಇದೆ. ಯಾರಿಗೆ ವಸತಿ ಭೂಮಿ ಇರುತ್ತದೋ ಅಂತಹವರಿಗೆ ಮಾತ್ರ ವಸತಿಯ ಸೌಲಭ್ಯವು ದೊರೆಯುತ್ತದೆ. ಭೂಮಿ ಇಲ್ಲದವರಿಗೆ ಯಾವುದೇ ಕಾರಣಕ್ಕೂ ಮನೆಯು

ಸಿಗುತ್ತಿಲ್ಲವೆಂಬುದು ವಾಸ್ತವ. ಭೂಮಿಯಿಲ್ಲದವರಿಗೆ ಕೊಡುವ ಅವಕಾಶವಿದೆ. ಆದರೆ ಆ ಪ್ರಯತ್ನವು ಸಹ ಸರಿಯಾಗಿ ನೆರವೇರಿಲ್ಲ. ಹಾಗೆಯೇ ಸರ್ಕಾರಿ ಬ್ಯಾಂಕ್‌ಗಳಿಂದ ೨೦೦೦೦ ರೂ. ಸಾಲ ಸೌಲಭ್ಯವಿದೆ.[೨೫] **(ಶ್ರೀನಿವಾಸ ಗೌಡ, ಪ್ರ.ದ.ಸ, ಕರಾಮಅನಿ, ಬೆಂಗಳೂರು, ೨೦೧೫)** ಆದರೆ ಯಾವುದೇ ಬ್ಯಾಂಕುಗಳು ದೇವದಾಸಿಯರಿಗೆ ಸಾಲವನ್ನು ಕೊಡುತ್ತಿಲ್ಲ. ಆದರೆ ಮಧ್ಯವರ್ತಿಗಳ ಸಹಾಯದಿಂದ ಕೆಲವರು ಸಾಲವನ್ನು ಪಡೆದಿದ್ದಾರೆ. ಮತ್ತೆ ಕೆಲವರು ಬರೀ ಸಹಾಯಧನವನ್ನು ಮಾತ್ರ ತೆಗೆದುಕೊಂಡಿದ್ದಾರೆ. ಜಿಲ್ಲಾ ಕೇಂದ್ರದಲ್ಲಿ ಒಬ್ಬರು ಪುನರ್ವಸತಿ ಅಧಿಕಾರಿಗಳು ಇರುತ್ತಾರೆ. ನಂತರ ೨೦೦೯ರ ತಿದ್ದುಪಡಿ ಕಾಯ್ದೆಯಲ್ಲಿ ಇದರ ನಿಯಂತ್ರಣದ ಬಗ್ಗೆ ಒಲವು ತೋರಿದ್ದಾರೆ. ಜಿಲ್ಲಾಡಳಿತ ಮತ್ತು ನ್ಯಾಯವ್ಯವಸ್ಥೆಯು ನೇರವಾದ ಕಾರಣವಾಗುವಂತೆ ಕಾನೂನು ಮಾಡಿದ್ದಾರೆ. ಹೀಗೆ ಬರೀ ತಿಂಗಳ ಮಾಸಾಶನ, ವಸತಿ ಸೌಲಭ್ಯ, ಸಾಲಸೌಲಭ್ಯ ಮತ್ತು ಕೆಲವರಿಗೆ ಭೂಮಿ ಒಡೆತನದ ಸೌಲಭ್ಯ ದೊರೆತಿದೆ. ಇದಕ್ಕೆ ಕೆಲವು ವೈಫಲ್ಯಗಳನ್ನು ಸಹ ಸೂಕ್ಷ್ಮವಾಗಿ ಗಮನಿಸಬಹುದು. ಅಂದರೆ ಪುನರ್ವಸತಿ ಯಾವುದೇ ರೀತಿಯ ಸಮಗ್ರ ಬದಲಾವಣೆ ತಂದಿಲ್ಲ. ದೇವದಾಸಿಯರ ಮಕ್ಕಳನ್ನು ಎಲ್ಲಿಯೂ ಸಹ ಕಾಯ್ದೆ ಮತ್ತು ಪುನರ್ವಸತಿ ಯೋಜನೆಯಾಗಲೀ ಒಳಗೊಂಡಿಲ್ಲ. ಯಾವುದೇ ರೀತಿಯಲ್ಲೂ ಸಹ ವಿವಾಹದಂತಹ ಪರಿಹಾರವು ಕೂಡ ಫಲಕಾರಿಯಾಗಿಲ್ಲ. ಅರಿವು ಮತ್ತು ಅವಮಾನಗಳು ಸಹ ಬೇರೆ ಬೇರೆ ರೀತಿಯ ಸ್ವರೂಪಗಳನ್ನು ಪಡೆದುಕೊಂಡಿದೆ. ಆರೋಗ್ಯವನ್ನು ಗಮನಿಸಿದರೆ ತುಂಬಾ ಗಂಭೀರವಾದ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬಂದಿದೆ. ಅದಕ್ಕೆ ಕೂಡ ಯಾವುದೇ ಸೂಕ್ತ ಪರಿಹಾರವಿಲ್ಲ. ನಂತರ ಕಾಯ್ದೆ ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ ಎನ್ನುವುದಕ್ಕೆ ಕೆಲವು ಮೂಲಭೂತ ಸಾಮಾಜಿಕ ಅಡೆತಡೆಗಳಿವೆ ಎನ್ನಿಸುತ್ತದೆ ಅಂದರೆ ಪ್ರಸ್ತುತದಲ್ಲಿ ಜಾತಿ, ಲಿಂಗ(ಸಾಮಾಜಿಕ ಲಿಂಗ) ಧರ್ಮಕ್ಕೆ ಅಂಟಿರುವ ಸಾಮಾಜಿಕ ಪರವಾನಿಗೆ ಪಡೆದುಕೊಂಡಂತಹ ಲೈಂಗಿಕತೆ ಪದ್ಧತಿಗಳು ಪ್ರಮುಖವಾಗಿ ಕಾರಣ ಅಥವಾ ಅಡೆತಡೆಗಳಿರಬಹುದು. ಯೋಜನೆಯ ಸೌಲಭ್ಯ ಪಡೆಯದೆ ಇರುವವರ / ಪಡೆದವರ ಬಗ್ಗೆ ಅವರ ಅಭಿಪ್ರಾಯವನ್ನು ನೋಡಿದರೆ 'ದೇವದಾಸಿಯೆಂದರೆ ಒಂದೇ ಅದರಲ್ಲಿ ವಯಸ್ಸಿನ ಅಂತರವಿರುವುದಿಲ್ಲ. ಒಮ್ಮೆ ಮುತ್ತು ಕಟ್ಟಿಸಿಕೊಂಡು ದಾಸಿಯಾದ ಮೇಲೆ ಮುಗಿಯಿತು. ಅವಳು ಚಿಕ್ಕ ವಯಸ್ಸು ಅಥವಾ ದೊಡ್ಡ ವಯಸ್ಸು ಎಂಬುದೇನಿಲ್ಲ, ಎಲ್ಲರೂ ಸಹ ಒಂದೇ ತರ. ಆದರೆ ಸರ್ಕಾರಿ ಯೋಜನೆಯನ್ನು ಪಡೆಯುವ ಸಲುವಾಗಿ ಮಾತ್ರ ಈ ವಯಸ್ಸು ಗಣನೆಗೆ ಬರುತ್ತದೆ. ಅಧಿಕವಾಗಿ ಎಲ್ಲ ದೇವದಾಸಿಯರು ಚರ್ಚೆಯಲ್ಲಿ ಎಲ್ಲರಿಗೂ ಈ ಸೌಲಭ್ಯ ಸಿಗಬೇಕು, ಸಿಗುತ್ತಿರುವುದು ತುಂಬಾ ಕಡಿಮೆ ಪ್ರಮಾಣ ಮತ್ತು ಹೇಳಿಕೊಳ್ಳುವಂತಹ ಸೌಲಭವೇನಲ್ಲ ಎಂದಿದ್ದಾರೆ. ಆದರೆ ಒಮ್ಮೆ ದೇವದಾಸಿ ಆದರೆ ಆ ಪದ್ಧತಿಯಿಂದ, ವ್ಯವಸ್ಥೆಯಿಂದ ಪುನಃ ಸಾಮಾನ್ಯ ಜೀವನಕ್ಕೆ ಬರಲು ಸಾಧ್ಯವಿಲ್ಲ ಆದ್ದರಿಂದ ಎಲ್ಲರಿಗೂ ಸಿಗಬೇಕು ಎನ್ನುವ ಕೂಗು ಬಂದಿದೆ. ಇವರಲ್ಲಿನ ವ್ಯತ್ಯಾಸವನ್ನು ಗಮನಿಸಿದಾಗ ಮಾಸಾಶನ, ವಸತಿ ಮತ್ತು ಸಾಲಸೌಲಭ್ಯಗಳು ೪೫ಕ್ಕಿಂತ ಕಡಿಮೆ ಇರುವವರಿಗೆ ಇಲ್ಲ. ಆದ್ದರಿಂದ ಅವರ ಆರ್ಥಿಕ ಜೀವನ ಕಷ್ಟಕರವಾಗಿದೆ. ತಾವು ದುಡಿದು ತಮ್ಮ ಮತ್ತು ಮಕ್ಕಳ ಜೀವನ

ನಡೆಸಬೇಕು ಎಂದು ನೊಂದ ಕಿರಿಯ ವಯಸ್ಸಿನ ದೇವದಾಸಿಯರು ತಮ್ಮ ಅಳಲನ್ನು ಗುಂಪುಚರ್ಚೆಯಲ್ಲಿ ಹಂಚಿಕೊಂಡರು.

**ರಾಜಕೀಯ ಸ್ಥಿತಿಗತಿ ಮೇಲಿನ ಚರ್ಚೆ**

**ಗುರುತಿನ ಚೀಟಿಯ ಮಾಹಿತಿ, ಚುನಾವಣೆಯಲ್ಲಿ ಮತ ಹಾಕುವುದು, ಚುನಾವಣೆಯಲ್ಲಿ ಸ್ಪರ್ಧೆ ಮತ್ತು ಅದರ ಪ್ರಕ್ರಿಯೆ ಮತ್ತು ಫಲಿತಾಂಶದ ಕುರಿತ ಚರ್ಚೆ:** ದೇವದಾಸಿಯರ ರಾಜಕೀಯ ಭಾಗವಹಿಸುವಿಕೆಯ ವಿಚಾರವನ್ನು ಇಲ್ಲಿ ಚರ್ಚಿಸಲಾಗಿದೆ. ಸಾಮಾನ್ಯವಾಗಿ ಎಲ್ಲರಿಗೂ ಅಂದರೆ ೯೯%ರಷ್ಟು ದೇವದಾಸಿಯರಿಗೆ ಮತದ, ಆಧಾರ್, ಪಡಿತರ ಚೀಟಿಯಿದೆ. ೯೯%ರಷ್ಟು ಜನಕ್ಕೆ ರಾಜಕೀಯದ ಅರಿವಿಲ್ಲ, ಕೇವಲ ೧%ಕ್ಕಿಂತ ಕಡಿಮೆ ಅಲ್ಪ ಸ್ವಲ್ಪ ಅರಿವಿದೆ. ಯಾವುದೇ ರಾಜಕೀಯ ಪಕ್ಷದಿಂದ ಗುರುತಿಸಿಕೊಂಡಿಲ್ಲ. ಆದರೆ ೧%ರಷ್ಟು ಜನ ಗ್ರಾಮಪಂಚಾಯಿತಿಯಲ್ಲಿ ಸ್ಪರ್ಧಿಸಿದ್ದಾರೆ. ಆದರೆ ಕಡಿಮೆ ಸ್ಥಾನದಲ್ಲಿ ಗೆದ್ದಿರುತ್ತಾರೆ ಮತ್ತು ಸೋಲನ್ನು ಕಂಡಿದ್ದಾರೆ. ಅಂದರೆ ೧;೧ ಮತ್ತು ಪ್ರಸ್ತುತದಲ್ಲಿ ಈ ಭಾಗದಲ್ಲಿ ಒಬ್ಬರು ಹಾಲಿ ಗ್ರಾಮಪಂಚಾಯಿತಿ ಸದಸ್ಯರಿದ್ದಾರೆ. ಅವರಿಗೆ ಯಾವುದೇ ತರದ ರಾಜಕೀಯ ಜ್ಞಾನವಿರುವುದಿಲ್ಲ ಆದರೆ ಅವರ ಬೆಂಬಲಿಗರು ಮಾತ್ರ ರಾಜಕೀಯ ನಡೆಸುತ್ತಾರೆ. ಇಲ್ಲವೇ ತಮ್ಮ ಮಕ್ಕಳು ಅಧಿಕಾರ ಮಾಡುತ್ತಾರೆ. ಸಾಮಾನ್ಯವಾಗಿ ಊರಿನ ಮೇಲ್ಜಾತಿ ಮತ್ತು ವರ್ಗದ ಜನರ ಮಾರ್ಗದರ್ಶನದಂತೆ ಚುನಾವಣೆ ಪ್ರಕ್ರಿಯೆ ನಡೆಯುತ್ತವೆ. ಸ್ತ್ರೀವಾದವೆಂದರೆ ಮಹಿಳೆ ತನ್ನ ಸಮಾನತೆ ಮತ್ತು ಘನತೆ ಕಾಪಾಡಿಕೊಳ್ಳುವುದು. ಅದಕ್ಕಾಗಿ ತನ್ನ ಬದುಕು ಮತ್ತು ದೇಹಕ್ಕೆ ಸಂಬಂಧಿಸಿದಂತೆ, ಮನೆಯ ಒಳಗೆ, ಹೊರಗೆ ತಾನೇ ನಿರ್ಧಾರ ಕೈಗೊಳ್ಳುವ ಸ್ವಾತಂತ್ರ್ಯವನ್ನು ಪಡೆಯಲು ನಡೆಸುವ ಹೋರಾಟದ ಪ್ರಕ್ರಿಯೆಯಾಗಿದೆ.[೨೦]**(ಸುಧಾ ಸೀತಾರಾಮನ್)** ಸಾಮಾಜಿಕವಾಗಿ ಅವಕಾಶವಂಚಿತ ಮತ್ತು ಹಿಂದುಳಿದ ಜಾತಿಗೆ ಸೇರಿದ ಕುಟುಂಬದ ಮಹಿಳೆಯರ ಪಾಡು ಅತ್ಯಂತ ನಿಕೃಷ್ಟವಾಗಿದೆ ಎಂದು ಸೆನ್‌ರ ಅಧ್ಯಯನಗಳಲ್ಲಿ ಗುರುತಿಸಬಹುದು. ಸಮಾಜೀಕರಣದ ಪ್ರಕ್ರಿಯೆಯು ಮಹಿಳೆಯರನ್ನು ಅಧೀನರನ್ನಾಗಿಯೂ, ಅಬಲೆಯರನ್ನಾಗಿಯೂ, ಅಸಹಾಯಕರನ್ನಾಗಿಯೂ ಮಾಡಿ ಬಿಡುತ್ತದೆ. ಅಮರ್ತ್ಯ ಸೆನ್ ಪ್ರಕಾರ ಸಮಾಜ ಅಧ್ಯಯನದ ಜ್ಞಾನ ಶಿಸ್ತುಗಳು ಮಹಿಳೆಯರನ್ನು ರೋಗಿಯ ತರಹ ಮಾತ್ರ ನೋಡುತ್ತಿವೆ.**(ಟಿ.ಆರ್. ಚಂದ್ರಶೇಖರ, ೧೯೯೬)** ಮಹಿಳಾ ಭಾಗವಿಸುವಿಕೆ ಮತ್ತು ರಾಜಕೀಯ ಭಾಗವಹಿಸುವಿಕೆ ಪರಿಕಲ್ಪನೆಗಳ ಬಗ್ಗೆ ಸಂಕ್ಷಿಪ್ತವಾಗಿ ನಿರ್ವಚಿಸಿದ್ದಾರೆ. ಮಹಿಳೆ ತಾನು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಪ್ರಕ್ರಿಯೆ. ಉದಾ: ಯಾವುದೇ ರಾಜಕೀಯ ಪಕ್ಷಗಳ ಸದಸ್ಯತ್ವ, ಪಕ್ಷ ಕಟ್ಟುವುದು, ಚುನಾವಣೆಯಲ್ಲಿ ಸ್ಪರ್ಧಿಸುವುದು ಇತ್ಯಾದಿ... ಶಾಸನಸಭೆಯಲ್ಲಿ ಶೇ. ೩೩.೩೩ ಇರಬೇಕೆಂದು ತಮ್ಮ ನಿಲುವುಗಳನ್ನು ಮಹಿಳಾ ಮೀಸಲಾತಿ ಮಸೂದೆ ಜಾರಿ ಕುರಿತ ಚರ್ಚೆಗಳು ಇದಕ್ಕೆ ಸಾಕ್ಷಿ. ಇಲ್ಲಿ ರಾಜಕೀಯ ಭಾಗವಹಿಸುವಿಕೆಯನ್ನು ಮೂರು ಗುಂಪುಗಳಲ್ಲಿ ಗುರುತಿಸಿದ್ದಾರೆ. ಅವು– ಅತಿಯಾದ ಕ್ರಿಯಾಶೀಲತೆ, ಪ್ರಾಸಂಗಿಕ ಕ್ರಿಯಾಶೀಲತೆ ಮತ್ತು ಕ್ರಿಯಾಶೂನ್ಯ ಮಟ್ಟ. ಹಾಗೆ ರಾಜಕೀಯ ಸಮಾಜೀಕರಣ

ಪರಿಕಲ್ಪನೆಯನ್ನು ಇಲ್ಲಿ ತಿಳಿಸಿದ್ದಾರೆ. ಆರ್. ಬಾಲು ಅವರು ಹೇಳುವಂತೆ ರಾಜಕೀಯ ಪದ್ಧತಿಯ ಬಗ್ಗೆ ನಂಬಿಕೆಗಳನ್ನು, ಅನಿಸಿಕೆಗಳನ್ನು ಸ್ಥಾಪಿಸಿ, ಬಳಸಿಕೊಳ್ಳುವುದೇ ರಾಜಕೀಯ ಸಮಾಜೀಕರಣ. ಕೊನೆಯಲ್ಲಿ ಅಮರ್ತ್ಯ ಸೆನ್ ಅವರ ಧಾರಣಶಕ್ತಿಯ ಹಾಗೂ ರಾಜಕೀಯ ಸಮಾಜೀಕರಣದ ನಿಯೋಗಗಳ ಹಿನ್ನೆಲೆಯಲ್ಲಿ ಚುನಾಯಿತ ಮಹಿಳೆಯರು ಸಂಖ್ಯಾತ್ಮಕವಾಗಿ ರಾಜಕೀಯದಲ್ಲಿ ಪಾಲ್ಗೊಂಡರೂ, ರಾಜಕೀಯ ನೀತಿ ನಿರೂಪಣೆ ಮತ್ತು ನಿರ್ಣಯ ಕೈಗೊಳ್ಳುವಂತಹ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿರುವುದು ಕ್ರಿಯಾಶೂನ್ಯ ಮಟ್ಟದಲ್ಲಿರುವುದು ಕಾಣಿಸುತ್ತದೆ. ಪ್ರಾಸಂಗಿಕ ಕ್ರಿಯಾಶೀಲ ಮಟ್ಟದಲ್ಲಿ ಪಾಲ್ಗೊಳ್ಳುವುದು ಗೋಚರಿಸಿದಂತೆ ಕಂಡುಬಂದರೂ ಕ್ರಿಯಾಶೂನ್ಯ ಹಂತದಲ್ಲಿ ಅಧಿಕ ವಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ಲಿಂಗ, ಜಾತಿ ಮತ್ತು ವರ್ಗಾಧಾರಿತ ಹಿನ್ನೆಲೆಯಲ್ಲಿ ಸಹ ನೋಡಲಾಗಿದೆ.[೬೧]**(ಡಾ. ಮೀನಾಕ್ಷಿ, ೨೦೧೦)** ಸಂಘಟಿತ ಮತ್ತು ಅಸಂಘಟಿತ ವಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಮಹಿಳೆಯರು ಸ್ವಾಭಾವಿಕ ಮತ್ತು ಸಾಮಾಜಿಕ ಎಲ್ಲೆಗಳನ್ನು ಮೀರುವಂತಿಲ್ಲ ಎಂದು ತಮ್ಮ ಚರ್ಚೆಯಲ್ಲಿ ಗುರುತಿಸಿದ್ದಾರೆ. ಮಹಿಳೆ ಯಾವಾಗಲೂ ತೇಜೋವಧೆಯಿಂದ ಮತ್ತು ಆರ್ಥಿಕ ಅಭದ್ರತೆಯಿಂದ, ಸಾಮಾಜಿಕವಾಗಿ ಕೆಳಹಂತದಲ್ಲಿ ಮತ್ತು ಭಾವನಾತ್ಮಕವಾಗಿ ಬೆಂಬಲವಿಲ್ಲದ ವೈಯಕ್ತಿಕವಾಗಿ ಒಬ್ಬಂಟಿತನದಿಂದ ಜೀವಿಸಬೇಕಾಗುತ್ತದೆ ಹಾಗೂ ಎಲ್ಲಾ ರೀತಿಯಲ್ಲಿ ತುಂಬಾ ಹಿಂದುಳಿದಿದ್ದಾರೆ**(ಶಾಂತಾ ಭಂಗಾರಿ, ೨೦೦೮)**. ಮಹಿಳೆಯರ ಸ್ಥಾನಮಾನ, ಸಮಾನತೆ ಮತ್ತು ಸ್ವಾತಂತ್ರ್ಯಕ್ಕಾಗಿ ಶತಮಾನಗಳಿಂದಲೂ ಹೊರಾಟ, ಪ್ರತಿಭಟನೆ ನಡೆಯುತ್ತಲೇ ಇವೆ. 'ಹೆಂಗಸಿನ ಬುದ್ಧಿ ಮೊಳಕಾಲಿನ ಕೆಳಗೆ', 'ಸ್ತ್ರೀ ಬದ್ಧ ಪ್ರಳಯಾಂತಕಿ ಮುಂತಾದ ಮಾತುಗಳ ಮೂಲಕ ಸ್ತ್ರೀಯ ಬೌದ್ಧಿಕತೆಯನ್ನು ಅಲ್ಲಗಳೆಯುವುದನ್ನು, ತುಚ್ಛೀಕರಿಸುವುದನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಈ ದ್ವಿಲಿಂಗ ದೃಷ್ಟಿಕೋನವು ಸ್ತ್ರೀ ಪುರುಷರಿಬ್ಬರಲ್ಲೂ ಇರಬೇಕಾದ ಪ್ರಜ್ಞೆ ಎಂದು ಹೇಳುವ ಸ್ತ್ರೀವಾದದ ಅಂತಿಮ ಕಾಳಜಿಯೆಂದರೆ ಮನುಷ್ಯ-ಮನುಷ್ಯರ ನಡುವಿನ ಸಮಾನತೆ. ಆಧುನಿಕ ಅಧ್ಯಯನ, ಆಧುನಿಕ ಚಿಂತನೆಗಳು, ಆಧುನಿಕ ಜೀವನಶೈಲಿ ಮತ್ತು ಬದಲಾದ ಕಾಲಮಾನಗಳು ಮಹಿಳೆಯರನ್ನು ಯೋಚಿಸುವಂತೆ ಮಾಡಿದವು. ಆದರೆ ಮಹಿಳೆಯು ಪುರುಷನಿರ್ಮಿತ ಸಮಾಜದಡಿಯಲ್ಲಿ ಜೀವಿಸುತ್ತಿದ್ದಾಳೆ ಎಂಬ ಭಾವನೆ ಜಾಗೃತಗೊಂಡತೆ ಮಹಿಳಾ ಸಬಲೀಕರಣದ ಕೂಗು ಹೆಚ್ಚೆಚ್ಚು ಸ್ಪಷ್ಟವಾಗತೊಡಗಿತು. ಮಹಿಳೆ ಮತ್ತು ವಿಕ್ರೇಂದ್ರೀಕರಣ ಎಂಬೆರಡು ಅಂಶಗಳ ಮುಖ್ಯ ಉದ್ದೇಶ ಪ್ರಜಾಸತಾತ್ಮಕ ಸಮಾನತೆ ಯನ್ನು ಸ್ಥಾಪಿಸಿ ಆ ಮೂಲಕ ಶತಮಾನಗಳಿಂದ ಪ್ರಪಂಚದ ಎಲ್ಲಾ ಸಮಾಜಗಳಲ್ಲಿ ಬೇರೂರಿರುವ ಲಿಂಗ, ವರ್ಗ, ಜಾತಿ, ಭಾಷೆ, ಪ್ರದೇಶದಂತಹ ಸಾಮಾಜಿಕ ಭಿನ್ನತೆಯ ರೂಪದಲ್ಲಿ ಮನೆ ಮಾಡಿರುವ ಡಾಮಿನೆಂಟ್ ಸಂಸ್ಕೃತಿಯ ದಾಸ್ಯದ ಪದರುಗಳನ್ನು ನಿರ್ನಾಮವಾಗಿಸುವುದು ಅವುಗಳ ಪ್ರಮುಖ ಅಜೆಂಡವಾಗಿದೆ. ರಾಜಕೀಯದಲ್ಲಿ ಪರಿಣಾಮಕಾರಿಯಾಗಿ ಸಾಧಿಸುವಲ್ಲಿ ಕೆಳಹಂತದ ಅಥವಾ ಸ್ಥಳೀಯ ಮಟ್ಟದ ಸರ್ಕಾರಗಳು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ. ಈ ಪರಿಕಲ್ಪನೆಯು ದಿನದಿಂದ ದಿನಕ್ಕೆ ಪರಿಣಾಮಕಾರಿಯಾಗಿ ಜಾಗೃತಗೊಳ್ಳುತ್ತಿದೆ. ಅದಕ್ಕೆ ಪೂರಕವಾಗಿ ಮಹಿಳಾ ಮೀಸಲಾತಿ ಪರಿಕಲ್ಪನೆಯು ಒಂದಾಗಿದೆ.[೨]**(ಅರ್ಚನಾ ಹಿರೆಮಠ, ೨೦೧೭)**. ಆದರೆ ಇಲ್ಲಿ ದೇವದಾಸಿ

ಯರಿಗೆ ಸಂಬಂಧಿಸಿದಂತೆ ಯಾವುದೇ ಅಭಿವೃದ್ಧಿಯ ಚರ್ಚೆಗಳು ನಡೆಯುವುದಿಲ್ಲ ಮತ್ತು ವಸತಿ ಸೌಲಭ್ಯಕ್ಕೆ ಮಾತ್ರ ಗ್ರಾಮಪಂಚಾಯಿತಿಗೆ ಬರುತ್ತಾರೆ. ಇಲ್ಲವೆಂದರೆ ಈ ಕಡೆ ತಲೆಹಾಕುವುದಿಲ್ಲ. ಅಂದರೆ ದೇವದಾಸಿಯರು ರಾಜಕೀಯ ಪ್ರಕ್ರಿಯೆಯಲ್ಲಿ ಕೇವಲ ಮತ ಚಲಾಯಿಸುವುದಕ್ಕೆ ಸೀಮಿತ ವಾಗಿದ್ದಾರೆ ಮತ್ತು ಅವಕಾಶ ಬಂದಾಗಲೂ ತಮ್ಮ ಪ್ರತಿನಿದಿತ್ವ ಹೆಸರಿಗೆ ಮಾತ್ರ ಕೆಲಸ ಕಾರ್ಯವೆಲ್ಲವೂ ಊರಿನ ಅಥವಾ ಸಮುದಾಯದ ಕೆಲವು ನಾಯಕರ ಕೈಯಲ್ಲಿರುತ್ತದೆ ಎಂಬುದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಕೋಷ್ಟಕ ೪.೨.೧೮. ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಮತ್ತು ಅವರ ಮುಂದಿನ ಭವಿಷ್ಯದ ತಮ್ಮ ಮನದಾಳದ ಮಾತು**

| ಕ್ರ.ಸಂ. | ವಿವರಗಳು | ಒಟ್ಟು ಪ್ರತಿವಾದಿಗಳು | ಶೇಕಡವಾರು |
|---|---|---|---|
| ೧ | ಮಾಸಾಶನ ಮತ್ತು ಹಣದ ರೂಪದಲ್ಲಿ | ೩೦ | ೧೫% |
| ೨ | ಭೂಮಿ(ನೀರಾವರಿ/ಫಲವತ್ತಾದ/ಹತ್ತಿರ) | ೧೨೦ | ೬೦% |
| ೩ | ಕಾನೂನು ಬಿಗಿಯಾಗಬೇಕು | ೪ | ೨% |
| ೪ | ದೇವದಾಸಿಯರ ಮಕ್ಕಳಿಗೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿ | ೩೪ | ೧೭% |
| ೫ | ರಾಜಕೀಯದಲ್ಲಿ ಮೀಸಲಾತಿ | ೪ | ೨% |
| ೬ | ಸಮಾಜವು ನೋಡುವ ದೃಷ್ಟಿಯು ಬದಲಾಗಬೇಕು ಮತ್ತು ಈ ಪದ್ಧತಿ ಬೇಡ | ೬ | ೩% |
| | ಒಟ್ಟು | ೨೦೦ | ೧೦೦% |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ದೇವದಾಸಿ ಪದ್ಧತಿಯ ನಿರ್ಮೂಲನೆಯ ಕುರಿತಂತೆ ಮತ್ತು ಅವರ ಮುಂದಿನ ಭವಿಷ್ಯದ ಜೀವನದ ಬಗ್ಗೆ ವೈಯಕ್ತಿಕವಾಗಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಕೇಳಿದಾಗ ತುಂಬಾ ನೋವಿನಿಂದ, ಸಿಟ್ಟಿನಿಂದ ಮತ್ತು ಬೇಜಾರಿನಿಂದ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರು. ಅದರಲ್ಲಿ ಈ ಪದ್ಧತಿಯನ್ನು ಕಾನೂನಿನ ಮೂಲಕ ಕೊನೆಗಾಣಿಸಿ ಇರುವ ದೇವದಾಸಿಯರಿಗೆ ಮಾಸಾಶನ ಇಲ್ಲವೇ ಹಣದ ರೂಪದಲ್ಲಿ ರೂ. ೫೦೦೦ರಿಂದ ೧೦೦೦೦ವರೆಗೆ ಸರ್ಕಾರವು ನಿರಂತರವಾಗಿ ಕೊಡಬೇಕು. ೬೦%ಕ್ಕೂ ಅಧಿಕವಾಗಿ ನೀರಾವರಿ ಮತ್ತು ೫ ಎಕರೆ ಭೂಮಿಯನ್ನು ಊರಿನ ಸಮೀಪದಲ್ಲಿ ಕೊಡಬೇಕು. ಕೆಲವರು ಕಾನೂನನ್ನು ಗಟ್ಟಿಗೊಳಿಸಿ ಈ ಪದ್ಧತಿಯನ್ನು ಕೊನೆಗಾಣಿಸಬೇಕು. ೧೭%ಕ್ಕಿಂತ ಅಧಿಕವಾಗಿ ದೇವದಾಸಿಯರ ಮಕ್ಕಳಿಗೆ ಉನ್ನತ ಮತ್ತು ತಾಂತ್ರಿಕ ಶಿಕ್ಷಣದಲ್ಲಿ ಮೀಸಲಾತಿ

ಕೊಡುವುದರ ಮೂಲಕ ದೇವದಾಸಿಯರ ಮಕ್ಕಳು ಈ ಪದ್ಧತಿಗೆ ಬರಬಾರದು ಎನ್ನುವ ವಿಚಾರ. ೨%ರಷ್ಟು ರಾಜಕೀಯದಲ್ಲಿ ಮೀಸಲಾತಿ ಕೊಡಬೇಕು. ಇದು ಸಾಧ್ಯವಾದರೆ ತಮ್ಮ ಸಮಸ್ಯೆಗಳನ್ನು ನಾವೇ ಬಗೆಹರಿಸಿಕೊಳ್ಳುತ್ತೇವೆ ಮತ್ತು ಅಧಿಕಾರ ಮಾಡುತ್ತೇವೆ. ಸಮಾಜದ ಕೆಟ್ಟ ವ್ಯವಸ್ಥೆಯಲ್ಲಿ ಈ ಪದ್ಧತಿ ಮರುಹುಟ್ಟು ಪಡೆಯಬಾರದು ಮತ್ತು ಸಮಾಜವು ದೇವದಾಸಿಯರನ್ನು ಮತ್ತು ಮಕ್ಕಳನ್ನು ನೋಡುವ ದೃಷ್ಟಿಕೋನವು ಬದಲಾಗಬೇಕು ಮತ್ತು ಇವರ ಮೇಲಿನ ತಪ್ಪು ಗ್ರಹಿಕೆ ಸರಿಪಡಿಸಿಕೊಳ್ಳಬೇಕು. ಬೇರೆ ಯಾರೂ ಸಹ ಇದಕ್ಕೆ ಬಲಿಯಾಗಬಾರದು ಮತ್ತು ತಮ್ಮ ಶತ್ರುಗಳಿಗೂ ಸಹ ಈ ಸಮಸ್ಯೆ ಬರಬಾರದು ಎಂದು ದುಃಖದಿಂದ ಹಂಚಿಕೊಂಡರು. ಈ ತರದ ಭಿನ್ನರೀತಿಯಲ್ಲಿ ತಮ್ಮ ನೋವನ್ನು ಮತ್ತು ಮುಂದಿನ ಭವಿಷ್ಯವನ್ನು ತಮ್ಮ ಅಭಿಪ್ರಾಯದಲ್ಲಿ ತಿಳಿಸಿದ್ದಾರೆ.

**೪.೩. ದೇವದಾಸಿಯರ ಪದ್ಧತಿಗೆ ಪೂರಕವಾಗಿ ವ್ಯಕ್ತಿಗತ ಅಧ್ಯಯನಗಳು ಮತ್ತು ಒಂದು ಹಳ್ಳಿಯ ಸಮಕಾಲೀನ ಸ್ಥಿತಿಯ ಅಧ್ಯಯನ**

ಪ್ರಸ್ತುತದ ಅಧ್ಯಯನದಲ್ಲಿ ಪ್ರಮುಖವಾಗಿ ದೇವದಾಸಿಯರ ಸ್ಥಿತಿಗತಿಯನ್ನು ಸಮಗ್ರವಾಗಿ ಅರ್ಥ ಮಾಡಿಕೊಳ್ಳುವ ಉದ್ದೇಶವೇ ಆದ್ಯತೆಯಾಗಿರುವುದರಿಂದ ದೇವದಾಸಿಯರ ವ್ಯಕ್ತಿಗತ/ ಪ್ರಕರಣ ಅಧ್ಯಯನಗಳನ್ನು ಚರ್ಚೆಗೆ ಒಳಪಡಿಸುವುದು ಮುಖ್ಯ. ಆದ್ದರಿಂದ ಈ ಅಧ್ಯಯನದಲ್ಲಿ ದೇವದಾಸಿಯರ ಕೆಲವು ಪ್ರಕರಣಗಳನ್ನು ದಾಖಲಿಸಲಾಗಿದೆ. ಅದರಲ್ಲಿ ಒಂದೊಂದು ಪ್ರಕರಣವು ಒಂದೊಂದು ಸಮುದಾಯದ ಹಿನ್ನೆಲೆಯವರನ್ನು ಆಯ್ಕೆ ಮಾಡಲಾಗಿದೆ.

**೧. ಹುಲಿಗೆಮ್ಮ ಛಲವಾದಿ, ೩೦, ಜಂತಗಲ್, ಗಂಗಾವತಿ ತಾಲ್ಲೂಕು, ಕೊಪ್ಪಳ-ಜಿಲ್ಲೆ**

ಹುಲಿಗೆಮ್ಮ ಛಲವಾದಿಯು ತನ್ನ ಬಾಲ್ಯಜೀವನವನ್ನು ಜಂತಗಲ್‌ನಲ್ಲಿ ಕಳೆದಿದ್ದಾರೆ. ಇವರು ಅಜ್ಜಿ ಮತ್ತು ಅಮ್ಮನ(ತಾಯಿಯ) ಹತ್ತಿರ ಪ್ರೀತಿವಾತ್ಸಲ್ಯದಿಂದ ಬೆಳೆದಿದ್ದಾರೆ. ಹುಲಿಗೆಮ್ಮ ತನ್ನ ಬಾಲ್ಯದಲ್ಲಿ ಶಾಲೆಗೆ ಸೇರಿದರೂ ೬ನೆಯ ತರಗತಿಯವರೆಗೆ ಶಾಲೆಯಲ್ಲಿ ಕಲಿತರು. ಆ ಸಮಯದಲ್ಲಿ ಇವರು ಋತುಮತಿಯಾದಾಗ ಇವರನ್ನು ಶಾಲೆಯಿಂದ ಬಿಡಿಸಿ ಹೊಲ ಮನೆ ಕೆಲಸ ಮಾಡಲು ಹೋಗಬೇಕಾದ ಪರಿಸ್ಥಿತಿ ಬಂದಿತು. ಇದೇ ರೀತಿ ಇವರು ಜೀವನಕ್ಕೆ ಕೂಲಿ ಮಾಡಿ ಬದುಕುವ ದಾರಿ ಕಂಡು ಕೊಂಡರು. ಹಾಗೆಯೇ ಮಧ್ಯದಲ್ಲಿ ಹುಲಿಗೆಮ್ಮನನ್ನು ಕೆಲಸದಿಂದ ಬಿಡಿಸಿದರು. ಆಗ ಊರಿನಲ್ಲಿ ಮತ್ತು ಅಕ್ಕಪಕ್ಕದ ಮನೆಯವರೆಲ್ಲ ಹುಲಿಗೆಮ್ಮ ನಿನ್ನನ್ನು ಚಿಕ್ಕ ವಯಸ್ಸಿನಲ್ಲೆ ದೇವದಾಸಿಯನ್ನಾಗಿ ಮುತ್ತು ಕಟ್ಟಿಸಲಾಗಿದೆ ಎಂದು ಹೇಳಲಾರಂಭಿಸಿದರು. ಅಂದರೆ ೪ನೆಯ ವಯಸ್ಸಿನಲ್ಲಿ ಈಕೆಗೆ ಅರಿವಿಲ್ಲದ ಸಮಯದಲ್ಲಿ ಮಾಡಿದ ಸಂಗತಿ ತಿಳಿದು ದುಃಖಪಡುತ್ತಾರೆ. ಕಾರಣವೆಂದರೆ ಈಕೆಯ ಅಜ್ಜಿ ಮತ್ತು ತಾಯಿ ಇಬ್ಬರು ಸಹ ದೇವದಾಸಿಯರು. ಈಕೆಯ ತಾಯಿಗೆ ಗಂಡುಮಕ್ಕಳು ಆಗಿಲ್ಲದ ಕಾರಣ ಇದ್ದ ಒಬ್ಬ ಮಗಳನ್ನು ದೇವದಾಸಿಯನ್ನಾಗಿ ಮಾಡಿದರು. ತಾಯಿ ಮತ್ತು ಅಜ್ಜಿಯನ್ನು ಸಾಕುವವರು ಯಾರೂ ಇಲ್ಲದ್ದರಿಂದ ದೇವದಾಸಿಯನ್ನಾಗಿ ಮಾಡಲಾಗಿದೆ ಎಂದು ಪ್ರಚಾರ ಮಾಡಿದರು. ಗಂಡುಮಕ್ಕಳು ಹೇಗೆ ದುಡಿದು ತನ್ನ ತಾಯಿಯನ್ನು ಸಾಕುತ್ತಾರೋ

ಹಾಗೆ ಹುಲಿಗೆಮ್ಮ ಗಂಡುಮಗುವಿನ ಸ್ಥಾನವನ್ನು ತುಂಬಿದರು. ಇದು ಆಕೆಯ ತಾಯಿಯ ಮತ್ತು ಅಜ್ಜಿಯ ಒತ್ತಾಸೆ ಆಗಿತ್ತು. ಮತ್ತೆ ಇಡೀ ಸಮುದಾಯವು ಯಾವುದೇ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಾಗಿಲ್ಲ. ಆದ್ದರಿಂದ ಹುಲಿಗೆಮ್ಮನೂ ಕೂಡಾ ಬಡತನದ ಬೇಗೆಯಲ್ಲಿ ತನ್ನ ಜೀವನ ಸಾಗಿಸುತ್ತಿದ್ದಾರೆ. ಈಕೆಯ ಜೊತೆಯಲ್ಲಿರುವ ವ್ಯಕ್ತಿ ನಾಯಕ ಸಮುದಾಯಕ್ಕೆ ಸೇರಿದವನು. ಆತ ಹುಲಿಗೆಮ್ಮನ ಮನೆಯ ಕೆಲವು ಖರ್ಚುಗಳನ್ನು ನೋಡಿಕೊಳ್ಳುತ್ತಾನೆ. ತನ್ನ ತಾಯಿಯ ಮನೆಯಲ್ಲಿ ಇದ್ದಾರೆ. ಅದು ಸರ್ಕಾರದಿಂದ ಕೊಟ್ಟಿದ್ದು, ಅವರ ಪಿತ್ರಾರ್ಜಿತ ಆಸ್ತಿ ಯಾವುದೂ ಇರುವುದಿಲ್ಲ. ಈಕೆಗೆ ಮೂರು ಜನ ಗಂಡು ಮಕ್ಕಳು. ಇಬ್ಬರು ಅಂಗನವಾಡಿಗೆ ಹೋಗುತ್ತಾರೆ. ಇನ್ನೊಂದು ಚಿಕ್ಕದು ಎಲ್ಲಾ ಮಕ್ಕಳ ಲಾಲನೆ ಪಾಲನೆ ಈಕೆಯ ಮೇಲಿದೆ. ತಾಯಿಗೆ ವಯಸ್ಸಾಗಿರುವುದರಿಂದ ದುಡಿಯುವ ವ್ಯಕ್ತಿ ಈಕೆ ಮಾತ್ರ. ಅಂದಿನ ದುಡಿಮೆ ಅಂದೇ ಖರ್ಚಾಗುತ್ತದೆ. ಯಾವುದೇ ಉಳಿತಾಯವಿರುವುದಿಲ್ಲ. ಪ್ರಸ್ತುತ ಆರೋಗ್ಯವಾಗಿದ್ದಾರೆ ಮತ್ತು ದೇವದಾಸಿಯ ಪುನರ್ವಸತಿಯಿಂದ ಯಾವುದೇ ಸೌಲಭ್ಯ ಬಂದಿರುವುದಿಲ್ಲ. ಕಾರಣ ಈಕೆಗೆ ೪೫ ವರ್ಷವಾಗಿಲ್ಲ. ಈಕೆಗೆ ಈ ಪದ್ಧತಿಯ ಬಗ್ಗೆ ತುಂಬ ಕೋಪವಿದೆ. ಈ ವ್ಯವಸ್ಥೆಯಲ್ಲಿ ಬರೀ ಕಷ್ಟ ನೋವುಗಳೇ ಸುಖವೇ ಇಲ್ಲ. ನನ್ನ ಮುಂದಿನ ಪೀಳಿಗೆಗೆ ಈ ಅನಿಷ್ಟ ಪದ್ಧತಿ ಬೇಡ ಎನ್ನುತ್ತಾರೆ. ಏಕೆಂದರೆ ಇಡೀ ಜೀವನದಲ್ಲಿ ಬರೀ ಕಷ್ಟ ಮತ್ತು ಅವಮಾನಗಳನ್ನೇ ಅನುಭವಿಸಿದ್ದೇನೆ. ಈಕೆಯ ಮಕ್ಕಳಿಗೂ ಅವಮಾನವಾಗುತ್ತದೆ. ಏಕೆಂದರೆ ಮಕ್ಕಳ ತಂದೆಯ ಹೆಸರು ಅಥವಾ ಯಾರು ಎಂದು ಕೇಳಿದಾಗ ಮತ್ತು ಶಾಲೆಗಳಲ್ಲಿ ಅವಮಾನವಾಗುತ್ತದೆ ಎಂದು ನೋವಿನಿಂದ ಹಂಚಿಕೊಂಡಿದ್ದಾರೆ. ಆದ್ದರಿಂದ ಈ ಪದ್ಧತಿ ಇಲ್ಲಿಗೆ ಕೊನೆಯಾಗಬೇಕು ಎನ್ನುವುದು ಅವರ ಅಂತಿಮ ವಾದ ಮತ್ತು ತಿರ್ಮಾನ.

**೨. ಗಂಗಮ್ಮ, ೪೮, ತಿಗರಿ, ಕೊಪ್ಪಳ ತಾಲ್ಲೂಕು ಮತ್ತು ಜಿಲ್ಲೆ**

ಗಂಗಮ್ಮ ಜಾತಿಯಲ್ಲಿ ನಾಯಕ ಸಮುದಾಯಕ್ಕೆ ಸೇರಿದವರು. ತನ್ನ ಬಾಲ್ಯಜೀವನವನ್ನು ತಿಗರಿಯಲ್ಲೇ ಕಳೆದಿದ್ದಾರೆ. ಇವರು ತಂದೆ ಮತ್ತು ತಾಯಿ ಕಡು ಬಡತನದಿಂದ ಇದ್ದು ಇವರಿಗೆ ಇಬ್ಬರು ಹೆಣ್ಣು ಮಕ್ಕಳು ಮಾತ್ರ ಇದ್ದಾರೆ, ಹೆಣ್ಣುಮಕ್ಕಳು ಎನ್ನುವ ಕಾರಣಕ್ಕೆ ಶಾಲೆಗೆ ಕಳಿಸಲಿಲ್ಲ. ಗಂಡುಮಕ್ಕಳಿಲ್ಲದ ಕಾರಣ ಮತ್ತು ಈಕೆಯು ದೊಡ್ಡ ಮಗಳಾಗಿದ್ದರಿಂದ ಸುಮಾರು ೧೦-೧೧ ವರ್ಷದಲ್ಲಿ ದೇವದಾಸಿಯನ್ನಾಗಿ ಮಾಡಿದರು. ಆಗ ಈಕೆಗೆ ಇನ್ನೂ ಆಡುವ ವಯಸ್ಸು. ನಂತರ ತನ್ನ ತಂಗಿಯ ಜೊತೆ ಹೊಲಮನೆ ಕೆಲಸ ಮಾಡಿಕೊಂಡು ತನ್ನ ತಂದೆತಾಯಿಗೆ ಸಹಾಯವಾಗಿದ್ದರು. ನಂತರ ಋತುಮತಿಯಾದಾಗ ಇವರನ್ನು ಮಧ್ಯದಲ್ಲಿ ಕೆಲಸದಿಂದ ಬಿಡಿಸಿದರು. ಆಗ ಊರಿನಲ್ಲಿದ್ದ ರೆಡ್ಡಿ ಜನಾಂಗದ ವ್ಯಕ್ತಿಯೊಂದಿಗೆ ತನ್ನ ಲೈಂಗಿಕ ಜೀವನ ಪ್ರಾರಂಭವಾಯಿತು. ಈಕೆಯ ಮೊದಲ ಹೆಣ್ಣು ಮಾಡುವ ಕೆಲಸ(ಕೂಡಿಕೆ) ಅಂತಲೂ ಕರೆಯುತ್ತಾರೆ. ಅಂದರೆ ಕನ್ಯೆಯಾಗಿರುವಂತ ಹುಡುಗಿಯರನ್ನು ಲೈಂಗಿಕ ಕ್ರಿಯೆಗೆ ಅಣಿ ಮಾಡುವುದು ಎಂದರ್ಥ. ಅದಕ್ಕೆ ಆ ವ್ಯಕ್ತಿ ಹೊಸ ಬಟ್ಟೆ, ದವಸ ದಾನ್ಯ, ಹಣ ಇತ್ಯಾದಿ ಪೂಜಾವಸ್ತುಗಳನ್ನು ಕೊಟ್ಟು ಈ ಶಾಸ್ತ್ರ ಮಾಡಿಕೊಂಡರು.

ಆ ವ್ಯಕ್ತಿ ಒಂದು ವರ್ಷ ಈಕೆಯ ಜೊತೆಯಲ್ಲಿದ್ದನು. ನಂತರ ಗಂಗಮ್ಮ ತನ್ನ ಸ್ವಜಾತಿಯ ಇನ್ನೊಬ್ಬ ವ್ಯಕ್ತಿಯ ಜೊತೆ ಸುಮಾರು ೨೦ ವರ್ಷ ಜೊತೆಯಲ್ಲಿದ್ದಳು, ಈಕೆಗೆ ಒಂದು ಗಂಡು ಮತ್ತು ಒಂದು ಹೆಣ್ಣುಮಕ್ಕಳಿದ್ದಾರೆ. ನಂತರ ಯಾರ ಜೊತೆಯಲ್ಲೂ ಸಹ ಇಲ್ಲದೇ ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಪಿತ್ರಾರ್ಜಿತ ಆಸ್ತಿ ಯಾವುದೂಲ್ಲ. ದುಡಿಯುವ ವ್ಯಕ್ತಿ ಈಕೆ ಮಾತ್ರ. ಅಂದಿನ ದುಡಿಮೆ ಅಂದೇ ಖರ್ಚಾಗುತ್ತದೆ. ಇಲ್ಲಿಯೂ ಯಾವುದೇ ಉಳಿತಾಯವಿರುವುದಿಲ್ಲ. ಪ್ರಸ್ತುತ ಆರೋಗ್ಯವಾಗಿದ್ದಾರೆ ಮತ್ತು ದೇವದಾಸಿಯ ಪುನರ್ವಸತಿಯಿಂದ ಮಾಸಾಶನ ಬರುತ್ತಿದೆ. ಈ ಪದ್ಧತಿಯ ಬಗ್ಗೆ ತುಂಬ ಕೋಪವಿದೆ ಈ ವ್ಯವಸ್ಥೆಯಲ್ಲಿ ಬರೀ ಕಷ್ಟ ನೋವುಗಳೆ ಸುಖವೇ ಇಲ್ಲ. ನನ್ನ ಮುಂದಿನ ಪೀಳಿಗೆಗೆ ಈ ಅನಿಷ್ಟ ಪದ್ಧತಿ ಬೇಡ ಎನ್ನುತ್ತಾರೆ. ಏಕೆಂದರೆ ಇಡೀ ಜೀವನದಲ್ಲಿ ಬರೀ ಕಷ್ಟ ಮತ್ತು ಅವಮಾನಗಳನ್ನೇ ಅನುಭವಿಸಿದ್ದೇನೆ. ಈಕೆಯ ಮಕ್ಕಳಿಗೂ ಅವಮಾನವಾಗುತ್ತದೆ. ಏಕೆಂದರೆ ಮಕ್ಕಳ ತಂದೆಯ ಹೆಸರು ಅಥವಾ ಯಾರು ಎಂದು ಕೇಳಿದಾಗ ಮತ್ತು ಶಾಲೆಗಳಲ್ಲಿ ಅವಮಾನವಾಗುತ್ತದೆ ಎಂದು ನೋವಿನಿಂದ ಹಂಚಿಕೊಂಡಿದ್ದಾರೆ, ಆದ್ದರಿಂದ ಈ ಪದ್ಧತಿ ಇಲ್ಲಿಗೆ ಕೊನೆಯಾಗಬೇಕು ಎನ್ನುವುದು ಅವರ ಅಂತಿಮ ವಾದ ಮತ್ತು ತಿರ್ಮಾನ. ಎಲ್ಲರೂ ಒಗ್ಗಟ್ಟಿನಿಂದ ಕೊನೆಗಾಣಿಸಬೇಕು, ಇದಕ್ಕಾಗಿ ಧ್ವನಿ ಎತ್ತಬೇಕು, ದೇವದಾಸಿಯರು ನೆಮ್ಮದಿಯ ಜೀವನ ಸಾಗಿಸುತ್ತಿಲ್ಲ ಎನ್ನುವುದು ಇವರ ಅಭಿಪ್ರಾಯ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಬಲರಾಗಲು ಸರ್ಕಾರ ೫ ಎಕರೆ ಭೂಮಿ ಮತ್ತು ಮಕ್ಕಳಿಗೆ ಉಚಿತ ವಸತಿಯೊಂದಿಗೆ ಉನ್ನತ ಮಟ್ಟದವರೆಗೂ ಶಿಕ್ಷಣ ಕೊಡಬೇಕು ಎಂದು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ.

**೩. ಮೀನಾಕ್ಷಿ ಮಠದ, ೩೦, ಹಿರೆಸಿಂಧೋಗಿ, ಕೊಪ್ಪಳ ತಾಲ್ಲೂಕು ಮತ್ತು ಜಿಲ್ಲೆ**

ಮೀನಾಕ್ಷಿ ಮಠದ ತನ್ನ ಜೀವನವನ್ನು ಹಿರೆಸಿಂಧೋಗಿಯಲ್ಲೆ ಕಳೆಯುತ್ತಿದ್ದಾರೆ. ತಂದೆ ಊರಿನ ಮಠದ ಕಾಯಕ ಅಂದರೆ ಭಿಕ್ಷಾಟನೆ ಮಾಡುವುದು ಮತ್ತು ಮಠದ ದೇವಸ್ಥಾನದಲ್ಲಿ ಪೂಜೆ ಮಾಡುವುದು ಮತ್ತು ಭಿಕ್ಷೆಯಿಂದಲೇ ನಮ್ಮನ್ನು ದೊಡ್ಡವರನ್ನಾಗಿ ಮಾಡಿದರು. ಮೀನಾಕ್ಷಿಗೆ ಇಬ್ಬರು ಅಕ್ಕತಂಗಿಯರು, ನಾಲ್ವರು ಅಣ್ಣತಮ್ಮಂದಿರಿದ್ದಾರೆ, ಅಣ್ಣತಮ್ಮಂದಿರು ಅಲ್ಪಸ್ವಲ್ಪ ಓದಿದ್ದಾರೆ ತನ್ನ ತಂದೆ ಎಲ್ಲ ಗಂಡು ಮಕ್ಕಳಿಗೆ ಮದುವೆ ಮಾಡಿದರು. ನಂತರ ಅವರೆಲ್ಲಾ ತಮ್ಮ ತಮ್ಮ ಸಂಸಾರಗಳ ಜೊತೆ ಬೇರೆ ಬದುಕುತ್ತಿದ್ದಾರೆ ತಂದೆ-ತಾಯಿ ತೀರಿಕೊಂಡ ನಂತರ ಈಕೆ ತನ್ನ ಅಕ್ಕನ ಜೊತೆ ಇದ್ದಾಳೆ. ಶಿಕ್ಷಣವನ್ನು ದ್ವಿತೀಯ ಪಿ.ಯು.ಸಿ.ಯವರೆಗೆ ಮಾಡಿದ್ದಾರೆ ಮತ್ತು ಅಂಗವಿಕಲತೆಯಿದೆ. ನಂತರ ದೇವದಾಸಿ ಪದ್ಧತಿಗೆ ಬಂದರೆ ಈ ಊರಿನಲ್ಲಿ ದೇವದಾಸಿ ಪದ್ಧತಿ ಒಂದು ವಿಚಿತ್ರ ಆಚರಣೆ. ಅಂದರೆ ಯಾವುದೇ ದೇವಸ್ಥಾನಕ್ಕೆ ಹೊಗುವಂತಿಲ್ಲ. ಊರಿನಲ್ಲಿರುವ ಮಠದ ಮರುಳಸಿದ್ಧೇಶ್ವರ ದೇವರನ್ನು ಹೆಣ್ಣುಮಕ್ಕಳ ಮೇಲೆ ಹೊರಿಸಿ ನಂತರ ಆಕೆ ದೇವದಾಸಿ ಮತ್ತು ಊರಿನ ಯಾವುದೇ ಹೆಣ್ಣು ಹುಟ್ಟಿದರೂ ಸಾರ್ವತ್ರಿಕವಾಗಿ ದೇವದಾಸಿಯೆಂದು ಒಪ್ಪಿತವಾಗಿದೆ. ಈ ಪದ್ಧತಿಯನ್ನು ಯಾರು ಸಹ ತಪ್ಪದೇ ಪಾಲಿಸುತ್ತಿದ್ದಾರೆ. ಈಕೆಯನ್ನು ೧೦ ವರ್ಷದಲ್ಲಿ ದೇವದಾಸಿಯನ್ನಾಗಿ

ಮಾಡಲಾಯಿತು. ನಂತರ ಈ ಊರಿನಲ್ಲಿ ಯಾರೇ ಹೆಣ್ಣುಮಕ್ಕಳು ಹುಟ್ಟಿದರೂ ಮದುವೆ ಮಾಡುವುದಿಲ್ಲ. ಈ ಪದ್ಧತಿಯ ಮೂಲವನ್ನು ಕೆದಕಿದಾಗ ಇಲ್ಲಿನ ಮರುಳಸಿದ್ಧೇಶ್ವರ ಮಠಕ್ಕೂ ಮತ್ತು ದೇವದಾಸಿ ಪದ್ಧತಿಗೂ ನಿಕಟ ಸಂಬಂಧವಿದೆ. ಈ ಮಠಕ್ಕೆ ಮಾದಿಗ ಸಮುದಾಯದವರು ಪೂಜಾರಿಗಳಾಗಿದ್ದಾರೆ ಮತ್ತು ಇವರುಗಳ ಮನೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಯಾವುದೇ ಕ್ರಿಯಾವಿಧಿ ಮತ್ತು ಅರ್ಪಣೆಯಿಲ್ಲದೆ ದೇವದಾಸಿಯರಾಗುತ್ತಾರೆ. ಇಂದಿಗೂ ಸಹ ಯಾವ ಹೆಣ್ಣು ಈ ಪದ್ಧತಿ ಯಿಂದ ಹೊರಬರಲು ಸಾಧ್ಯವಿಲ್ಲ. ಇವರಿಗೆ ದೇವರ ಮತ್ತು ಊರಿನವರ ಭಯ. ಏಕೆಂದರೆ ಸುಮಾರು ನೂರು ವರ್ಷಗಳಿಗಿಂತಲೂ ಹಿಂದೆ ಬೇರೆ ಊರಿಗೆ ಇಲ್ಲಿನ ಕನ್ಯೆಯನ್ನು ಮದುವೆ ಮಾಡಿಕೊಟ್ಟಿದ್ದ ಸಂದರ್ಭದಲ್ಲಿ ವರ ಮತ್ತು ವಧು ಇಬ್ಬರು ಸಹ ಸಾವನ್ನಪ್ಪಿದರು. ಆ ತಕ್ಷಣವೇ ಊರಿನ ಹಿರಿಯರು ಮರುಳಸಿದ್ಧೇಶ್ವರನ ಸೇವೆಗೆ ಇರುವ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡು ವಂತಿಲ್ಲವೆಂದು ತೀರ್ಮಾನಿಸಿದರು. ಅಂದಿನಿಂದ ಈ ಊರಿನ ಹೆಣ್ಣು ಮಕ್ಕಳೆಲ್ಲಾ ದೇವದಾಸಿ ಯಾಗಿದ್ದಾರೆ. ಆದರೆ ಗಂಡು ಮಕ್ಕಳು ಮಾತ್ರ ಮದುವೆಯಾಗಿ ಸುಖಜೀವನ ನಡೆಸುತ್ತಿದ್ದಾರೆ. ಆದರೆ ಅವರ ಅಕ್ಕ-ತಂಗಿಯರಿಗೆ ಮಾತ್ರ ಆ ಭಾಗ್ಯವಿಲ್ಲ. ಈ ಊರಿನಲ್ಲಿ ಸುಮಾರು ೧೧೫ಕ್ಕಿಂತ ಹೆಚ್ಚು ದೇವದಾಸಿಯರಿದ್ದಾರೆ ಮತ್ತು ೨೦ರಿಂದ ೩೦ ವರ್ಷದೊಳಗಿನ ಯುವತಿಯರು ಹೆಚ್ಚಾಗಿದ್ದಾರೆ. ೧೦ನೆಯ, ಪಿ.ಯು.ಸಿ. ಮತ್ತು ಡಿಗ್ರಿ ಮಾಡಿರುವಂತಹ ಹುಡುಗಿಯರು ಸಹ ದೇವದಾಸಿಯರಾಗಿದ್ದಾರೆ ಮತ್ತು ಇಲ್ಲಿಂದ ಹೆಚ್ಚು ಹುಡುಗಿಯರು ಬೇರೆ ಕಡೆ ಹೋಗಿದ್ದಾರೆ. ಅವರೂ ಸಹ ತಮ್ಮನ್ನು ಪರಿವರ್ತಿಸಿಕೊಳ್ಳಲು ಪ್ರಯತ್ನಿಸಿಲ್ಲ. ಅಲ್ಲಿಯೂ ಸಹ ಇದೇ ಪದ್ಧತಿಯನ್ನು ಮುಂದುವರಿಸಿದ್ದಾರೆ. ಇನ್ನೊಂದು ಉದಾಹರಣೆ ಎಂದರೆ ಈಕೆಯ ಇನ್ನೊಬ್ಬ ಅಕ್ಕ ಬೇರೆ ಹುಡುಗನನ್ನು ಪ್ರೀತಿಸಿ ಮದುವೆಯಾದಾಗ ಊರಿನ ಮತ್ತು ನಮ್ಮ ತಂದೆ ತಾಯಿ ಊರಿನಿಂದ ಬಹಿಷ್ಕಾರ ಹಾಕಿದರು. ಆದ್ದರಿಂದ ಯಾರೂ ಮದುವೆ ಆಗುತ್ತಿಲ್ಲ. ಮಠದ ಜನರು ತುಂಬಾ ಕಟ್ಟುನಿಟ್ಟಿನ ಎಚ್ಚರಿಕೆ ನೀಡಿದ್ದಾರೆ. ಅಂದಿನಿಂದ ಈ ಪದ್ಧತಿ ಸಾಗುತ್ತಲೇ ಇದೆ. ಪ್ರಸ್ತುತ ಈಕೆಯ ಪಕ್ಕದ ಊರಿನ ಒಬ್ಬ ಮುಸ್ಲಿಂ ವ್ಯಕ್ತಿಯ ಜೊತೆ ಇದ್ದಾರೆ. ಅವನಿಗೆ ಈಗಾಗಲೇ ಮದುವೆಯಾಗಿದೆ ಆದರೆ ಆತನು ವಾರಕ್ಕೊಮ್ಮೆ ಅಥವಾ ಎರಡು ಸಲ ಬಂದು ಹೋಗುತ್ತಾನೆ. ಈಕೆಯ ಸಂಸಾರದ ಎಲ್ಲ ಖರ್ಚನ್ನು ನಿಭಾಯಿಸುತ್ತಾನೆ. ಅವನ ಜೊತೆ ಇದ್ದಾಗಿನಿಂದ ಒಂದು ಗಂಡುಮಗುವಿದೆ. ಚಿಕ್ಕ ವಯಸ್ಸಾಗಿರುವುದರಿಂದ ಸರ್ಕಾರದ ಯಾವುದೇ ಸೌಲಭ್ಯ ಸಿಕ್ಕಿಲ್ಲ. ಈ ಪದ್ಧತಿಯನ್ನು ನಿರ್ಮೂಲನೆ ಮಾಡಲು ಸುಮಾರು ವರ್ಷದಿಂದ ಹಲವಾರು ಸಂಘ ಸಂಸ್ಥೆಗಳು ಪೊಲೀಸ್ ಇಲಾಖೆ, ಜಿಲ್ಲಾಧಿಕಾರಿಗಳು, ಬಂದು ದೇವದಾಸಿ ಬಿಡಬಾರದೆಂದು ಹೇಳಿದರೂ ಈ ಪದ್ಧತಿ ನಿಂತಿಲ್ಲ. ಈಕೆಯ ಅಭಿಪ್ರಾಯದಂತೆ ತುಂಬಾ ಅಮಾನವೀಯ, ಅನಾಗರಿಕ ಆಚರಣೆಯಲ್ಲಿ ಇದೊಂದು ಪದ್ಧತಿಯಾಗಿದೆ. ಸಾಮಾಜಿಕ, ಆರ್ಥಿಕ, ಮಾನಸಿಕ ಮತ್ತು ದೈಹಿಕವಾಗಿ ನರಳುತ್ತಿದ್ದೇವೆ ಎಂದು ನೋವಿನಿಂದ ಈ ವಿಷಯಗಳನ್ನು ಹಂಚಿ ಕೊಂಡಿದ್ದಾರೆ.

**೪. ಹಿರೆಸಿಂಧೋಗಿ ಹಳ್ಳಿಯ ದೇವದಾಸಿ ಪದ್ಧತಿಯ ಮಾಹಿತಿ**

ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕಿನ ಹಾಗೂ ಕೊಪ್ಪಳ ನಗರದಿಂದ ಕೇವಲ ೧೦ ಕೀ.ಮೀ. ದೂರದಲ್ಲಿರುವ ಹಿರೆಸಿಂಧೋಗಿ ಎಂಬ ಗ್ರಾಮವಿದ್ದು ಇಲ್ಲಿ ದೇವದಾಸಿ ಪದ್ಧತಿ ಇನ್ನು ಜೀವಂತ ವಾಗಿರುವುದು ಇಡೀ ಕರ್ನಾಟಕ ಮತ್ತು ಅಕ್ಕಪಕ್ಕದ ರಾಜ್ಯಗಳಿಗೂ ಗೊತ್ತಿರುವ ವಿಚಾರ. ಈ ಪದ್ಧತಿಯ ಮೂಲವನ್ನು ಕೆದಕಿದಾಗ ಇಲ್ಲಿನ ಮರುಳಸಿದ್ಧೇಶ್ವರ ಮಠಕ್ಕೂ ಮತ್ತು ದೇವದಾಸಿ ಪದ್ಧತಿಗೂ ನಿಕಟ ಸಂಬಂಧವಿದೆ. ಈ ಮಠಕ್ಕೆ ಮಾದಿಗ ಸಮುದಾಯದವರು ಪೂಜಾರಿಗಳಾಗಿದ್ದಾರೆ. ಇವರುಗಳ ಮನೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಯಾವುದೇ ಕ್ರಿಯಾವಿಧಿ ಮತ್ತು ಅರ್ಪಣೆಯಿಲ್ಲದೆ ದೇವದಾಸಿಯರಾಗುತ್ತಾರೆ. ಇಂದಿಗೂ ಸಹ ಯಾವ ಹೆಣ್ಣು ಈ ಪದ್ಧತಿಯಿಂದ ಹೊರಬರಲು ಸಾಧ್ಯವಿಲ್ಲ. ಇವರಿಗೆ ದೇವರ ಮತ್ತು ಊರಿನವರ ಭಯವಿದೆ. ಏಕೆಂದರೆ ಸುಮಾರು ನೂರು ವರ್ಷಗಳಿಗಿಂತಲೂ ಹಿಂದೆ ಬೇರೆ ಊರಿಗೆ ಇಲ್ಲಿನ ಕನ್ಯೆಯನ್ನು ಮದುವೆ ಮಾಡಿಕೊಟ್ಟಿದ್ದ ಸಂದರ್ಭದಲ್ಲಿ ವರ ಮತ್ತು ವಧು ಇಬ್ಬರು ಸಹ ಸಾವನಪ್ಪಿದರು. ಆ ತಕ್ಷಣವೇ ಊರಿನ ಹಿರಿಯರು ಮರುಳಸಿದ್ಧೇಶ್ವರನ ಸೇವೆಗೆ ಇರುವ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡುವಂತಿಲ್ಲವೆಂದು ತೀರ್ಮಾನಿಸಿದರು. ಅಂದಿನಿಂದ ಈ ಊರಿನ ಹೆಣ್ಣುಮಕ್ಕಳೆಲ್ಲ ದೇವದಾಸಿಯಾಗಿದ್ದಾರೆ. ಆದರೆ ಗಂಡುಮಕ್ಕಳು ಮಾತ್ರ ಮದುವೆಯಾಗಿ ಸುಖ ಜೀವನ ನಡೆಸುತ್ತಿದ್ದಾರೆ. ಆದರೆ ಅವರ ಅಕ್ಕ-ತಂಗಿಯರಿಗೆ ಮಾತ್ರ ಆ ಭಾಗ್ಯವಿಲ್ಲ. ಇಲ್ಲ ಸುಮಾರು ೧೧೫ಕ್ಕಿಂತ ಹೆಚ್ಚು ದೇವದಾಸಿಯರಿದ್ದಾರೆ ಮತ್ತು ೨೦ರಿಂದ ೩೦ ವರ್ಷದೊಳಗಿನ ಯುವತಿಯರು ಹೆಚ್ಚಾಗಿದ್ದಾರೆ. ೧೦ನೆಯ, ಪಿ.ಯು.ಸಿ. ಮತ್ತು ಡಿಗ್ರಿ ಮಾಡಿರುವಂತಹ ಹುಡುಗಿಯರು ಸಹ ದೇವದಾಸಿಯರಾಗಿದ್ದಾರೆ. ಇಲ್ಲಿಂದ ಹೆಚ್ಚು ಹುಡುಗಿಯರು ಬೇರೆ ಕಡೆ ಹೋಗಿದ್ದಾರೆ. ಅವರು ಸಹ ತಮ್ಮನ್ನು ಪರಿವರ್ತಿಸಿಕೊಳ್ಳಲು ಪ್ರಯತ್ನಿಸಿಲ್ಲ. ಅಲ್ಲಿಯೂ ಸಹ ಇದೇ ಪದ್ಧತಿಯನ್ನು ಮುಂದುವರಿಸಿದ್ದಾರೆ. ಕೊಪ್ಪಳ ಜಿಲ್ಲೆಯ ಹಿರಿಯ ಅಧಿಕಾರಿಗಳಾದ ಪೊಲೀಸ್ ವರಿಷ್ಠಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು ನಿರಂತರ ಭೇಟಿ ನೀಡಿದರೂ ಸಹ ಯಾವುದೇ ಬದಲಾವಣೆಯಾಗಿಲ್ಲ. ದಲಿತ, ಮಹಿಳಾ ಮತ್ತು ಸ್ವಯಂ ಸೇವಾ ಸಂಸ್ಥೆಗಳೂ ಸಹ ತಮ್ಮ ಪ್ರಯತ್ನವನ್ನು ಮಾಡಿವೆ. ಅಲ್ಲದೇ ಒಮ್ಮೆ ಕರ್ನಾಟಕದ ಮುಖ್ಯಮಂತ್ರಿಯವರು ಸಹ ಭೇಟಿ ಮಾಡಿದ್ದರು. ೪೦೦ ರೂ. ಮಾಸಾಶನವನ್ನು ಹೆಚ್ಚಿಗೆ ಮಾಡಿದ್ದರು. ಪರಿವರ್ತನೆಯಾಗಲು ಬುದ್ಧಿಮಾತು ಹೇಳಿದ್ದರು. ಅದರೂ ಸಹ ನಿಂತಿಲ್ಲ ನಂತರ ಮುಖ್ಯವಾಹಿನಿಯಲ್ಲಿರುವ ಮಾಧ್ಯಮಗಳು ಸಹ ಈ ಪದ್ಧತಿಯ ಕುರಿತಂತೆ ಬರೆದರು. ಆದರೂ ಸಹ ಏನೂ ಬದಲಾವಣೆಯಾಗಲಿಲ್ಲ. ತದನಂತರ ಕರ್ನಾಟಕದ ಎಲ್ಲಾ ಕಡೆಯಿಂದ ಪ್ರಗತಿಪರರಾದ ಸ್ವಾಮೀಜಿಯವರೆಲ್ಲರೂ ಸಹ ಒಂದು ದಿನ ಕಾಲ್ನಡಿಗೆ ಮಾಡಿ ಮನೆ ಮನೆ ಭೇಟಿ ಮಾಡಿ ಈ ಪದ್ಧತಿಯನ್ನು ಬಿಡಬೇಕೆಂದು ಬುದ್ಧಿ ಹೇಳಿದರೂ ಕೂಡ ಯಾವುದೇ ಬದಲಾವಣೆಯಾಗಲಿಲ್ಲ. ಆದರೆ ಈ ತರದ ಪರಿವರ್ತನೆಯ ಪ್ರಯತ್ನಗಳು ಮಾತ್ರ ನಿಂತಿಲ್ಲ. ಹೀಗೆ ಕೊಪ್ಪಳ ಜಿಲ್ಲೆಯಲ್ಲಿ ಕಣ್ಣುಮುಂದೆ ಈ ಪದ್ಧತಿಯು ನಡೆಯುತ್ತಿದೆ.[೩೩] **(ವರದಿಯ ನಿರೂಪಣೆ: ಮೈಲಪ್ಪ ಬಿಸರಹಳ್ಳಿ ಮತ್ತು ಸೌಭಾಗ್ಯ ದೇವದಾಸಿ ವಿಮೋಚನಾ ವೇದಿಕೆಯ ಕಾರ್ಯಕರ್ತರು, ಕೊಪ್ಪಳ)**

೫. ಕೊಪ್ಪಳ ಜಿಲ್ಲೆ, ಕುಕನೂರು ತಾಲೂಕಿನ (ಹೊಸ ತಾಲೂಕು) ವೀರಾಪೂರ ಗ್ರಾಮದ ಕುಮಾರಿ ರೇಣುಕಾ ತಂದೆ ಹನುಮಪ್ಪ ಹುಲೇಗುಡ್ಡ ಇವರನ್ನು ದೇವದಾಸಿಯನ್ನಾಗಿ ಮಾಡಿದ ಪ್ರಕರಣ(ದೇ.ಪು.ಯೋ/೭೩/ಪ್ರಕರಣ/೨೦೧೮-೧೯ ದಿ;೪/೪/೨೦೧೮) ದೇವದಾಸಿ ಪುನರ್ವಸತಿ ಯೋಜನೆಯ ಅನುಷ್ಠಾನಾಧಿಕಾರಿ ರೇಣುಕಾ ಮಠದರವರು ಕಾನೂನಿನ ಕ್ರಮಕ್ಕೆ ಪೋಲಿಸ್ ಠಾಣೆಯಲ್ಲಿ ಪ್ರಕರಣ ದಾಖಲಿಸಿದ್ದಾರೆ. ಪ್ರಕರಣದ ಅರ್ಜಿಯ ಸಾರಾಂಶದ ಮೇರೆಗೆ ೯೪/೨೦೧೮ ಕಲಂ ೫ ಕೆ.ಡಿ.ಪಿ. ಕಾಯ್ದೆ(ಕರ್ನಾಟಕ ದೇವದಾಸಿ ನಿಷೇಧ ಕಾಯ್ದೆ ೧೯೮೨) ಪ್ರಕರಣ ದಾಖಲಿಸಿ ತನಿಖೆ ಕೈಗೊಳ್ಳಲಾಗಿದೆ. ಕೃತ್ಯ ನಡೆದ ದಿನಾಂಕ ೩೧/೧/೨೦೧೮ ಸಮಯ; ಮಧ್ಯಾಹ್ನ ೧.೦೦ ರಿಂದ ೨.೦೦ ಗಂಟೆಯವರೆಗೆ ಸವದತ್ತಿ ಯಲ್ಲಮ್ಮ ಗುಡ್ಡದಲ್ಲಿ ನಡೆದಿದೆ. ಎಫ್.ಐ.ಆರ್. ನಂ; ೦೯೪/೨೦೧೮, ಜನರಲ್ ಡೈರಿಯಲ್ಲಿ ಉಲ್ಲೇಖ ಸಂಖ್ಯೆ; ೧೬, ೧೮; ೩೦.೦೦. ನಂತರ ನ್ಯಾಯಾಲಯಕ್ಕೆ ಪ್ರಕರಣವನ್ನು ಕಳುಹಿಸಿದ ದಿನಾಂಕ ೦೪/೦೪/೨೦೧೮. ಅಂದಿನ ಪತ್ರಿಕೆಗಳಲ್ಲಿ ಯುವತಿಗೆ 'ದೇವದಾಸಿ ಪಟ್ಟ', 'ಮಗಳನ್ನೇ ದೇವದಾಸಿಯನ್ನಾಗಿ ಮಾಡಿದ ಹೆತ್ತವರು' ಹೀಗೆ ಅನೇಕ ಪತ್ರಿಕೆಗಳಲ್ಲಿ ವರದಿ ಬಂತು ಮತ್ತು ತಾಲೂಕು ಮತ್ತು ಜಿಲ್ಲಾ ಅನುಷ್ಠಾನಾಧಿಕಾರಿಗಳು ಸಹ ಪತ್ರಿಕಾ ಹೇಳಿಕೆ ಕೊಟ್ಟಿದ್ದಾರೆ ಮತ್ತು ಪ್ರಕರಣವನ್ನು ಕೋರ್ಟ್ ಮೆಟ್ಟಿಲಿನವರೆಗೂ ತೆಗೆದುಕೊಂಡು ಹೊಗಿದ್ದಾರೆ. ಅರೋಪಿಗಳನ್ನು ಆರೆಸ್ಟ್ ಮಾಡಿದ್ದಾರೆ ಮತ್ತು ನ್ಯಾಯಾಲಯದ ಪ್ರಕ್ರಿಯೆ ಮುಂದುವರಿದಿದೆ. ಅಧ್ಯಯನದ ಸಮಯದಲ್ಲಿ ಇದು ಮೊದಲ ಕಾನೂನಿನ ಪ್ರಕ್ರಿಯೆಯಲ್ಲಿ ಒಳಪಟ್ಟಿದೆ. ಆರೆಸ್ಟ್ ಆಗಿ ನ್ಯಾಯಾಲಯದ ಪ್ರಕ್ರಿಯೆಯಲ್ಲಿದೆ. ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಸಂಗ್ರಹಿಸಲಾಗಿದೆ. ಮತ್ತು ಈ ವಿಷಯ ಸೂಕ್ಷ್ಮವಾಗಿರುವುದರಿಂದ ಬಾಧಿತರ ಫೋಟೋ ಮತ್ತು ಅವರ ವೈಯಕ್ತಿಕ ಮಾಹಿತಿಯನ್ನು ಹೆಚ್ಚು ಬಳಸಿಲ್ಲ. ಅಂದರೆ ಒಟ್ಟಾರೆ ಇದರ ಹಿನ್ನೆಲೆಯನ್ನು ನೋಡಿದರೆ ಈ ಪದ್ಧತಿಯು ಇನ್ನೂ ಕೊನೆಯಾಗುವಂತಿಲ್ಲ ಎನ್ನುವ ಭಾವನೆ ಮೂಡುತ್ತದೆ.**(ರೇಣುಕಾ ಎಂ ಮಠದ, ಹಿರೆಸಿಂಧೋಗಿ, ಯಲಬುರ್ಗಾ ತಾಲೋಕಿನ ದೇ.ಪು.ಯೋ. ಅನುಷ್ಠಾನಾಧಿಕಾರಿ, ೨೦೧೮)**

**ಕೊನೆಟಿಪ್ಪಣಿಗಳು**

೧. ಪ್ರೊ. ಆರ್. ಸುನಂದಮ್ಮ, ೦೧೭, ಮಹಿಳೆ-ಕಾನೂನು-ಪರಿಹಾರ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೨. ಶ್ರೀನಿವಾಸ ಗೌಡ, ದೇವದಾಸಿ ಪುನರ್ವಸತಿ ಕಾರ್ಯಕ್ರಮ, ಪ್ರದ.ಸ, ಕರಾಮಅನಿ, ಬೆಂಗಳೂರು, ೨೦೧೫

೩. ಚಂದ್ರಶೇಖರ ಎಚ್.ಆರ್, ೨೦೦೫, ಜಾಗತೀಕರಣದ ಹಿನ್ನೆಲೆಯಲ್ಲಿ ದಲಿತರು, ಔಟ್‌ರೀಚ್ ಸ್ಕಾಲರ್ಶಿಪ್‌ನ ಭಾಗವಾಗಿ ಬರೆದ ಪ್ರಬಂಧ, ಸಿ.ಇ.ಡಿ, ಬೆಂಗಳೂರು

೪. ಶಾರದ ಲಹಂಗಿರ್, ೨೦೧೨, ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ಡೆಕ್ಕನ್ ಹೆರಾಲ್ಡ್, ಆಗಸ್ಟ್ ೪ ನೇ ತಾರೀಕು, ಶನಿವಾರ.

೫. Shankar Jogan,1988, Determinants of persistence and continuity of Devadasi cult: A sociological study PhD. theses, Karnataka university, Darawad.

೬. ಕಭೀರ್ ಶರ್ಮ, ೨೦೧೫, ಬಾರ್ನ್ ಟು ಬಿ ಡೂಮ್ಡ್ ದಲಿತ್ ಕ್ರೈ, ದಲಿತ್ ನ್ಯೂಸ್, ಜುಲೈ.

೭. ಎಸ್ ಆನಂದಿ, ಮೇ.೪,೨೦೧೩, ಮಾತಮ್ಮ, ಜೆಂಡರ್, ಕ್ಯಾಸ್ಟ್, ಅಂಡ್ ಪಾಲಿಟಿಕ್ಸ್ ಆಫ್ ಇಂಟರ್‌ಸೆಕ್ಸುವಾನಾಲಿಟಿ ಇನ್ ರೂರಲ್ ತಮಿಳುನಾಡು, ಇ.ಪಿ.ಡಬ್ಲ್ಯು, ವ್ಯಾಲ್ಯುಂ XLVIII No 18.

೮. ಲೇಖಕರು ಮತ್ತು ಪ್ರಕಾಶಕರು,೨೦೦೮, ಹೀಗೊಂದು ಪಯಣ, ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ(ಮಾಸ್) ಬೆಳಗಾವಿ.

೯. ಪ್ರತಿಭಾ ಬಿ ದೇಸಾಯಿ,೨೦೧೨, ಕ್ಯಾಸ್ಟ್ ಅಂಡ್ ಪೇಟ್ರಿಯಾರ್ಕಿ ಅಂಡ್ ಎಕ್ಸ್‌ಪ್ಲೋಯ್ಟೇಷನ್ ಆಫ್ ಷೆಡ್ಯುಲ್ ವುಮೆನ್ಸ್, ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸೋಸಿಯಲ್ ಸೈನ್ಸ್ ಅಂಡ್ ಇಂಟರ್ ಡಿಸಿಪ್ಲಿನರಿ ರೀಸರ್ಚ್, ವ್ಯಾಲುಮ್-೧ ನ-೬,

೧೦. ಶೈಲಜ ಹಿರೇಮಠ, ೨೦೧೧, ಹರದೇಶಿ-ನಾಗೇಶಿ: ಕಲೆ ಮತ್ತು ಕಲಾವಿದರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಹನುಂಮತ ಹಾಲಿಗೇರಿ, ೨೦೧೧, ಕೆಂಗುಲಾಬಿ, ಕಾದಂಬರಿ, ವೇಶ್ಯಾ ಜಗತ್ತಿನ ಅನಾವರಣ, ಚೆ ಪುಸ್ತಕ, ಬೆಂಗಳೂರು.

೧೨. ಗೋಪಾಲ ನಾಯ್ಕ, ದಾದ ಸಾಬ್, ಕೊಪ್ಪಳ ಜಿಲ್ಲಾ ದೇವದಾಸಿ ಪುನರ್ವಸತಿ ಯೋಜನೆ ಕಛೇರಿ

೧೩. Shankar Jogan, 1988, Determinants of persistence and continuity of Devadasi cult: A sociological study Ph.D. theses, Karnataka university, Darawad.

೧೪. Zoya Zaidi, 2005, Devadasis system in Indian temples, Aligarh UP.

೧೫. Maggie Black, 2007, Ritual Slavery, Anti Slavery International.

೧೬. ಜಮನ್ದಾಸ್, ದೇವದಾಸಿ ವರ್ ಡೀಗ್ರೇಡೆಡ್ ಬುದ್ಧಿಸ್ಟ್ ನನ್ಸ್, ಅಂತರ್ಜಾಲ, ಡಾ. ಅಂಬೇಡ್ಕರ್. ಕಾಮ್

೧೭. ಉತ್ತಮ ಕಾಂಬಳೆ, ೨೦೧೩, (ಮರಾಠಿ) ಕನ್ನಡಕ್ಕೆ ಡಾ. ಸಿದ್ರಾಮ ಕಾರಣಿಕ, ದೇವದಾಸಿ ಮತ್ತು ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ.

೧೮. ಎಸ್ ಆನಂದಿ, ಮೇ, ೪, ೨೦೧೩, ಮಾತಮ್ಮ, ಜೆಂಡರ್, ಕ್ಯಾಸ್ಟ್, ಅಂಡ್ ಪಾಲಿಟಿಕ್ಸ್ ಆಫ್ ಇಂಟರ್‌ಸೆಕ್ಸುವಾನಾಲಿಟಿ ಇನ್ ರೂರಲ್ ತಮಿಳುನಾಡು, ಇ.ಪಿ.ಡಬ್ಲ್ಯು, ವ್ಯಾಲ್ಯುಂ XLVIII No 18.

೧೯. ಕಭೀರ್ ಶರ್ಮ,೨೦೧೫, ಬಾರ್ನ್ ಟು ಬಿ ಡೂಮ್ಡ್ ದಲಿತ್ ಕ್ರೈ, ದಲಿತ್ ನ್ಯೂಸ್, ಜುಲೈ.

೨೦. ಪ್ರತಿಭಾ ಬಿ ದೇಸಾಯಿ,೨೦೧೨, ಕ್ಯಾಸ್ಟ್ ಅಂಡ್ ಪೇಟ್ರಿಯಾರ್ಕಿ ಅಂಡ್ ಎಕ್ಸ್‌ಪ್ಲ್ಯೋಟೇಷನ್ ಆಫ್ ಷೆಡ್ಯುಲ್ ವುಮೆನ್ಸ್, ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸೋಸಿಯಲ್ ಸೈನ್ಸ್ ಅಂಡ್ ಇಂಟರ್ ಡಿಸಿಪ್ಲಿನರಿ ರೀಸರ್ಚ್, ವ್ಯಾಲುಮ್-೧ ನ-೬,

೨೧. ಎನ್. ಗಾಯತ್ರಿಯವರ, ೧೯೯೬, ಮಹಿಳೆ ಬಿಡುಗಡೆಯ ಹಾದಿಯಲ್ಲಿ ಅಧ್ಯಯನದಲ್ಲಿ ನಿತ್ಯ ಸುಮಂಗಲಿಯರ ಪಾಡು ಎಂಬ ಅಧ್ಯಾಯದಲ್ಲಿ ದೇವದಾಸಿ ಎಂಬ ಉಪ ಅಧ್ಯಾಯದಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೨. Tarachand K.C ,1987, Women in sacred prostitution: A study of Devadasi custom, Ph.D. these of Anthropology, Karnataka university, Darawad.

೨೩. ಹನುಂಮತ ಹಾಲಿಗೇರಿ, ೨೦೧೧, ಕೆಂಗುಲಾಬಿ, ಕಾದಂಬರಿ, ವೇಶ್ಯಾ ಜಗತ್ತಿನ ಅನಾವರಣ, ಚೆ ಪುಸ್ತಕ, ಬೆಂಗಳೂರು.

೨೪. Maggie Black, 2007, Ritual Slavery, Anti Slavery International.

೨೫. Zoya Zaidi, 2005, Devadasis system in Indian temples, Aligarh UP.

೨೬. ಕಭೀರ್ ಶರ್ಮ, ೨೦೧೫, ಬಾರ್ನ್ ಟು ಬಿ ಡೂಮ್ಡ್ ದಲಿತ್ ಕ್ರೈ, ದಲಿತ್ ನ್ಯೂಸ್, ಜುಲೈ.

೨೭. ಕರ್ನಾಟಕ ರಾಜ್ಯ ದೇವದಾಸಿ ಸಮರ್ಪಣಾ ನಿಷೇಧ ಕಾಯ್ದೆ ೧೯೮೨ ಮತ್ತು ತಿದ್ದುಪಡಿ ಕಾಯ್ದೆ, ೨೦೦೯-೧೦, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

೨೮. ಪ್ರೊ. ಆರ್. ಸುನಂದಮ್ಮ, ೨೦೧೭, ಮಹಿಳೆ-ಕಾನೂನು-ಪರಿಹಾರ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೨೯. ಶ್ರೀನಿವಾಸ ಗೌಡ, ದೇವದಾಸಿ ಪುನರ್ವಸತಿ ಕಾರ್ಯಕ್ರಮ, ಪ್ರ.ದ.ಸ, ಕರಾಮಅನಿ, ಬೆಂಗಳೂರು, ೨೦೧೫

೩೦. ಸುಧಾ ಸೀತಾರಾಮನ್, ೨೦೧೦, ಮಹಿಳಾ ಅಧ್ಯಯನ, ವಿಮೋಚನಾ ಪ್ರಕಾಶನ, ಬೆಂಗಳೂರು.

೩೧. ಮೀನಾಕ್ಷಿ, ೨೦೧೦, ನಿರ್ಣಯ ಪ್ರಕ್ರಿಯೆಯಲ್ಲಿ ಚುನಾಯಿತ ಮಹಿಳೆಯರ ಪಾತ್ರ, ಮಂಟಪ ಮಾಲೆ-೧೭೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಅರ್ಚನಾ ಹಿರೇಮಠ, ೨೦೧೭, ನಗರ ಸಂಸ್ಥೆಗಳಲ್ಲಿ ಮಹಿಳಾ ಪ್ರಾತಿನಿಧ್ಯ, ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ಮೈಲಪ್ಪ ಬಿಸರಹಳ್ಳಿ ಮತ್ತು ಸೌಭಾಗ್ಯ, ದೇವದಾಸಿ ವಿಮೋಚನಾ ವೇದಿಕೆಯ ಕಾರ್ಯಕರ್ತರು, ಕೊಪ್ಪಳ

ಅಧ್ಯಾಯ ೫

# ದೇವದಾಸಿಯರಿಗೆ ಸಂಬಂಧಿಸಿದ ಕಾಯ್ದೆಗಳು: ನಿರ್ಮೂಲನೆ ಮತ್ತು ಅಭಿವೃದ್ಧಿಯ ಯೋಜನೆಗಳ ಪರಿಶೀಲನೆ

೫.೧. ಪೀಠಿಕೆ

೫.೨. ದೇವದಾಸಿ ಪದ್ಧತಿಯ ನಿಯಂತ್ರಣದ ಕಾನೂನು ಮತ್ತು ಪುನರ್ವಸತಿ ಯೋಜನೆಗಳು

೫.೩. ಕರ್ನಾಟಕದಲ್ಲಿ ಜಾರಿಗೆ ತಂದ ಪ್ರಮುಖ ಕಾಯ್ದೆಗಳು

೫.೪. ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಸಂಬಂಧಿಸಿದಂತೆ ಇರುವ ಸಂಘಟನೆಗಳ ಕಾರ್ಯವೈಖರಿ

೫.೫. ಮುಕ್ತಾಯ

ಅಧ್ಯಾಯ ಐದು

# ದೇವದಾಸಿಯರಿಗೆ ಸಂಬಂಧಿಸಿದ ಕಾಯ್ದೆಗಳು: ನಿರ್ಮೂಲನೆ ಮತ್ತು ಅಭಿವೃದ್ಧಿಯ ಯೋಜನೆಗಳ ಪರಿಶೀಲನೆ

**೫.೧. ಪೀಠಿಕೆ**

ಈ ಅಧ್ಯಾಯದ ಪ್ರಮುಖ ಅಂಶಗಳೆಂದರೆ ದೇವದಾಸಿಯರಿಗೆ ಸಂಬಂಧಪಟ್ಟಂತೆ ಅಯಾ ರಾಜ್ಯ ಸರ್ಕಾರಗಳು ತಮ್ಮದೇ ಆದ ನಿಯಂತ್ರಣದ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಚಾಲ್ತಿಯಿರುವ ಪ್ರಮುಖ ಕಾಯ್ದೆಗಳು ಮತ್ತು ಪುನರ್ವಸತಿ ಯೋಜನೆಗಳನ್ನು ಕಾನೂನಿನಡಿಯಲ್ಲಿ ಪಾಲಿಸುತ್ತಾ ಬಂದಿರುವುದನ್ನು ಗಮನಿಸುವುದು. ಅಧ್ಯಯನದ ಇನ್ನೊಂದು ಪ್ರಮುಖ ಉದ್ದೇಶ ವಾಗಿರುವ ಅಭಿವೃದ್ಧಿಗೆ ಪೂರಕವಾಗಿರುವ ದೇವದಾಸಿ ಪುನರ್ವಸತಿಯಂತಹ ಕಲ್ಯಾಣ ಕಾರ್ಯ ಕ್ರಮಗಳನ್ನು ಯಾವ ರೀತಿಯಲ್ಲಿ ಅನುಷ್ಠಾನ ಮಾಡಿದ್ದಾರೆ ಎಂಬುದನ್ನು ಪರಿಶೀಲಿಸಲಾಗಿದೆ.

ಭಾರತ ಕಂಡ ಯಾವುದೇ ಸಾಮಾಜಿಕ, ಧಾರ್ಮಿಕ ಚಳುವಳಿಗಳು, ಚಳುವಳಿಯ ನಾಯಕರು ಹೆಣ್ಣಿಗೆ ಸಂಬಂಧಿಸಿದ ಹಾಗೆ ಇರುವ ಸಮಸ್ಯೆಗಳನ್ನು ಇಡಿಯಾಗಿ ಗ್ರಹಿಸಿದಂತೆ ಕಾಣಿಸುವುದಿಲ್ಲ. ಅಂದಂದಿನ ಕಾಲದ ಒಳಗಡೆ ಹೆಣ್ಣನ್ನು ಇಟ್ಟು ಅವಳ ತತಕ್ಷಣದ ಸಮಸ್ಯೆಗಳ ಬಗ್ಗೆ ಆಲೋಚಿಸಿ ಸುಧಾರಣೆ ತರಬಯಸಿದರೆ ವಿನಾ ಬದಲಾವಣೆಗೆ ಕೊಟ್ಟಿಲ್ಲ. ಕಾಲ ವ್ಯತ್ಯಾಸ ಆಗಿರಬಹುದು, ಕಾನೂನುಗಳು ಕಣ್ತೆರದಿರಬಹುದು, ಸುಧಾರಣೆಗಳು ಸೂಚಿಸಬಹುದು, ಘೋಷಣೆಗಳ ಕೂಗು ಕೇಳುತ್ತಿರಬಹದು, ಆದರೆ ಹೆಣ್ಣು ಇಂದಿಗೂ ಈ ಕ್ಷಣಕ್ಕೂ ಗುಲಾಮಳಾಗಿಯೇ ಬದುಕುತ್ತಿರುವುದು ದುಃಖದ ಸಂಗತಿ, ಪುರುಷ ಪ್ರಧಾನಸಮಾಜದ ಅಮಾನವೀಯ ವರ್ತನೆಯಲ್ಲಿ ಹೆಣ್ಣು ಒಂದು ಮಾರಾಟದ ವಸ್ತುವಾಗಿದ್ದಾಳೆ, ಬೋಗದ ಬೊಂಬೆಯಾಗಿದ್ಧಾಳೆ ಅದಕ್ಕೆ ಉತ್ತಮ ಉದಾಹರಣೆಯೇ ಈ ದೇವದಾಸಿ ಪದ್ಧತಿ. ಇಲ್ಲಿ ದೇವದಾಸಿಯ ಶಾಸನಾತ್ಮಕ ಸ್ಥಿತಿಗತಿ ಮತ್ತು ಸಾಮಾಜಿಕ ಸ್ಥಿತಿಯನ್ನು ಬಿಚ್ಚಿಟ್ಟಿದ್ದಾರೆ.[೧](**ಕಮಲ ಹಂಪನಾ, ೨೦೦೩**) ಹೆಣ್ಣನ್ನು ಕುಟುಂಬ ನೆಲೆಯಲ್ಲಿ ಆಸ್ತಿಯ ಭಾಗವಾಗಿಯೇ ನೋಡುವ ಒತ್ತಡಗಳನ್ನು ಮೀರುವ ಸಾಧ್ಯತೆಗಳೇಕೆ ಚರಿತ್ರೆಯಲ್ಲಿ ಕಾಣದೇ

ಹೋದವು ಎಂಬುದರ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸಬೇಕಾಗಿದೆ. ಬುದ್ಧ, ಬಸವಣ್ಣನ ನಂತರ ಬಂದ ಶಂಕರಾಚಾರ್ಯರು ಹೆಣ್ಣನ್ನು ನರಕಕ್ಕೆ ದಾರಿ ಎಂದೇ ಕರೆದಿರುವುದರ ಹಿಂದೆ ಕೆಲಸ ಮಾಡಿದ ಮನಸ್ಸಿನ ಸೈದ್ಧಾಂತಿಕ ನೆಲೆಯನ್ನು ಕಂಡುಹಿಡಿಯಬೇಕಾಗಿದೆ. ಗಾಂದೀಜಿಯಲ್ಲಿ ಸನಾತನ ಸಂಸ್ಕೃತಿಯ ಚೌಕಟ್ಟಿನೊಳಗಿರುವ ಹೆಣ್ಣಿನ ಬಗ್ಗೆ ಗೌರವಾದರಗಳಿದ್ದವೇ ಹೊರತು ಚೌಕಟ್ಟಿನಾಚೆಗೆ ಬದುಕಲು ಇಚ್ಚಿಸುವ ಮಹಿಳೆಯರ ಕುರಿತ ಹಾಗೆ ಸದಭಿಪ್ರಾಯವಿರಲಿಲ್ಲ. ಹಾಗೆ ನೋಡಿದರೆ ಜ್ಯೋತಿಬಾಪುಲೆ ಮತ್ತು ಪೆರಿಯಾರ್ ಅವರ ದಿಟ್ಟ ನಿಲುವು ಮತ್ತು ಸ್ಪಷ್ಟವಾದ ವಿಚಾರಗಳು ಮಹಿಳೆಯ ಬದುಕಿನ ಬದಲಾವಣೆಯ ದಿಕ್ಕು ದೆಸೆಗಳನ್ನು ವೈಚಾರಕವಾಗಿಯೇ ಗುರುತಿಸಿವೆ. ನಂತರದಲ್ಲಿ ಬಂದ ಮಾನವತಾವಾದಿ ಅಂಬೇಡ್ಕರ್ ಮಹಿಳೆಯರ ಬಗ್ಗೆ ಕಾನೂನು ಸಮ್ಮತಗೊಳಿಸುವಲ್ಲಿ ಅವರ ದಿಟ್ಟ ನಿಲುವಿಗೆ ಅನುಗುಣವಾದ ಫಲ ಸಿಗಲಿಲ್ಲ. ಇದಕ್ಕೆ ಕಾರಣ ಹುಡುಕುತ್ತಾ ಹೋದರೆ ಮನು ಮೂಲವೇ ಕೈಗೆ ಸಿಗುತ್ತದೆ. ನಾವು ಭಾವಿಸಿದಂತೆ ಭಾರತೀಯ ಸಮಾಜ, ಬದುಕು, ಜನರನ್ನು ಮುನ್ನಡೆಸುವ ಶಕ್ತಿ ಬರೆಯಲ್ಪಟ್ಟ ಸಂವಿಧಾನಕ್ಕೆ ಸಾಧ್ಯವಾಗದೇ ಹೋಯಿತು. ಆದರೆ ಸಾಮಾಜಿಕ ಮನ್ನಣೆಯನ್ನು ಪಡೆದುಕೊಳ್ಳುತ್ತಲೇ ಧಾರ್ಮಿಕ ಒತ್ತಾಸೆಯ ನೆಲೆಯಲ್ಲಿರುವ ಮನು ವಿಚಾರಧಾರೆಯೇ ನಮ್ಮನ್ನು ವಾಸ್ತವವಾಗಿ ಆಳುತ್ತಿದೆ. ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸಮಾನವಾದ ಅಧಿಕಾರ ಅವಕಾಶಗಳೆಲ್ಲ ಸಂವಿಧಾನಾತ್ಮಕವಾಗಿ ಕೊಡಮಾಡಲ್ಪಟ್ಟಿವೆ ಎಂಬುದನ್ನೇ ನಾವು ಜಗತ್ತಿಗೆ ಸಾರುತ್ತಾ ಬಂದಿದ್ದೇವೆ. ವಾಸ್ತವವಾಗಿ ಹೆಣ್ಣನ್ನು ಮನು ನಿರ್ದೇಶಿತ ಸ್ಥಾನದಲ್ಲಿಟ್ಟು ಸುತ್ತಲೂ ಬೇಲಿ ಹಾಕಿ ಒಳಗಡೆ ವರ್ಗಹಿತಾಸಕ್ತಿ, ಸರಕು ಸಂಸ್ಕೃತಿಯ ಹಿತಾಸಕ್ತಿ, ಸನಾತನ ಮೌಲ್ಯಗಳ ಕರೆಂಟು ಹರಿಯ ಬಿಟ್ಟಿದ್ದೇವೆ. ಕಾಗದದ ಮೇಲೆ ಕಾನೂನುಗಳಿದ್ದರೂ ಸಮಾಜದಲ್ಲಿ ಮನುಧೋರಣೆ ಜೀವಂತವಾಗಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಲಿಂಗನೆಲೆಯ ಬರ್ಬರತೆಯನ್ನು ಕಾಪಾಡಿ ಕೊಂಡು ಹೋಗುವ ಸಾಮಾಜಿಕ ರೂಢಿನಿಯಮಗಳನ್ನು ಯಾವ ಕಾನೂನಿನಿಂದಲೂ ಮುರಿಯಲು ಸಾದ್ಯವಿಲ್ಲ. ಬಾಬಾಸಾಹೇಬರು ಭಾರತೀಯ ಮಹಿಳಾ ಸಮುದಾಯಕ್ಕೆ ಹಲವಾರು ಕಾಯ್ದೆ-ಕಾನೂನುಗಳನ್ನು ತಂದರು. ಆದರೆ ಈ ಪ್ರಯೋಜನಗಳೆಲ್ಲವೂ ಸಹ ಮೇಲ್ಜಾತಿ ಮತ್ತು ಮೇಲ್ವರ್ಗದ ಮಹಿಳೆಯರಿಗೆ ಅನುಕೂಲವಾದರೂ ಸಹ ಇಡೀ ಮಹಿಳಾಲೋಕವೇ ಅಂಬೇಡ್ಕರರನ್ನು ಜೀವಮಾನದುದ್ದಕ್ಕೂ ಸ್ಮರಿಸಬೇಕು. ಅಂದಿನ ಕಾಲದ ವಿಷಮ ಪರಿಸ್ಥಿತಿಯಲ್ಲಿ ಒಬ್ಬ ಕೆಳವರ್ಗದ ಮಹಾನ್ ವ್ಯಕ್ತಿ ಮಹಿಳೆಯರಿಗೆ ಸಾಮಾಜಿಕ ಮತ್ತು ಆರ್ಥಿಕ ಕಾನೂನುಗಳನ್ನು ಮಾಡಿದ್ದು ಪ್ರಶ್ನಾತೀತವಾದುದಾಗಿದೆ. ಇಡೀ ಲೇಖನ ಮಹಿಳೆಯನ್ನು ಮನುವಿನ ಧಾರ್ಮಿಕ ಸಂಕೋಲೆಯಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ದಿವಾಳಿಯಾಗಿರುವುದನ್ನು ಮತ್ತು ಸಕಾರಾತ್ಮಕವಾಗಿ ಕಾಯ್ದೆ-ಕಾನೂನುಗಳನ್ನು ಮಾಡಿ ಅವುಗಳನ್ನು ಅನುಷ್ಠಾನಗೊಳಿಸಲು ಸತತ ಹೋರಾಟ ಮಾಡಿದ ಅಂಬೇಡ್ಕರ್ ಅವರು ಮಹಿಳೆಯರ ಬಗ್ಗೆ ತಳೆದಿದ್ದ ನಿಲುವುಗಳನ್ನು ಚರ್ಚೆ ಮಾಡಿದ್ದಾರೆ. ಇಲ್ಲಿ ನನ್ನ ವೈಯಕ್ತಿಕ ಅಭಿಪ್ರಾಯವೆಂದರೆ ಆಗಿನ ಕಾಲಘಟ್ಟದ ಸಂಕೀರ್ಣತೆಗಳನ್ನು ಮತ್ತು ಪ್ರಸ್ತುತದ ಸಮಸ್ಯೆಗಳನ್ನು ಅವಲೋಕಿಸಿದಾಗ ಸಮಸ್ಯೆಗಳ ಸ್ವರೂಪದಲ್ಲಿ ಬದಲಾವಣೆ ಗಳಾಗಿವೆ.[೨](ಮಲ್ಲಿಕಾ

ಘಂಟಿ, ೨೦೧೦) ಯಾವುದೇ ಕಾಯ್ದೆಯ ಅಂತಿಮ ಆಶಯ ಮತ್ತು ಉದ್ದೇಶ ಅಪರಾಧವನ್ನು ನಿಲ್ಲಿಸುವುದು. ಅಪರಾಧ ನಿಜವಾಗಿದ್ದರೆ ಅದಕ್ಕೆ ತಕ್ಕ ಕಠಿಣ ಕ್ರಮವನ್ನು ಕಾನೂನಿನ ಚೌಕಟ್ಟಿನಲ್ಲಿ ನೀಡುವುದು ಮೂಲಕ ಆ ಬಾಧಿತರಿಗೆ ನ್ಯಾಯ ಕೊಡಿಸುವುದರಲ್ಲಿ ಕಾಯ್ದೆಯ ಪರಿಣಾಮಕಾರಿ ಅನುಷ್ಠಾನ ಮಾಡುವುದರ ಮೂಲಕ ಮತ್ತು ಸಮಾಜದಲ್ಲಿ ಶಾಂತಿ, ಸಮಾನತೆ ಮತ್ತು ಘನತೆಯನ್ನು ಸಾಧಿಸುವಂತಾಗಿದೆ. ನಮ್ಮ ದೇಶದ ಮೂಲ ಅಂದರೆ ಮಾತೃ ಕಾನೂನಿ ನಂತಿರುವ ಸಂವಿಧಾನದಲ್ಲಿಯೂ ಸಹ "ಭಾರತದ ಪ್ರಜೆಯಾದ ನಾವು ನಮ್ಮ ದೇಶವನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ಮತ್ತು ಎಲ್ಲಾ ಪ್ರಜೆ ಗಳಿಗೂ ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯ ಹಾಗೂ ವಿಚಾರ, ಅಭಿವ್ಯಕ್ತಿ, ನಂಬಿಕೆ, ಶ್ರದ್ಧೆ ಮತ್ತು ಆರಾಧನೆ ಸ್ವಾತಂತ್ರ್ಯವನ್ನು ಸಮಾನತೆ ಮತ್ತು ಅವಕಾಶವನ್ನು, ಪ್ರತಿ ವ್ಯಕ್ತಿಯ ಘನತೆ ಯನ್ನು ಖಾತ್ರಿಪಡಿಸುವ ಭ್ರಾತೃತ್ವವನ್ನು ಮತ್ತು ರಾಷ್ಟ್ರದ ಐಕ್ಯತೆಯನ್ನು ಮತ್ತು ಸಮಗ್ರತೆ ಒದಗಿಸಲು ೨೬ ನವೆಂಬರ್, ೧೯೪೯ ದೃಢ ಪ್ರತಿಜ್ಞೆ ಕೈಗೊಂಡಿದ್ದೇವೆ. ಇಲ್ಲಿ ಪ್ರಭುತ್ವಕ್ಕಿಂತ ಜನತೆ ಅಥವಾ ಪ್ರಜೆ ಎಂದಿರುವುದು ಪ್ರಜಾಸತ್ತಾತ್ಮಕ ಮೌಲ್ಯವಾಗಿದೆ. ಅದ್ದರಿಂದ ಸಂವಿಧಾನದಲ್ಲಿ ನ್ಯಾಯಕ್ಕೆ ಉತ್ತಮ ಸ್ಥಾನವಿರುವುದರಿಂದ ಸಾವಿರಾರು ವರ್ಷಗಳ ಕಾಲಗಳಿಂದ ತುಳಿತಕ್ಕೆ ಒಳಗಾಗಿರುವ, ತಾರತಮ್ಯಕ್ಕೆ ಗುರಿಯಾಗಿರುವ ಜನಸಾಮಾನ್ಯರಿಗೆ ನ್ಯಾಯ ಕೊಡಿಸುವುದಕ್ಕೋಸ್ಕರ ಸಾಮಾಜಿಕ ನ್ಯಾಯದ ಮೂಲಕ ಜಾತಿ, ವರ್ಗ, ಸಾಮಾಜಿಕ ಲಿಂಗ ಈ ಮೂರು ಅಂಶಗಳಲ್ಲಿ ನೊಂದ ದಲಿತ ಅದರಲ್ಲೂ ದಲಿತ ಮಹಿಳೆಯರಲ್ಲಿ ದಲಿತ ಮಹಿಳೆಯಾಗಿರುವ ದೇವದಾಸಿಯರು ಅನಿಷ್ಟ ಪದ್ಧತಿಗೆ ಅಮಾಯಕವಾಗಿ ಬಲಿಯಾಗಿರುವ ಈ ಪದ್ಧತಿಯ ಸಂಪೂರ್ಣ ನಿಷೇಧದ ಕಾನೂನನ್ನು ಸರ್ಕಾರವು ಜಾರಿಗೆ ತಂದಿದೆ.

**೫.೨. ದೇವದಾಸಿ ಪದ್ಧತಿಯ ನಿಯಂತ್ರಣದ ಕಾನೂನು ಮತ್ತು ಪುನರ್ವಸತಿ ಯೋಜನೆಗಳು**

**ಬೌದ್ಧರ ಕಾಲದ ಸುಧಾರಣಾ ಕ್ರಮಗಳು:** ಪ್ರಾಚೀನ ಕಾಲದಲ್ಲಿ ರೂಢಿಯಲ್ಲಿದ್ದ ಸಾಮಾಜಿಕ, ಧಾರ್ಮಿಕ, ಶೋಷಣೆಯ ವಿರುದ್ಧ ಆಂದೋಲನ ಮಾಡಿದ ಗೌತಮ ಬುದ್ಧ ಸ್ತ್ರೀ ಶೋಷಣೆ ಜಾತೀಯತೆ ವಿರುದ್ಧ ಹೋರಾಡಿ ಸ್ತ್ರೀಯರಿಗೂ ಮೋಕ್ಷ ಲಭ್ಯವೆಂದು ಭಿಕ್ಷುಣಿಯರ ಸಂಘವನ್ನು ಸ್ಥಾಪಿಸಿ ಮಹಿಳೆಯರಿಗೆ ಅನುಕೂಲ ಮಾಡಿದರು. ಒಮ್ಮೆ ಅಮ್ರಪಾಲಿ ಎಂಬ ದೇವದಾಸಿ ಬುದ್ಧನ ಬಳಿ ಬಂದು ಅವರ ಕಾಲಿಗೆ ಎರಗಿ ತಮ್ಮಿಂದ ನಾನು ಪರಿವರ್ತನೆಯಾಗಿದ್ದೇನೆ ಎಂಬ ಉದಾಹರಣೆಗಳಿವೆ. **ವಚನ ಚಳುವಳಿಯ ಕಾಲದ ನಿವಾರಣಾ ಕ್ರಮಗಳು:** ಸೂಳೆ ಸಂಕವ್ವ ತನ್ನ ಬದುಕಿನ ಅನಿವಾರ್ತೆಯಿಂದ ಬೇಸತ್ತು ಜೀವನಶೈಲಿಯನ್ನು ಬದಲಿಸಿಕೊಂಡ ಧೀಮಂತೆ. ಬಸವಣ್ಣ ರಂತೂ ಪರಸ್ತ್ರೀಯನ್ನು ಒಲ್ಲೆ ಎನ್ನುವ ಛಲ ಶರಣಗಿರಬೇಕು ಎಂದು ಸಾರಿ ಹೇಳಿ ಆಗ ಸಾಕಷ್ಟು ಪ್ರಚಲಿತವಾಗಿದ್ದ ಸೂಳೆಗಾರಿಕೆಯ ಬಗ್ಗೆ ಉಗ್ರ ತಿರಸ್ಕಾರ ತೋರಿದರು. ಅಲ್ಲಮಪ್ರಭು ಮಾಯದೇವಿ ಎಂಬ ನರ್ತಕಿಯ(ದೇವದಾಸಿಯ) ಮನಸ್ಸನ್ನು ಪರಿವರ್ತನೆ ಮಾಡಿದ ಉಲ್ಲೇಖವಿದೆ. ಮುಸ್ಲಿಂ

**ದೊರೆಗಳ ಕೈಗೊಂಡ ನಿವಾರಣೆಗಳು:** ಔರಂಗಜೇಬನ ಕಾಲದಲ್ಲಿ ದೇವದಾಸಿ ಪದ್ಧತಿಯನ್ನು ನಾಶ ಮಾಡಲು ದೇವಾಲಯಗಳನ್ನು ನಾಶ ಮಾಡಿದನು. ದೇವದಾಸಿ / ನರ್ತಕಿಯರನ್ನು ಮದುವೆ ಮಾಡಲು ಮುಂದಾದರು. ಮದುವೆಯಾಗದವರನ್ನು ರಾಜ್ಯದಿಂದ ಗಡಿಪಾರು ಮಾಡಿದನು(ಎಲಿಯಟ್; ೧೯೬೭). **ಬ್ರಿಟೀಷ ಕಾಲದ ಕ್ರಮಗಳು:** ಪುರುಷರಂತೆ ಸ್ತ್ರೀಯರು ಶಿಕ್ಷಣ, ಉದ್ಯೋಗ, ವಿವಾಹ, ಸಾರ್ವಜನಿಕ ಜೀವನ ಎಲ್ಲಾ ರಂಗಗಳಲ್ಲಿಯೂ ಹಕ್ಕುಗಳನ್ನು ಪಡೆಯಲಾರಂಭಿಸಿದರು. ಸ್ತ್ರೀಯರ ಸಮಸ್ಯೆ, ಬಾಲ್ಯವಿವಾಹ, ವಿಧವಾ ಪುನರ್ವಿವಾಹ, ಸತಿಸಹಗಮನ ಪದ್ಧತಿ, ದೇವದಾಸಿ ಪದ್ಧತಿಗಳನ್ನು ಶಾಸನಗಳ ಮೂಲಕ ತೊಡೆದುಹಾಕಲು ಯತ್ನಿಸಿದರು. ೧೯ನೆಯ ಶತಮಾನದ ವೇಳೆಗೆ ಬ್ರಿಟಿಷ್ ದೇವದಾಸಿ ಪದ್ಧತಿಯನ್ನು ಕಟ್ಟುನಿಟ್ಟಾಗಿ ವಯಸ್ಸನ್ನು ನಿಗದಿ ಮಾಡಿದರು. ಬ್ರಿಟಿಷ್ ಸರ್ಕಾರ ನಂದಿಯ ಬೋಗ ನಂದೀಶ್ವರ ದೇವಾಲಯದ ರಥೋತ್ಸವ ಸಮಯದಲ್ಲಿ ನೃತ್ಯ ಸೇವೆಯನ್ನು ಮಾಡುತ್ತಿದ್ದ ವೃತ್ತಿನಿರತ ಮಹಿಳೆಯರನ್ನು ಅವರ ತಾತ್ಕಾಲಿಕವಾದ ಉದ್ಯೋಗದಿಂದ ೧೯೮೨ರಲ್ಲಿ ವಿಮುಕ್ತಿಗೊಳಿಸಿತು. ನಂಜನಗೂಡಿನ ದೇವಾಯಲದಲ್ಲಿ ನೃತ್ಯ ಸೇವೆಯಲ್ಲಿದ್ದ ದೇವದಾಸಿಯರನ್ನು ೧೯೮೯ರಲ್ಲಿ ಪರಿಷ್ಕರಣ ಮಾಡಲಾಯಿತು. ಅಲ್ಲಿನ ಮುಜರಾಯಿ ಅಧೀಕ್ಷಕ ಮತ್ತು ಕಾರ್ಯದರ್ಶಿಗಳಿಗೆ ಆದೇಶ ನೀಡಿದರು.

**ಭಾರತೀಯ ಸಂವಿಧಾನದಲ್ಲಿ** ಪ್ರಸ್ತಾವನೆಯೊಂದಿಗೆ ಮತ್ತು ಮೂಲಭೂತ ಹಕ್ಕು ಮತ್ತು ರಾಜ್ಯ ನೀತಿಯ ನಿರ್ದೇಶಕ ತತ್ವಗಳಲ್ಲಿಯೂ ಸಹ ಕೆಲವು ಕಾನೂನುಗಳನ್ನು ಒಳಗೊಂಡಿದೆ. ಅದರಲ್ಲಿ ಮುಖ್ಯವಾಗಿ ಅನುಚ್ಛೇದ ೧೪ರಲ್ಲಿ ಕಾನೂನಿನ ಮುಂದೆ ಸಮಾನತೆ, ೧೫ರಲ್ಲಿ ಧರ್ಮ, ಮೂಲವಂಶ, ಜಾತಿ, ಲಿಂಗ, ಅಥವಾ ಜನ್ಮಸ್ಥಳದ ಆಧಾರಗಳ ಮೇಲೆ ತಾರತಮ್ಯ ನಿಷೇಧ, ಅದರಲ್ಲೂ ಮಹಿಳೆ ಮತ್ತು ಮಕ್ಕಳಿಗೆ, ಮುಖ್ಯವಾಗಿ ೧೭ರಲ್ಲಿ **ಅಸ್ಪೃಶ್ಯತೆಯ ನಿರ್ಮೂಲನೆ; ಯಾವುದೇ ರೂಪದ ಅಸ್ಪೃಶ್ಯತೆಯ ಆಚರಣೆಯನ್ನು ನಿಷೇಧಿಸಲಾಗಿದೆ.** ೨೧ರಲ್ಲಿ ಸ್ವಾತಂತ್ರ್ಯದ ಸಂರಕ್ಷಣೆ, ೨೧ಎ ನಲ್ಲಿ ಶಿಕ್ಷಣದ ಅವಕಾಶ, ೨೩ರಲ್ಲಿ ಶೋಷಣೆಯ ವಿರುದ್ಧದ ಹಕ್ಕು, ಹಾಗೆಯೇ ನಿರ್ದೇಶಕ ತತ್ವದಲ್ಲಿ ಅನುಚ್ಛೇದ ೩೮ರಲ್ಲಿ ಜನತೆಯ ಕಲ್ಯಾಣಕ್ಕಾಗಿ ಸಾಮಾಜಿಕ ವ್ಯವಸ್ಥೆ, ೩೯ಎ ನಲ್ಲಿ ಸಮಾನ ನ್ಯಾಯ ಮತ್ತು ಉಚಿತ ಕಾನೂನು, ೪೬ರಲ್ಲಿ ಅನುಸೂಚಿತ ಜಾತಿ ಮತ್ತು ಪಂಗಡ / ಬುಡಕಟ್ಟು ಮತ್ತು ಇತರ ದುರ್ಬಲ ವರ್ಗಗಳ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಶಕ್ತಿಯ ವೃದ್ಧಿ, ನಂತರ **ಮೂಲಭೂತ ಕರ್ತವ್ಯದಲ್ಲಿ** ೫೧ಇ ನಲ್ಲಿ ಸ್ತ್ರೀಯರ ಗೌರವಕ್ಕೆ ತೊಡಕು ಉಂಟು ಮಾಡುವ ಆಚರಣೆಯನ್ನು ಬಿಟ್ಟುಬಿಡುವುದು. ಹೀಗೆ ಸಂವಿಧಾನದಲ್ಲಿ ಕೆಲವು ಮೂಲ ಕಾನೂನುಗಳನ್ನು ಅಳವಡಿಸಲಾಗಿದೆ.[೩] **(ಮಂಗ್ಳೂರ ವಿಜಯ,೨೦೧೦)** ಇದಕ್ಕೆ ಪೂರಕವಾಗಿ ಆಯಾ ಕಾಲಘಟ್ಟದಲ್ಲಿ ನಿರ್ದಿಷ್ಟವಾದ ಕಾಯ್ದೆಗಳನ್ನು ಜಾರಿಗೆ ತಂದು ನೊಂದವರಿಗೆ ನ್ಯಾಯವನ್ನು ಒದಗಿಸಲಾಗುತ್ತಿದೆ. ಅದೇ ರೀತಿ ಇಲ್ಲಿ ದೇವದಾಸಿ ಪದ್ಧತಿಯ ನಿರ್ಮೂಲನೆ ಮತ್ತು ಅವರ ಪುನರ್ವಸತಿಯನ್ನು ಸಂವಿಧಾನದ ಚೌಕಟ್ಟಿನಲ್ಲೇ ಜಾರಿ ಮಾಡಲಾಗಿದೆ.

**ಭಾರತೀಯ ದಂಡ ಸಂಹಿತೆ**(ಐ.ಪಿ.ಸಿ.) ೨೫೪, ೩೬೬, ೩೭೩, ೩೭೫ ಮತ್ತು ೪೯೫ ಪ್ರಕಾರ ಅನೈತಿಕ ಲೈಂಗಿಕ ಸಂಬಂಧ ದಂಡಾರ್ಹವಾದ ಮತ್ತು ಕಾನೂನುಬಾಹಿರ ಅಪರಾಧವೆಂದು ಪರಿಗಣಿಸಲಾಗಿದೆ(೧೯೨೩: ಮುಂಬಾಯಿ). ಮಹಿಳೆಯರ ಮತ್ತು ಹೆಣ್ಣುಮಕ್ಕಳ ಅನೈತಿಕ ಮಾರಾಟ ನಿಗ್ರಹ ಕಾಯ್ದೆಯನ್ನು ೧೯೫೬–೫೮ರಲ್ಲಿ ಆಚರಣೆಗೆ ಬಂತು. ೧೯೨೨ ಬ್ರಿಟನ್ನಿನ ಅನಿಬೆಸೆಂಟ್ ಭಾರತಕ್ಕೆ ಬಂದು ದೇವದಾಸಿ ಪದ್ಧತಿಯ ವಿರುದ್ಧ ಸಾಮೂಹಿಕ ಸಹಿ ಸಂಗ್ರಹಿಸಲಾಯಿತು. ೧೯೧೦ರಲ್ಲಿ ಗೆಜ್ಜೆಪೂಜೆ ಮೈಸೂರಿನಲ್ಲಿ ಅರಸರು ನಿಷೇಧಿಸಿದರು. ದೇವದಾಸಿ ಪದ್ಧತಿಯ ವಿರುದ್ಧ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ಮೈಸೂರಿನಲ್ಲಿ ಸಮರ ಸಾರಲಾಯಿತು. ೧೯೦೬–೦೭ರಲ್ಲಿ ಹೆಣ್ಣು ಶಿಶುಗಳನ್ನು ಅನೈತಿಕತೆ ಕೆಲಸಗಳಿಗಾಗಿ ದುರುಪಯೋಗ ಪಡಿಸಿಕೊಳ್ಳುವುದರ ವಿರುದ್ಧ ಅಂತರರಾಷ್ಟ್ರೀಯ ಮಟ್ಟದ ಶೃಂಗಸಭೆಯನ್ನು ಕರೆಯಲಾಯಿತು. ದಕ್ಷಿಣ ಕನ್ನಡದ ಕುಂದಾಪುರ, ಬಸರೂರ ಗ್ರಾಮದ ದೇವದಾಸಿ ಕುಟುಂಬದವರು ೧೯೪೫–೪೭ರಲ್ಲಿ ಸ್ವಯಂಪ್ರೇರಿತರಾಗಿ ಈ ಪದ್ಧತಿಯಿಂದ ಹೊರಬಂದರು. ಮದ್ರಾಸ್ ಪ್ರಾಂತ್ಯದಲ್ಲಿ ೧೯೨೭ರಲ್ಲಿ ಹಿಂದೂ ರಿಲಿಜಿಯನ್ ಲೀಡ್ ಚಾರಿಟಬಲ್ ಎಂಡೊಮೆಂಟ್ ಕಾಯ್ದೆಯನ್ನು ದೇವದಾಸಿ ಪದ್ಧತಿ ದಂಡನೀಯ ಅಪರಾಧ ವೆಂದು ಘೋಷಿಸಿದರು. ೧೯೩೪–೩೫ರಲ್ಲಿ ಬ್ರಿಟಿಷ್ ಆಡಳಿತವು ದೇವದಾಸಿ ಪ್ರತಿಬಂಧಕ ಕಾಯ್ದೆಯನ್ನು ಜಾರಿ ಮಾಡಿ ಆರು ತಿಂಗಳ ಕಠಿಣ ಶಿಕ್ಷೆ ಮತ್ತು ೫೦೦ ರೂ.ಗಳ ದಂಡವನ್ನು ವಿಧಿಸಿತು. ತಮಿಳುನಾಡು ೧೯೪೭ರ ದೇವದಾಸಿ ನಿಷೇಧ ಕಾಯ್ದೆ, ಆಂಧ್ರಪ್ರದೇಶ ೧೯೮೮ರ ದೇವದಾಸಿ ಸಮರ್ಪಣಾ ನಿಷೇಧ ಕಾಯ್ದೆ, ಒರಿಸ್ಸಾ ೧೯೮೮ರ ದೇವದಾಸಿ ಸಮರ್ಪಣಾ ನಿಷೇಧ ಕಾಯ್ದೆ ಮತ್ತು ಮಹಾರಾಷ್ಟ್ರ ೧೯೩೪ರ ದೇವದಾಸಿಯರ ಸಂರಕ್ಷಣಾ ಕಾಯ್ದೆ ಹೀಗೆ ಹಲವು ಕಾಯ್ದೆಗಳನ್ನು ಒಳಗೊಂಡಂತೆ ದೇವದಾಸಿಯ ನಿಷೇಧದ ಕಾಯ್ದೆಯನ್ನು ಜಾರಿಗೆ ತಂದರು. ೧೯೪೭ರಲ್ಲಿ ಉತ್ತರ ಭಾರತದಲ್ಲಿ ದೇವದಾಸಿ ಪದ್ಧತಿ ನಿಷೇಧವಾಯಿತು. **ಸುಧಾರಣಾ ಕ್ರಮಗಳು:** ರಾಜರ ವಿಲಾಸ ಜೀವನ ತಮಗೂ ದಕ್ಕಬೇಕೆಂಬ ಆಸೆಯಿಂದ ಪುರೋಹಿತರು ರಾಜರನ್ನು ಅನುಸರಿಸಿ ದೇವದಾಸಿ ಪದ್ಧತಿಯನ್ನು ಹುಟ್ಟುಹಾಕಿದ್ದರು. ಈ ಪದ್ಧತಿಯು ದೇವಾಲಯ, ಸರ್ಕಾರ ಹಾಗೂ ದೇವದಾಸಿಯರ ಕುಟುಂಬಗಳಿಗೆ ನಿಯತವಾದ ಆದಾಯದ ಮೂಲವು ಆಯಿತು. ಹೀಗಾಗಿ ಈ ಪದ್ಧತಿಯನ್ನು ರದ್ದುಪಡಿಸುವುದಿರಲಿ ನಿಯಂತ್ರಿಸುವ ಯತ್ನಗಳು ಕೂಢ ನಡೆಯಲೇ ಇಲ್ಲ. ಬ್ರಿಟಿಷ್ ಆಡಳಿತದಲ್ಲಿ ಇವರ ವಯಸ್ಸು ಇಂತಿಷ್ಟೆ ಇರಬೇಕೆಂದು ನಿಯಮ ಬಂದದ್ದು, ಆದರೆ ಹುಡುಗಿಯರ ತಂದೆ ತಾಯಿಗಳ ಸ್ವಾರ್ಥದಿಂದ ವಯಸ್ಸನ್ನು ತಪ್ಪಾಗಿ ಇಲ್ಲವೆ ಧಾರ್ಮಿಕ ನೆಲೆಯಿಂದ ಅನುಮತಿ ಪಡೆದು ಈ ಪದ್ಧತಿಯನ್ನು ಪೋಷಿಸುತ್ತಿದ್ದರು. ಆದರೆ ದಕ್ಷಿಣದಲ್ಲಿ ಶ್ರೀ ಆರ್. ವೆಂಕಟರತ್ನಂ ನಾಯುಡು ೧೮೬೨–೧೯೩೯ರವರೆಗೆ ಈ ದುಷ್ಟ ಪದ್ಧತಿಯ ವಿರುದ್ಧ ಹೋರಾಟ ಮಾಡಿದರು. ಆದರೂ ಸಹ ಸಮಾಜ ಸುಧಾರಣಾ ಚಳುವಳಿಗಳು ಈ ಪದ್ಧತಿಯ ಮೇಲೆ ಬೀರಿದ ಪ್ರಭಾವವಂತೂ ತೀರ ಅತ್ಯಲ್ಪ. ೧೯೨೪ರಲ್ಲಿ ಭಾರತೀಯ ದಂಡ ಸಂಹಿತೆಯಲ್ಲಿ ಈ ಪದ್ಧತಿಯ ವಿಚಾರಕ್ಕೆ ತಿದ್ದುಪಡಿ ತರಲಾಯಿತು. ೩೭೨ ಹಾಗೂ ೩೭೩ನೇ ಕಲಮಿನಲ್ಲಿ ದೇವಾಲಯಗಳಿಗೆ ಹಾಗೂ ಪೂಜಾ

ವಿಗ್ರಹಗಳಿಗೆ ಹುಡುಗಿಯರನ್ನು ಸಮರ್ಪಿಸುವ ಆಚರಣೆಯು ಕೊನೆಗೊಮ್ಮೆ ವೇಶ್ಯಾವಾಟಿಕೆಯನ್ನು ಕೈಗೊಳ್ಳುವ ವಿಧಾನವಾಗಿ ಮಾರ್ಪಾಡಾಗುವ ಈ ಪದ್ಧತಿಯು ಅನೈತಿಕವೆಂದು ಘೋಷಿಸಿದೆ. ಬೊಂಬಾಯಿ ದೇವದಾಸಿ ರಕ್ಷಣಾ ಅಧಿನಿಯಮ ೧೯೩೪, ೧೯೪೭ರ ಮದ್ರಾಸ್ ಪ್ರಾಂತ್ಯವು ದೇವದಾಸಿ ಸಮರ್ಪಣಾ ತಡೆ ಅಧಿನಿಯಮವನ್ನು ಜಾರಿಗೊಳಿಸಿತು.[೪] (**ಬಿ.ಆರ್. ಪಾಟಿಲ್; ೧೯೯೪**)

**೧೯೦೯ರ ದೇವದಾಸಿ ನಿಷೇಧಾಜ್ಞೆ ಕಾನೂನು:** ಇದರಲ್ಲಿ ಮುಖ್ಯವಾದ ಸಾಮಾಜಿಕ ಪೀಡು ಗಾಗಿರುವ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಲು ಮೊಟ್ಟಮೊದಲ ಕಾನೂನನ್ನು ನಾಲ್ವಡಿ ಕೃಷ್ಣರಾಜ ಒಡೆಯರ್ ಜಾರಿಗೆ ತಂದದ್ದು ಸಾಮಾಜಿಕ ಬೆಳವಣಿಗೆಯಾಗಿದೆ. ದೇವಾಲಯಗಳಲ್ಲಿ ದೇವದಾಸಿಯರ ನೇಮಕಕ್ಕೆ ಅನ್ವಯವಾಗುತ್ತಿದ್ದ ಸನಾತನಧರ್ಮದ ಉಚ್ಚ ಧ್ಯೇಯಗಳನ್ನು ಗಾಳಿಗೆ ತೂರಿ, ಅದಕ್ಕೆ ಬದಲು ಈ ಕೆಲಸವನ್ನು ಅನೈತಿಕ ವೃತ್ತಿಯಾಗಿ ಮಾರ್ಪಡಿಸಿ, ಅಮಾಯಕ ದೇವದಾಸಿಯರನ್ನು ತಮ್ಮ ತಮ್ಮ ಕಾಮದ ತೃಪ್ತಿಗಾಗಿ ಬೇಕಾಗಿದ್ದ ಭೋಗವಸ್ತುಗಳಾಗಿ ಬಳಸಿಕೊಳ್ಳುತ್ತಿದ್ದ ಹೇಯಪದ್ಧತಿಯನ್ನು ಕೊನೆಗಾಣಿಸುವುದಕ್ಕಾಗಿ ಸರ್ಕಾರವು ೧೯೦೯ರಲ್ಲಿ ಸುತ್ತೋಲೆಯನ್ನು ಹೊರಡಿಸಿತು. ಈ ಕಾನೂನನ್ನು ಜಾರಿಗೆ ತಂದಿದ್ದರಿಂದ ಬ್ರಿಟಿಷರಿಂದ ಪ್ರಸಂಶೆಯು ಬಂತು. ಆದರೆ ಕರ್ನಾಟಕದಲ್ಲಿ ಇಲ್ಲಿಯವರೆಗೆ ಮೂರು ಕಾನೂನುಗಳು ಬಂದಿವೆ. ಆದರೂ ಈ ಸಮುದಾಯಕ್ಕೆ ಯಾವುದೇ ಘನತೆ ತರುವ ಕೆಲಸವಾಗಿಲ್ಲವೆಂದೇ ಹೇಳಬಹುದು. ಇದರಲ್ಲಿ ಗಮನಿಸುವ ಅಂಶವೆಂದರೆ ಮೈಸೂರು ಭಾಗದಲ್ಲಿ ಈ ಪದ್ಧತಿಯು ಸಂಪೂರ್ಣವಾಗಿ ನಿರ್ಮೂಲನೆಯಾಗಿದೆ. ಇದಕ್ಕೆ ನಾಲ್ವಡಿ ಯವರ ಕೊಡುಗೆಯು ಸಹ ಕಾರಣವಾಗಿದೆ.

**ಭಾರತದಲ್ಲಿ ಇದರ ಬಗ್ಗೆ ಮೊದಲು ೧೯೨೨ರಲ್ಲಿ ಡಾ. ಘೋರ ಅವರು** ಬ್ರಿಟಿಷ್ ಸರ್ಕಾರದಲ್ಲಿ ದೇವದಾಸಿ ಮಸೂದೆಯತ್ತ ಗಮನ ಸೆಳೆದರು. ಇದರ ಪರಿಣಾಮವಾಗಿ ಈ ಪದ್ಧತಿ ಕಾನೂನು ಬಾಹಿರವೇಂದು ೧೯೨೫ರಲ್ಲಿ ಭಾರತದಲ್ಲಿ ಮಸೂದೆ ಜಾರಿಗೆ ಬಂದಿತು ಎಂದು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ ಇಷ್ಟು ಮಾಹಿತಿ ಬಿಟ್ಟರೆ ಏನನ್ನು ಹೆಚ್ಚಾಗಿ ಇವರ ಬಗ್ಗೆ ತಿಳಿಸಿಲ್ಲ. ಇದರಿಂದ ತಿಳಿಯುವುದೇನೆಂದರೆ ಬಹು ಹಿಂದೆಯೇ ಈ ಕಾನೂನನ್ನು ಜಾರಿಗೆ ತಂದರೂ ಪರಿಣಾಮಕಾರಿಯಾಗಿ ಪ್ರಯೋಗಿಸಿಲ್ಲ. ಏಕೆಂದರೆ ಕಾನೂನು ಮಾಡುವವರು ಹಿಂದು ಮೂಲಭೂತವಾದಿಗಳು ಮತ್ತು ಜಾರಿಗೆ ತರುವವರು ಅವರೇ ಇದ್ದುದರಿಂದ ಈ ಕಾನೂನು ಇಲ್ಲಿಯವರೆಗೂ ಸಹ ಕುಂಟುತ್ತಾ ಸಾಗುತ್ತಿದೆ. ಮಹಾರಾಷ್ಟ್ರ ಹಾಗೂ ಕರ್ನಾಟಕದ ಗಡಿಭಾಗಗಳಲ್ಲಿ ಮಾತ್ರ ಈ ಪದ್ಧತಿಯಿರದೆ ಇತರೆ ಭಾಗಗಳಲ್ಲಿಯೂ ಸಹ ಇತ್ತು ಎಂದು ಗುರುತಿಸಿದ್ದಾರೆ. ಡಾ. ಬಾಬಾ ಸಾಹೇಬ ಅಂಬೇಡ್ಕರರು ಸಹ ೧೯೩೬ ಜೂನ್ ತಿಂಗಳಿನಲ್ಲಿ ಬಾಂಬೆಯಲ್ಲಿ ಹಲವು ಸಭೆಗಳನ್ನು ಉದ್ದೇಶಿಸಿ ಮಾತನಾಡಿದ್ದರು. ಅದರಲ್ಲಿ ಮುಖ್ಯವಾಗಿ ಕಾಮಾಟಿಪುರದ ವೃತ್ತಿನಿರತವಾಗಿ ಮತ್ತು ದೇವದಾಸಿ ಪದ್ಧತಿಯ ಹಿನ್ನೆಲೆಯಿಂದ ಬಂದು ವೇಶ್ಯಾವೃತ್ತಿಯನ್ನು ಮಾಡುತ್ತಿದ್ದವರು ಮತ್ತು ದೇವದಾಸಿ/ಜೋಗಯ್ಯ/ಹಿಜಡಾಗಳೂ ಸಹ

ಸಭೆಯಲ್ಲಿ ಹಾಜರಿದ್ದರು. ಅಂಬೇಡ್ಕರರು ಈ ಪದ್ಧತಿಯ ಬಗ್ಗೆ ಮತ್ತು ಮಹರ್ ಜಾತಿಯಲ್ಲಿ ಹುಟ್ಟಿ ಇಂತಹ ವೃತ್ತಿಯನ್ನು ಆಯ್ಕೆ ಮಾಡಿಕೊಂಡವರನ್ನು ಕಟುವಾಗಿ ಟೀಕಿಸಿದರು. ಇದಕ್ಕೆ ಪೂರಕವಾಗಿ ಶಾಹುಮಹಾರಾಜರು ೧೯೨೧ರಲ್ಲಿ ಈ ಪದ್ಧತಿಯ ನಿಯಂತ್ರಣಕ್ಕೆ ಕಾಯ್ದೆಯನ್ನು ಹೊರಡಿಸಿದ್ದರು.

**೫.೩. ಕರ್ನಾಟಕದಲ್ಲಿ ಜಾರಿಗೆ ತಂದ ಪ್ರಮುಖ ಕಾಯ್ದೆಗಳು:**

**೧. ಕರ್ನಾಟಕ ದೇವದಾಸಿಯರ(ಸಮರ್ಪಣಾ ನಿಷೇಧ) ಕಾಯ್ದೆ ೧೯೮೨ ಮತ್ತು ತಿದ್ದುಪಡಿ ೨೦೦೯-೧೦:** ಈ ಕಾಯ್ದೆ ಬರುವುದಕ್ಕೆ ಮುಂಚೆ ಹಲವು ರೀತಿಯ ಕಾನೂನು ಮತ್ತು ಸುಧಾರಣಾ ಕ್ರಮಗಳು ಇದ್ದವು. ಅವೆಲ್ಲವೂ ಸಹ ಅಯಾ ಕಾಲಘಟ್ಟಕ್ಕೆ ಸೀಮಿತವಾಗಿದ್ದವು. ಈ ಕಾಯ್ದೆಯ ಪ್ರಕಾರ ದೇವದಾಸಿ ಎಂದರೆ ಯಾವುದೇ ದೇವಿ, ಪ್ರತಿಮೆ, ಪೂಜಾ ವಸ್ತು, ದೇವಾಲಯ ಮತ್ತಿತರ ಧಾರ್ಮಿಕ ಸಂಸ್ಥೆಗಳು ಮತ್ತು ಯಾವುದೇ ದೇವರ ಹೆಸರಿನಿಂದ ಬಳಸಿ, ಅರ್ಪಿಸಲಾಗುವ ಮಹಿಳೆ ದೇವದಾಸಿ ಆಗಿ ಅರ್ಪಿಸಿಕೊಳ್ಳುವ ಮುನ್ನ ಅಥವಾ ಅಮೇಲೆ ನಡೆಯುವ ಆಚರಣೆ ಮತ್ತು ಎಲ್ಲಾ ಪ್ರಕಾರದ ಅರ್ಪಣೆಗೆ ಒಪ್ಪಿರುವಳೋ ಅಥವಾ ಇಲ್ಲವೋ ಎಂಬುದು ಮುಖ್ಯವಲ್ಲ. ಈ ತೆರನಾದ ಆಚರಣೆಯು ಕಾನೂನುಬಾಹಿರವೆಂದು, ಆಮೇಲೆ ದೇವದಾಸಿಯರ ಸಮಾರಂಭವನ್ನು ಆಚರಿಸುತ್ತಾರೋಯಾರು, ಅದಕ್ಕೆ ಒಪ್ಪಿಗೆ ನೀಡುತ್ತಾರೋ, ಭಾಗವಹಿಸುತ್ತಾರೋ ಅಥವಾ ಸಹಾಯ ಮಾಡುತ್ತಾರೋ ಅವರಿಗೆ ಮೂರು ವರ್ಷಗಳ ಜೈಲುವಾಸ ಮತ್ತು ಎರಡು ಸಾವಿರ ದಂಡ ಮತ್ತು ಹುಡುಗಿಗೆ ಸಹಾಯ ಮಾಡುವ ತಂದೆ ತಾಯಿಗಳು, ಪೋಷಕರು ಅಥವಾ ಸಂಬಂಧಿಗಳಾದರೆ ಐದು ವರ್ಷ ಮತ್ತು ಐದು ಸಾವಿರ ದಂಡ ನೀಡಬೇಕು ಎಂದು ಕಾಯ್ದೆ ಹೇಳುತ್ತದೆ. ಕಾಯ್ದೆಯಲ್ಲಿ ಎರಡು ಪ್ರಮುಖ ಭಾಗಗಳಿವೆ. ಒಂದು ಈ ಪದ್ಧತಿ ಅಪರಾಧವೆಂದು ಪರಿಗಣಿಸಿ ಅದನ್ನು ನಿಷೇಧಿಸಿ ಶಿಕ್ಷೆ ಮತ್ತು ದಂಡವನ್ನು ವಿಧಿಸಿರುವುದು, ಮತ್ತೊಂದು ದೇವದಾಸಿಯರ ಪುನರ್ವಸತಿ ಕಾರ್ಯಕ್ರಮ. ದೇವದಾಸಿಯರ ಬದುಕನ್ನು ಉತ್ತಮ ಪಡಿಸುವಲ್ಲಿ ಒಂದು ಉತ್ತಮ ಬೆಳವಣಿಗೆಯಾಗಿದೆ. ಆದರೆ ಇಂತಹ ಒಂದು ದೊಡ್ಡ ಜಾತಿ ಮತ್ತು ಲಿಂಗ ತಾರತಮ್ಯದ ಮೂಲಕ ಶೋಷಿಸುತ್ತಾ ಬಂದಿದ್ದ ಈ ಪದ್ಧತಿಯನ್ನು ಕಾಗ್ನಿಸಬಲ್ ಅಪರಾಧವೆಂದು ಪರಿಗಣಿಸುವುದು ದೊಡ್ಡ ಹೆಜ್ಜೆಯಾಗುವುದು. ಕಾಯ್ದೆಯನ್ನು ಸೂಕ್ತವಾಗಿ ಬಳಸಲು ಕೆಲವರಿಗೆ ಹೆಚ್ಚಿನ ಅಧಿಕಾರ ನೀಡಲಾಗಿದೆ. ತಿದ್ದುಪಡಿಯ ಭಾಗವಾಗಿ ಸೆಕ್ಷನ್ ೩ ಎ, ೩ ಡಿ ಯನ್ನು ಹೆಚ್ಚಿನ ಅಧಿಕಾರ ನೀಡಲು ಸೇರಿಸಲಾಗಿದೆ. ಈ ಅಪರಾಧಕ್ಕೆ ಕಠಿಣ ಶಿಕ್ಷೆಯನ್ನು ನೀಡುವ ಅಧಿಕಾರ ಹಾಗೂ ಆ ತರದ ಪ್ರಕ್ರಿಯೆ ಮಾಡಲು ಸ್ವಯಂ ನಿರ್ಧಾರವನ್ನು (ಸುಮಟೋ) ಕೈಗೊಳ್ಳುವ ಅಧಿಕಾರವನ್ನು ಜಿಲ್ಲಾ ದಂಡಾಧಿಕಾರಿಗಳಿಗೆ ನೀಡಲಾಗಿದೆ. ಸೆಕ್ಷನ್ ೩ ಡಿ ಅಡಿಯಲ್ಲಿ ವಿಶೇಷ ಅಧಿಕಾರಿಗಳನ್ನು ನೇಮಿಸಬಹುದು, ಸಾಕ್ಷ್ಯಗಳನ್ನು ಸಂಗ್ರಹಿಸಬಹುದು. ಒಟ್ಟಾರೆ ಈ ಆಚರಣೆಯನ್ನು ಪ್ರೋತ್ಸಾಯಿಸುವಂತೆ, ಸಹಾಯ ಮಾಡದಿರುವಂತೆ ಅನುವು ಮಾಡಿಕೊಡದಂತೆ ಸಲಹೆ ನೀಡಬಹುದು. ಈ ಪದ್ಧತಿಯಿಂದ ಆಗುವ ದುಷ್ಪಪರಿಣಾಮಗಳು ಕುರಿತು ಅರಿವು ಮೂಡಿಸುವುದು, ಅರ್ಪಣೆ ಕುರಿತ

ಪ್ರಜ್ಞೆಯನ್ನು ಸಮುದಾಯದಲ್ಲಿ ಮತ್ತು ಸಮಾಜದಲ್ಲಿ ಬೆಳೆಸುವುದು ವಿಶೇಷಾಧಿಕಾರಿಗಳ ಕರ್ತವ್ಯವಾಗಿದೆ. ಸೆಕ್ಷನ್ ೩ಬಿ ಅಡಿ ಅಪಾಯದಿಂದ ಪಾರು ಮಾಡುವುದು, ರಕ್ಷಣೆ, ಆರೈಕೆ ಮಾಡುವುದು, ಸಮಾಲೋಚನೆ ನಡೆಸುವುದು, ಆರ್ಥಿಕವಾಗಿ ಸಬಲರನ್ನಾಗಿಸುವುದು, ತಾತ್ಕಾಲಿಕ ಆಶ್ರಯ ಕಲ್ಪಿಸುವಂತಹ ಒಳಗೊಂಡ ಪುನರ್ವಸತಿ ಹೇಳುತ್ತದೆ. ಕಾಯ್ದೆಗಳು ಬರೀ ಕಾಗದದಲ್ಲೇ ಉಳಿದು ಬರೀ ಶಿಕ್ಷೆ ಮತ್ತು ದಂಡಗಳಿಗೆ ಸೀಮಿತವಾಗಿದೆ. ಆದರೆ ಅವರ ಸಮುದಾಯ ಮತ್ತು ಕುಟುಂಬಗಳ ಹಿಂದಿರುವ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಮನಸ್ಥಿತಿಯ ಅಂಶಗಳನ್ನು ಕಾಯ್ದೆ ಒಳಗೊಂಡಿಲ್ಲದಿರುವುದು ಒಂದು ದೊಡ್ಡ ಹಿಂದೇಟಾಗಿದೆ. ಕಾಯ್ದೆ ೧೯೮೨ರಲ್ಲಿ ಮತ್ತು ಅದಕ್ಕಿಂತ ಅಂದರೆ ಸ್ವಾತಂತ್ರ್ಯಪೂರ್ವ ಕಾಲದಲ್ಲೇ ಹಲವು ರೀತಿಯಲ್ಲಿ ಜಾರಿಯಾಗಿವೆ.[೫] **(ಸಮರ್ಪಣಾ ನಿಷೇಧ ಕಾಯ್ದೆ ೧೯೮೨ ಮತ್ತು ತಿದ್ದುಪಡಿ ೨೦೦೯-೧೦)** ಆದರೆ ೧೯೮೨ರ ನಂತರ ದೇವದಾಸಿಯರ ಸಂಖ್ಯೆ ದ್ವಿಗುಣಗೊಂಡಿದೆ. ಅಂದರೆ ೧೯೯೩-೯೪ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ರಾಜ್ಯದಲ್ಲಿ ಬರೀ ೨೨೮೭೩ ಜನ ದೇವದಾಸಿಯರಿದ್ದಾರೆಂದು ತಿಳಿದು ಬಂದಿದೆ. ನಂತರ ೨೦೦೯-೧೦ರಲ್ಲಿ ನಡೆದ ಸಮೀಕ್ಷೆಯ ಪ್ರಕಾರ ೨೩೭೮೭ ಜನ ಹೆಚ್ಚುವರಿಯಾಗಿ ಇದ್ದಾರೆಂದು ತಿಳಿದುಬಂದಿದೆ. ಅಂದರೆ ಕರ್ನಾಟಕದಲ್ಲಿ ಒಟ್ಟು ೪೬೬೬೦ ಜನ ದೇವದಾಸಿಯರಿದ್ದರೆಂದು, ಇದರಲ್ಲಿ ೬೧೬೬ ಜನ ದೇವದಾಸಿಯರು ಸತ್ತುಹೋಗಿದ್ದಾರೆಂದು ತಿಳಿದುಬಂದಿದೆ. ಉದಾಹರಣೆಗೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೬೦೩೫ ಜನ ದೇವದಾಸಿಯರೆಂದು ತಿಳಿದುಬಂದಿದೆ ಆದರೆ ಪುನರ್ವಸತಿಯ ಯೋಜನೆಯು ಬರೀ ೨೯೨೫ ಜನ ಪಡೆಯುತ್ತಿದ್ದಾರೆ ಉಳಿದ ೩೧೧೦ ಜನ ದೇವದಾಸಿಯರಿಗೆ ಸಿಗುತ್ತಿಲ್ಲ ಎಂದು ಕಣ್ಣು ಮುಚ್ಚಿಕೊಂಡು ಹೇಳಬಹುದು. ಹಾಗೆಯೇ ಕೆಲವು ಸಂಘಟನೆಗಳ ಪ್ರಕಾರ ಲಕ್ಷಕ್ಕೂ ಹೆಚ್ಚು ಜನ ದೇವದಾಸಿಯರಿದ್ದಾರೆಂದು ಮತ್ತು ಸದ್ಯದಲ್ಲೂ ಸಹ ಕದ್ದುಮುಚ್ಚಿ ಮುತ್ತು ಕಟ್ಟಿಸುವುದು ಸಹ ನಿಂತಿಲ್ಲ ಎನ್ನುವುದು ಸಹ ಸತ್ಯವಾಗಿದೆ.[೬] **(ದು. ಸರಸ್ವತಿ ಮತ್ತು ಪ್ರೊ. ಆರ್.ಸುನಂದಮ್ಮ, ಮಹಿಳೆ-ಕಾನೂನು-ಪರಿಹಾರ, ೨೦೧೭)**

**ಪುನರ್ವಸತಿಯನ್ನು** ಅವಲೋಕಿಸಿದಾಗ ದೇವದಾಸಿ ಪದ್ಧತಿಯ ನಿಯಂತ್ರಣದ ಕಾರ್ಯಕ್ರಮಗಳು ಮತ್ತು ಸರ್ಕಾರದ ಕಲ್ಯಾಣ ಕಾರ್ಯಕ್ರಮಗಳನ್ನು ನೋಡಿದರೆ ಏನೇನು ಸಾಲದು. ಕರ್ನಾಟಕದಲ್ಲಿ 'ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು' ಎಂಬ ಐತಿಹಾಸಿಕ ಸಂಶೋಧನಾ ಅಧ್ಯಯನದಲ್ಲಿ ಸಾಮಾಜಿಕ ಸುಧಾರಣಾ ಕಾನೂನುಗಳು ಎಂಬ ಉಪ ಅಧ್ಯಾಯದಲ್ಲಿ ೧೯೦೯ರ ದೇವದಾಸಿ ನಿಷೇಧಾಜ್ಞೆ ಕಾನೂನು ಇದರಲ್ಲಿ ಮುಖ್ಯವಾದ ಸಾಮಾಜಿಕ ಪಿಡುಗಾಗಿರುವ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಲು ಮೊಟ್ಟಮೊದಲ ಕಾನೂನನ್ನು ನಾಲ್ವಡಿ ಕೃಷ್ಣರಾಜ ಒಡೆಯರ್ ಜಾರಿಗೆ ತಂದದ್ದು ಸಾಮಾಜಿಕ ಬೆಳವಣಿಗೆಯಾಗಿದೆ. ದೇವಾಲಯಗಳಲ್ಲಿ ದೇವದಾಸಿಯರ ನೇಮಕಕ್ಕೆ ಅನ್ವಯವಾಗುತ್ತಿದ್ದ ಸನಾತನಧರ್ಮದ ಉಚ್ಚ ಧ್ಯೇಯಗಳನ್ನು ಗಾಳಿಗೆ ತೂರಿ, ಅದಕ್ಕೆ ಬದಲು ಈ ಕೆಲಸವನ್ನು ಅನೈತಿಕ ವೃತ್ತಿಯಾಗಿ ಮಾರ್ಪಡಿಸಿ, ಅಮಾಯಕ ದೇವದಾಸಿಯರನ್ನು ತಮ್ಮ ತಮ್ಮ ಕಾಮದ ತೃಪ್ತಿಗಾಗಿ ಬೇಕಾಗಿದ್ದ ಭೋಗವಸ್ತುಗಳಾಗಿ ಬಳಸಿಕೊಳ್ಳುತ್ತಿದ್ದ

ಹೇಯಪದ್ಧತಿಯನ್ನು ಕೊನೆಗಾಣಿಸುವುದಕ್ಕಾಗಿ ಸರ್ಕಾರವು ೧೯೮೯ರಲ್ಲಿ ಸುತ್ತೋಲೆಯನ್ನು ಹೊರಡಿಸಿತು. ಈ ಕಾನೂನನ್ನು ಜಾರಿಗೆ ತಂದಿದ್ದರಿಂದ ಬ್ರಿಟಿಷರಿಂದ ಪ್ರಸಂಶೆಯು ಬಂತು. ಆದರೆ ಕರ್ನಾಟಕದಲ್ಲಿ ಇಲ್ಲಿಯವರೆಗೆ ಮೂರು ಕಾನೂನುಗಳು ಬಂದಿವೆ ಯಾದರೂ ಈ ಸಮುದಾಯಕ್ಕೆ ಯಾವುದೇ ಘನತೆ ತರುವ ಕೆಲಸವಾಗಿಲ್ಲವೆಂದೇ ಹೇಳಬಹುದು. ನಂತರ ೧೯೮೭ರಲ್ಲಿ ದೇವದಾಸಿಯರ ಅರ್ಪಣಾ ನಿಷೇಧದ ಕಾಯ್ದೆಯನ್ನು ಜಾರಿಗೆ ತಂದು ದೇವದಾಸಿ ಪುನರ್ವಸತಿ ಕಾರ್ಯಕ್ರಮವನ್ನು ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಡಿಯಲ್ಲಿ ಸೇರಿಸಲಾಯಿತು. ಅದರಲ್ಲಿ ೪೫ ವರ್ಷ ಮೇಲ್ಪಟ್ಟವರಿಗೆ ತಿಂಗಳ ಮಾಸಾಶನವು(ಈ ಅಧ್ಯಯನದ ಸಮಯದಿಂದ) ಪ್ರಾರಂಭದಲ್ಲಿ ರೂ. ೪೦೦ ಇತ್ತು. ಪ್ರಸ್ತುತದಲ್ಲಿ ೧೦೦೦ ನಂತರ ೧೫೦೦ಕ್ಕೆ ಹೆಚ್ಚಿಸಿದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೨೯೨೫ ಮಾಜಿ ದೇವದಾಸಿಯರಿಗೆ ಮಾತ್ರ ಮಾಸಾಶನ ದೊರೆಯುತ್ತಿದೆ. ಪ್ರಸ್ತುತದಲ್ಲಿ ಎರಡು ಸಮೀಕ್ಷೆಗಳ ಒಟ್ಟು ಸಂಖ್ಯೆ ೬೦೩೫. ಈ ಒಂದೇ ಜಿಲ್ಲೆಯಲ್ಲಿ ಮಾಜಿ ದೇವದಾಸಿಯರು ಇದ್ದಾರೆ ಮೊದಲು ೧೯೯೩-೯೪ರ ಸಮೀಕ್ಷೆಯಲ್ಲಿ ೧೦ ಜಿಲ್ಲೆಗಳಲ್ಲಿ ೨೨೮೭೩ ದೇವದಾಸಿಯರು ಮಾತ್ರ ಇದ್ದರು. ೨೦೧೦-೧೧ರಲ್ಲಿ ೧೪ ಜಿಲ್ಲೆಗಳಲ್ಲಿ ಈ ಪದ್ಧತಿ ಕಂಡುಬಂದಿದೆ. ಹಾಗೆಯೇ ೨೩೭೮೭ ದೇವದಾಸಿಯರು ಇದ್ದಾರೆ. ಪ್ರಸ್ತುತದಲ್ಲಿ ಒಟ್ಟು ೪೬೬೬೦ ದೇವದಾಸಿಯರು ಕರ್ನಾಟಕದ ರಾಜ್ಯದಲ್ಲಿ ಇದ್ದಾರೆ. ಇದು ಸರ್ಕಾರಿ ಲೆಕ್ಕ. ಆದರೆ ಸಂಘ ಸಂಸ್ಥೆಗಳು ನೀಡಿರುವ ಮತ್ತು ಹೇಳಿಕೆ ಕೊಟ್ಟಿರುವ ಪ್ರಕಾರ ವಿವಿಧ ರೀತಿಯ ಅಂಕಿಸಂಖ್ಯೆಗಳನ್ನು ನೊಡಬಹುದು. ವಸತಿ ಸೌಲಭ್ಯವು ಗ್ರಾಮಪಂಚಾಯಿತಿಯ ಮೂಲಕ ಅಗತ್ಯವಿರುವ ದೇವದಾಸಿಯರಿಗೆ ಆದ್ಯತೆಯ ಮೇರೆಗೆ ಆಯ್ಕೆ ಮಾಡುತ್ತಾರೆ. ಪ್ರಸ್ತುತ ರೂ. ೧೩೦೦೦೦ ಸಹಾಯದ ಮೊತ್ತ. ಆದರೆ ಇಲ್ಲಿ ಒಂದು ದ್ವಂದ್ವವು ಸಹ ಇದೆ. ಯಾರಿಗೆ ವಸತಿ ಭೂಮಿ ಇರುತ್ತದೋ ಅಂತಹವರಿಗೆ ಮಾತ್ರ ವಸತಿಯ ಸೌಲಭ್ಯವು ದೊರೆಯುತ್ತದೆ. ಭೂಮಿ ಇಲ್ಲದವರಿಗೆ ಯಾವುದೇ ಕಾರಣಕ್ಕೂ ಮನೆಯು ಸಿಗುತ್ತಿಲ್ಲವೆಂಬುದು ವಾಸ್ತವ. ಭೂಮಿಯಿಲ್ಲದವರಿಗೆ ಕೊಡುವ ಅವಕಾಶವಿದೆ. ಆದರೆ ಆ ಪ್ರಯತ್ನವು ಸಹ ಸರಿಯಾಗಿ ನೆರವೇರಿಲ್ಲ. ಹಾಗೆಯೇ ಸರ್ಕಾರಿ ಬ್ಯಾಂಕ್‌ಗಳಿಂದ ೨೦೦೦೦ ರೂ. ಸಾಲ ಸೌಲಭ್ಯವಿದೆ.[೬] **(ಶ್ರಿನಿವಾಸ ಗೌಡ, ಪ್ರ.ದ.ಸ, ಕರಾಮಅನಿ, ಬೆಂಗಳೂರು, ೨೦೧೫)** ಆದರೆ ಯಾವುದೇ ಬ್ಯಾಂಕುಗಳು ದೇವದಾಸಿಯರಿಗೆ ಸಾಲವನ್ನು ಕೊಡುತ್ತಿಲ್ಲ. ಆದರೆ ಮಧ್ಯವರ್ತಿಗಳ ಸಹಾಯದಿಂದ ಕೆಲವರು ಸಾಲವನ್ನು ಪಡೆದಿದ್ದಾರೆ. ಮತ್ತೆ ಕೆಲವರು ಬರೀ ಸಹಾಯಧನವನ್ನು ಮಾತ್ರ ತೆಗೆದುಕೊಂಡಿದ್ದಾರೆ. ಜಿಲ್ಲಾ ಕೇಂದ್ರದಲ್ಲಿ ಒಬ್ಬರು ಪುನರ್ವಸತಿ ಅಧಿಕಾರಿಗಳು ಇರುತ್ತಾರೆ. ಆದರೆ ಕೊಪ್ಪಳದಲ್ಲಿ ಸುಮಾರು ಮೂರು ವರ್ಷದಿಂದ ಯಾರೂ ಸಹ ನೇಮಕವಾಗಿಲ್ಲ. ಆದರೆ ಮಹಿಳೆ ಮತ್ತು ಮಕ್ಕಳ ಇಲಾಖೆಗೆ ಕಾರ್ಯಕ್ರಮದ ಜವಾಬ್ದಾರಿಯನ್ನು ವಹಿಸಿದ್ದಾರೆ. ಆದರೆ ಯಾವುದೇ ಕೆಲಸಗಳು ಪರಿಣಾಮಕಾರಿಯಾಗಿ ನಡೆದಿಲ್ಲ. ನಂತರ ಆರೋಗ್ಯ ತಪಾಸಣೆ, ಅರಿವು ಮೂಡಿಸುವು ದಕ್ಕೋಸ್ಕರ ಬೀದಿ ನಾಟಕ ಮುಂತಾದ ಕಾರ್ಯಕ್ರಮಗಳು ಮಾತ್ರ ನಡೆದಿವೆ. ಯಾವುದೇ ಹೊಸ ದೇವದಾಸಿಯ ಪ್ರಕರಣಗಳು ದಾಖಲಾಗಿಲ್ಲ. ನಂತರ ೨೦೦೯ರ ತಿದ್ದುಪಡಿ ಕಾಯ್ದೆಯಲ್ಲಿ ಇದರ ನಿಯಂತ್ರಣದ ಬಗ್ಗೆ ಒಲವು

ತೋರಿದ್ದಾರೆ. ಜಿಲ್ಲಾಡಳಿತ ಮತ್ತು ನ್ಯಾಯವ್ಯವಸ್ಥೆಯು ನೇರವಾದ ಕಾರಣವಾಗುವಂತೆ ಕಾನೂನು ಮಾಡಿದ್ದಾರೆ. ರಾಜ್ಯ ಕಚೇರಿಯಲ್ಲಿ ಅಂದರೆ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿ ಒಂದು ಟೇಬಲ್ ಮತ್ತು ಒಬ್ಬ ವ್ಯಕ್ತಿ ಅಂದರೆ ಪ್ರಥಮ ದರ್ಜೆ ಸಹಾಯಕ ಹುದ್ದೆಗೆ ಸಮಾನಂತರವಾಗಿ ಇರುವ ಅಧಿಕಾರಿ ಇದ್ದಾರೆ. ವಿಚಾರವೆಂದರೆ ೧೪ ಜಿಲ್ಲೆಗಳಲ್ಲಿ ಈ ಸಾಮಾಜಿಕ ಪಿಡುಗು ಇದೆ. ಆದರೆ ಇದಕ್ಕೆ ನೇರವಾಗಿ ಕೆಲಸ ಮಾಡುವ ಒಂದು ಪ್ರತ್ಯೇಕ ಕಚೇರಿ ಯಿಲ್ಲ ಮತ್ತು ಉನ್ನತ ಅಧಿಕಾರಿಗಳು ಇಲ್ಲ. ನಿಗಮದ ವ್ಯವಸ್ಥಾಪಕ ನಿರ್ದೇಶಕರು ಸಹ ಹೆಚ್ಚು ಗಮನ ಹರಿಸಿಲ್ಲ. ಇಲ್ಲಿಯವರಗೆ ದೇವದಾಸಿಯಿರುವ ಜಿಲ್ಲೆಗಳಲ್ಲಿ ಸ್ವಯಂ ಸೇವಕರು ಇರುತ್ತಿದ್ದರು. ಅದನ್ನು ಸಹ ಸರ್ಕಾರವು ವಾಪಸ್ ಪಡೆದಿದೆ. ಹೀಗೆ ಬರೀ ತಿಂಗಳ ಮಾಸಾಶನ, ವಸತಿ ಸೌಲಭ್ಯ, ಸಾಲಸೌಲಭ್ಯ ಮತ್ತು ಕೆಲವರಿಗೆ ಭೂಮಿ ಒಡೆತನದ ಸೌಲಭ್ಯ ದೊರೆತಿದೆ. ಇದಕ್ಕೆ ಕೆಲವು ವೈಫಲ್ಯಗಳನ್ನು ಸಹ ಸೂಕ್ಷ್ಮವಾಗಿ ಗಮನಿಸಬಹುದು. ಅಂದರೆ ಪುನರ್ವಸತಿ ಯಾವುದೇ ರೀತಿಯ ಸಮಗ್ರ ಬದಲಾವಣೆ ತಂದಿಲ್ಲ. ದೇವದಾಸಿಯರ ಮಕ್ಕಳನ್ನು ಎಲ್ಲಿಯೂ ಸಹ ಕಾಯ್ದೆ ಮತ್ತು ಪುನರ್ವಸತಿ ಯೋಜನೆಯಾಗಲೀ ಒಳಗೊಂಡಿಲ್ಲ. ಯಾವುದೇ ರೀತಿಯಲ್ಲೂ ಸಹ ವಿವಾಹದಂತಹ ಪರಿಹಾರವು ಕೂಡ ಫಲಕಾರಿಯಾಗಿಲ್ಲ. ಅರಿವು ಮತ್ತು ಅವಮಾನಗಳು ಸಹ ಬೇರೆ ಬೇರೆ ರೀತಿಯ ಸ್ವರೂಪಗಳನ್ನು ಪಡೆದುಕೊಂಡಿದೆ. ಆರೋಗ್ಯವನ್ನು ಗಮನಿಸಿದರೆ ತುಂಬಾ ಗಂಭೀರವಾದ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬಂದಿದೆ. ಅದಕ್ಕೆ ಕೂಡ ಯಾವುದೇ ಸೂಕ್ತ ಪರಿಹಾರವಿಲ್ಲ. ನಂತರ ಕಾಯ್ದೆ ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ ಎನ್ನುವುದಕ್ಕೆ ಕೆಲವು ಮೂಲಭೂತ ಸಾಮಾಜಿಕ ಅಡೆತಡೆಗಳಿವೆ ಎನ್ನಿಸುತ್ತದೆ ಅಂದರೆ ಪ್ರಸ್ತುತದಲ್ಲಿ ಜಾತಿ, ಲಿಂಗ(ಸಾಮಾಜಿಕ ಲಿಂಗ) ಧರ್ಮಕ್ಕೆ ಅಂಟಿರುವ ಸಾಮಾಜಿಕ ಪರವಾನಿಗೆ ಪಡೆದುಕೊಂಡಂತಹ ಲೈಂಗಿಕತೆ ಪದ್ಧತಿಗಳು ಪ್ರಮುಖವಾಗಿ ಕಾರಣ ಅಥವಾ ಅಡೆತಡೆಗಳಿರಬಹುದು.

**೨. ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ದೌರ್ಜನ್ಯ ವಿರೋಧಿ ತಿದ್ದುಪಡಿ ಕಾಯ್ದೆ ೨೦೧೩:** ಈ ಕಾಯ್ದೆಯು ಇಲ್ಲಿಯವರೆಗೆ ಬರೀ ದಲಿತರ ಹಕ್ಕು ಮತ್ತು ಇತರೆ ರೀತಿಯ ದೌರ್ಜನ್ಯವಾದರೆ ಅದಕ್ಕೆ ನ್ಯಾಯಯುತವಾಗಿ ಹೋರಾಡಲು ಒಂದು ಪ್ರಬಲ ಅಸ್ತ್ರವನ್ನು ೧೯೫೫ರಿಂದ ೧೯೮೯ರವರೆಗೆ ನಂತರ ೨೦೧೩ರ ತಿದ್ದುಪಡಿಯವರೆಗೆ ಕಾಣಬಹುದು. ಈ ತಿದ್ದುಪಡಿ ಕಾಯ್ದೆಯ ಪ್ರಾಮುಖ್ಯತೆ ಏನೆಂದರೆ ದೇವದಾಸಿ ಪದ್ಧತಿಗೆ ಒಳಗಾದರೆ ಅವರಿಗೆ ನ್ಯಾಯವನ್ನು ಪಡೆಯಲು ಈ ಕಾಯ್ದೆಯು ಸಹ ಸಹಕಾರಿಯಾಗಬಲ್ಲದು. ಅಂದರೆ ೩(೧)ಕೆ ಉಪ ಸೆಕ್ಷನ್ ಪ್ರಕಾರ ಯಾವುದೇ ರೀತಿಯ ದೇವರ ಹೆಸರಿನಲ್ಲಿ ಶೋಷಣೆ ಮಾಡುತ್ತಾ ಅರ್ಪಿಸುವ ಇನ್ನಾವುದೇ ರೀತಿಯ ಧಾರ್ಮಿಕತೆಯ ಮೂಲಕ ಪ್ರೇರಣೆ ನೀಡಿ ದೇವದಾಸಿ ಪದ್ಧತಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಭಾಗಿಯಾದರೆ ಜಾಮೀನುರಹಿತ ಅಪರಾಧವಾಗುತ್ತದೆ. ಈ ಕಾಯ್ದೆಯು ತುಂಬಾ ದೊಡ್ಡ ಶಕ್ತಿಯನ್ನು ಕೊಡುವುದರಲ್ಲಿ ಅನುಮಾನವಿಲ್ಲ. ಆದರೆ ಇಂತಹ ಕಾಯ್ದೆಯನ್ನು ಅನುಷ್ಠಾನ ಮಾಡುವ ಮನಸ್ಸುಗಳು ಸಿದ್ಧವಾಗಿರಬೇಕು

ಮತ್ತು ಕರ್ನಾಟಕದ ಕೊಪ್ಪಳ ಜಿಲ್ಲೆಯಲ್ಲಿ ಇಂತಹ ಕಾಯ್ದೆಯಡಿ ಯಾವುದೇ ಪ್ರಕರಣಗಳು ಇಲ್ಲಿಯವರೆಗೂ ಕಂಡುಬಂದಿಲ್ಲದಿರುವುದು ಈ ಸಮುದಾಯದ ದುರ್ದೈವ. ಆದರೆ ಇದು ರಾಷ್ಟ್ರವ್ಯಾಪಿಯಾಗಿರುವುದರಿಂದ ಇತರೆ ರಾಜ್ಯಗಳಲ್ಲಿ ಕಾನೂನು ಹೋರಾಟವನ್ನು ಮುಂದುವರಿಸಿ ಈ ಪದ್ಧತಿಯನ್ನು ಸಂಪೂರ್ಣ ನಿಯಂತ್ರಿಸಬಹುದು.[೯] **(ಎಸ್.ಸಿ./ಎಸ್.ಟಿ. ತಿದ್ದುಪಡಿ ಕಾಯ್ದೆ ೨೦೧೩, ಗೆಝೆಟ್, ನವದೆಹಲಿ, ೨೦೧೪)**

೩. **ಕರ್ನಾಟಕ ದೇವದಾಸಿ ನಿರ್ಮೂಲನೆ, ಪುನರ್ವಸತಿ ಸಮಗ್ರ ನೀತಿ ೨೦೧೮:** ಇತ್ತೀಚೆಗೆ ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು ಇವರು ಹೊರತಂದಿರುವ ಕರ್ನಾಟಕ ದೇವದಾಸಿ ನಿರ್ಮೂಲನೆ, ಪುನರ್ವಸತಿ ಸಮಗ್ರ ನೀತಿ(ಬಿಲ್ಲು) ೨೦೧೮ ದೇವದಾಸಿಯರ ಹಕ್ಕು ಮತ್ತು ನಿಷೇಧದ ಪರವಾಗಿ ಮತ್ತು ಅವರ ಸಮಗ್ರ ಪುನರ್ವಸತಿಯನ್ನು ತಮ್ಮ ಮಕ್ಕಳಿಗೂ ವಿಸ್ತರಿಸುವುದರ ಮೂಲಕ ತಮ್ಮ ತಂದೆಯ ಆಸ್ತಿಯಲ್ಲಿ ಪಾಲು ಕೇಳುವಂತಹ ಹಕ್ಕನ್ನು ಪ್ರತಿಪಾದಿಸುವ ಪ್ರಕ್ರಿಯೆಯಾಗಿದೆ ಹಾಗೆಯೇ ಸರ್ಕಾರವು ಸಹ ಸಂಬಂಧಪಟ್ಟ ಇಲಾಖೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಕೊಳ್ಳುವುದು, ಪುನರ್ವಸತಿ ಅಧಿಕಾರಿಗಳನ್ನು ತಾಲ್ಲೂಕು ಮತ್ತು ಜಿಲ್ಲಾ ಹಂತಗಳಲ್ಲಿ ನೇಮಿಸುವ ಅಂಶವನ್ನು ಒತ್ತಿ ಹೇಳಿದ್ದಾರೆ. ತಾಲ್ಲೂಕು ಸಮಿತಿ ಮತ್ತು ಜಿಲ್ಲಾ ಹಂತದ ಸಮಿತಿಗಳು ಈ ಪದ್ಧತಿಯ ವಿರುದ್ಧ ಕೆಲಸ ಮಾಡಬೇಕು. ಹಿಂದೆ ಇದ್ದ ಕೆಲವು ಯೋಜನೆಗಳನ್ನು ಮುಂದುವರಿಸುವಂತೆ ಕೆಲವು ಅಧುನಿಕ ರೀತಿಯಲ್ಲಿ ಪುನರ್ವಸತಿ ಆಗಬೇಕು ಎಂದು ಚರ್ಚಿಸಿದ್ದಾರೆ. ಈ ಕಾಯ್ದೆ ಅನುಷ್ಠಾನವಾದರೆ ದೇವದಾಸಿಯರಿಗೆ ಒಂದು ಹಂತದಲ್ಲಿ ಪುನರ್ಜನ್ಮ ಬಂದ ಹಾಗೆ ಅಗುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ.[೯] **(ಕರ್ನಾಟಕ ದೇವದಾಸಿ ನಿರ್ಮೂಲನೆ, ಪುನರ್ವಸತಿ ಸಮಗ್ರ ನೀತಿ ೨೦೧೮)**

ದಿನಾಂಕ ೧೫ ಮತ್ತು ೧೬, ಜನವರಿ, ೨೦೧೩ರಂದು ನಡೆದ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ರಾಷ್ಟ್ರಮಟ್ಟದ ದುಂಡುಮೇಜಿನ ಸಮಾವೇಶವು ಬೆಂಗಳೂರಿನಲ್ಲಿ ನಡೆಯಿತು. ಈ ಸಮಾವೇಶದಲ್ಲಿ ದೇವದಾಸಿಯರು ಕರ್ನಾಟಕ, ಆಂಧ್ರ, ತಮಿಳುನಾಡು ಹಾಗೂ ಮಹಾರಾಷ್ಟ್ರ ಗಳಿಂದ, ರಾಷ್ಟ್ರಮಟ್ಟದ ಸಂಘ ಸಂಸ್ಥೆಗಳ ಕಾರ್ಯಕರ್ತರು, ವಿಶ್ವವಿದ್ಯಾಲಯಗಳ ಅಧ್ಯಾಪಕರು ಮತ್ತು ಸಂಶೋಧಕರು, ಸಂಬಂಧಪಟ್ಟ ಅಧಿಕಾರಿಗಳು ಮತ್ತು ಮಾಧ್ಯಮದವರು ಭಾಗವಹಿಸಿದ್ದರು. ಇದರ ಒಟ್ಟಾರೆ ಸಾರಾಂಶವು ಹೀಗಿದೆ. ದೇವದಾಸಿ ಪದ್ಧತಿಯು ಇಂದಿನ ಅಧುನಿಕ ಸಮಾಜದಲ್ಲೂ ಕಂಡುಬರುತ್ತಿದೆ. ಇದೊಂದು ಧಾರ್ಮಿಕತೆಯ ಹೆಸರಿನಲ್ಲಿ ನಡೆಯುವ ಲೈಂಗಿಕ ಗುಲಾಮಗಿರಿತನ ವಾಗಿದೆಯೆಂದು ಡಾ. ರೂತ್ ಮನೋರಮ ಅವರು ಟೀಕಿಸಿದರು. ಸಂಶೋಧಕರು ದೇವದಾಸಿ ಪದ್ಧತಿಯ ಉಗಮ ಮತ್ತು ಅದರ ಬೆಳವಣಿಗೆಯ ಪರಿಕಲ್ಪನೆಯನ್ನು ಹಂಚಿಕೊಂಡರು. ಜ್ಯೋತಿರಾಜ್ ದೇವದಾಸಿ ಪದ್ಧತಿ ದಲಿತರಲ್ಲಿ ಮಾತ್ರ ಇದೆ ಸರ್ಕಾರದಲ್ಲಿ ಇವರಿಗೆ ಭೂಮಿಯನ್ನು ಕೊಡಬೇಕೆಂದು ಕಾನೂನಿದೆ. ಆದರೆ ಸರಿಯಾಗಿ ಯಾವುದೇ ಯೋಜನೆಗಳು ತಲುಪುತ್ತಿಲ್ಲ. ಆಂಧ್ರಪ್ರದೇಶದ

ನಿರ್ಮಲ ಗ್ರೇಸ ಅವರು ಇನ್ನೂ ಸಹ ಈ ಪದ್ಧತಿ ಜೀವಂತವಾಗಿದೆ. ಇದರ ನಿರ್ಮೂಲನೆಯ ಕಾಯ್ದೆಯನ್ನು ಸರಿಯಾಗಿ ಬಳಸುವ ಅಧಿಕಾರಿಗಳು ಮತ್ತು ಸರ್ಕಾರವು ಸಹ ಗಮನ ಹರಿಸುತ್ತಿಲ್ಲ ಎಂದು ತಮ್ಮ ಅನುಭವವನ್ನು ಹಂಚಿಕೊಂಡರು. ಮುಖ್ಯವಾಗಿ ದೇವದಾಸಿಯರು ತಮ್ಮ ವಾಸ್ತವ ಸಮಸ್ಯೆಗಳನ್ನು ಸಮಾವೇಶದಲ್ಲಿ ಹಂಚಿಕೊಂಡರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಈಗಲೂ ಸಹ ಈ ಪದ್ಧತಿಯು ನಡೆಯುತ್ತಿದೆ. ಹಿರಿಯ ದೇವದಾಸಿಯರಿಗೂ ಸಹ ಸರಿಯಾಗಿ ಸೌಲಭ್ಯಗಳು ಸಹ ಸಿಕ್ಕಿಲ್ಲ, ಕರ್ನಾಟಕದ ಬಾಗಲಕೋಟೆ ಜಿಲ್ಲೆಯಲ್ಲಿ ದಲಿತ ಯುವತಿಯರು ಈ ಪದ್ಧತಿಗೆ ತುತ್ತಾಗುತ್ತಿದ್ದಾರೆ. ಸರ್ಕಾರಿ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಗಳಿಗೆ ಲಂಚವನ್ನು ಕೊಡಬೇಕು. ತಮ್ಮ ಮಕ್ಕಳು ಸರಿಯಾಗಿ ಶಾಲೆಗೆ ಹೋಗುತ್ತಿಲ್ಲ. ಶಾಲೆಯಲ್ಲೂ ಸಹ ಸರಿಯಾಗಿ ತಮ್ಮ ಮಕ್ಕಳ ಬಗ್ಗೆ ಗಮನ ಹರಿಸುವುದಿಲ್ಲ. ಹೀಗೆ ತಮ್ಮ ಸಮಸ್ಯೆಗಳನ್ನು ಹಂಚಿಕೊಂಡರು. ಅಧಿಕಾರಿಗಳು ವಿಶೇಷವಾಗಿ ಕರ್ನಾಟಕದಲ್ಲಿ ಇರುವ ಸೌಲಭ್ಯಗಳನ್ನು ವಿವರಿಸಿದರು. ಅದರಲ್ಲಿ ೪೦೦ ಮಾಸಾಶನ, ಮನೆ ಸೌಲಭ್ಯ ಅದು ತಮ್ಮ ಹೆಸರಿನಲ್ಲಿದ್ದರೆ, ಸಾಲ ಸೌಲಭ್ಯ ಅದು ಬ್ಯಾಂಕ್ ಒಪ್ಪಿದರೆ, ಭೂ ಒಡೆತನ ಮತ್ತು ನಿರ್ಮೂಲನೆಗಾಗಿ ಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಇತ್ಯಾದಿಗಳನ್ನು ವಿವರಿಸಿದರು. ಇದರ ಒಟ್ಟಾರೆ ವಿಶ್ಲೇಷಣೆಯೆಂದರೆ ಈ ಪದ್ಧತಿ ಇನ್ನೂ ಇದೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯು ತುಂಬಾ ಹದಗೆಟ್ಟಿದೆ. ಪ್ರತಿನಿತ್ಯ ಅವರ ಮೇಲೆ ಜಾತಿ ಮತ್ತು ಲೈಂಗಿಕ ಶೋಷಣೆ ನಡೆಯುತ್ತಿರುತ್ತದೆ. ಕೊನೆಯಲ್ಲಿ ಇದರ ನಿರ್ಮೂಲನೆಗೆ ಮತ್ತು ಈಗಿರುವ ದೇವದಾಸಿಯರಿಗೆ ಪುನರ್ವಸತಿಯನ್ನು ಪರಿಣಾಮಕಾರಿಯಾಗಿ ಒದಗಿಸಲು ಸರ್ಕಾರದ ಮೇಲೆ ಒತ್ತಡ ತರುವುದರ ಮೂಲಕ ಕೆಲವು ನಿರ್ಣಯಗಳನ್ನು ಸಭೆಯಲ್ಲಿ ತೆಗೆದುಕೊಂಡರು. ಅವುಗಳೆಂದರೆ ಕಾಯ್ದೆಯ ಪರಿಣಾಮಕಾರಿ ಬಳಕೆ, ಸೌಲಭ್ಯಗಳನ್ನು ಎಲ್ಲ ದೇವದಾಸಿಯರಿಗೂ ಸಿಗುವಂತೆ ಮಾಡುವುದು, ಮಕ್ಕಳಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸುವುದು ಹೀಗೆ ಇನ್ನೂ ಮುಂತಾದ ಬೇಡಿಕೆಗಳನ್ನು ಪಟ್ಟಿ ಮಾಡಿ ಆಯಾ ಜಿಲ್ಲೆಯ ಅಧಿಕಾರಿಗಳ ಮೂಲಕ ಸರ್ಕಾರಕ್ಕೆ ತಲುಪಿಸುವಂತೆ ತೀರ್ಮಾನ ತೆಗೆದುಕೊಳ್ಳಲಾಯಿತು. ದಿನಾಂಕ ೨೪-೨೫ ನವಂಬರ್ ೨೦೧೫ರಂದು ಬೆಂಗಳೂರಿನಲ್ಲಿ ೩೦ ದೇವದಾಸಿಯರನ್ನು ಗುಂಪುಚರ್ಚೆಗೆ ಒಳಪಡಿಸಲಾಯಿತು. ಇದರ ಒಟ್ಟು ಸಾರಾಂಶವೆಂದರೆ ಹೆಚ್ಚಿನ ದೇವದಾಸಿಯರು ಹೇಳಿದ ಪ್ರಕಾರ "ನಮಗೆ ಯಾವುದೇ ರೀತಿಯ ಸ್ವ-ಗೌರವವಿರುವ ಅಸ್ಮಿತೆಗಳೇ ಇಲ್ಲ. ನಮ್ಮನ್ನು ಎಲ್ಲಾ ರೀತಿಯಲ್ಲೂ ತುಚ್ಛವಾಗಿ ಸಾಮಾಜಿಕವಾಗಿ ಕಡೆಗಾಣಿಸಿದ್ದಾರೆ. ನಮ್ಮ ಮಾನಸಿಕ ಸ್ಥಿತಿಯು ಆತಂಕದಲ್ಲಿ ಮತ್ತು ನಮ್ಮ ಮಕ್ಕಳ ಭದ್ರತೆಗೆ ಯಾವುದೇ ಆಧಾರವಿಲ್ಲದೇ ನಿಕೃಷ್ಟವಾಗಿ ಜೀವನವನ್ನು ಕಳೆಯುವಂತಾಗಿದೆ. ಸರ್ಕಾರದ ಯಾವುದೇ ಕಾನೂನುಗಳು ಈ ಪದ್ಧತಿಯ ನಿರ್ಮೂಲನೆಯ ಬಗ್ಗೆಯಾಗಲಿ ಅಥವಾ ಮಾಜಿ ದೇವದಾಸಿಯರಿಗೆ ಯಾವುದೇ ರೀತಿಯ ಸುಸ್ಥಿರವಾದಂತಹ ನೆಲೆಯನ್ನಾಗಲಿ ಕಲ್ಪಿಸಿಕೊಡುವಲ್ಲಿ ಸಂಪೂರ್ಣವಾಗಿ ಸೋತಿದೆ. ನಿರ್ಮೂಲನೆಯ ಕಾಯ್ದೆಯ ನಂತರವೂ ಸಹ ಸಾವಿರಾರು ಹೊಸ ದೇವದಾಸಿಯ ರಾಗಿದ್ದಾರೆ. ಪ್ರಾದೇಶಿಕವಾಗಿ ವಿಭಿನ್ನ ರೀತಿಯ ಆಚರಣೆಗಳನ್ನು ಮಾಡಿ ಅಲ್ಲಲ್ಲಿ ಸಮರ್ಪಣೆಗಳು ನಡೆಯುತ್ತಿವೆ.

ಒಟ್ಟಿನಲ್ಲಿ ಈ ಪದ್ಧತಿಯ ಬಗ್ಗೆ ತೀವ್ರ ಆಕ್ರೋಶ ವ್ಯಕ್ತಪಡಿಸಿದರು.

**೫.೪. ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಸಂಬಂಧಿಸಿದಂತೆ ಇರುವ ಸಂಘಟನೆಗಳ ಕಾರ್ಯವೈಖರಿ:** ದೇವದಾಸಿ ಸಂಘಟನೆ(ಜಿಲ್ಲಾ ದೇವದಾಸಿ ಪುನರ್ವಸತಿ ಕಾರ್ಯಕ್ರಮದಡಿಯಲ್ಲಿ) ದೇವದಾಸಿ ಸ್ವಯಂ ಸೇವಕರು ಸಂಘಗಳನ್ನು ಮಾಡಿದ್ದಾರೆ. ದೇವದಾಸಿ ವಿಮೋಚನಾ ವೇದಿಕೆ ಹಳ್ಳಿಗಳಲ್ಲಿ ಕೆಲವು ದಲಿತ ಕಾರ್ಯಕರ್ತರು ಮತ್ತು ಮಾಧ್ಯಮದವರು ಬರುತ್ತಿರುತ್ತಾರೆ. ಸರ್ಕಾರೇತರ ಸಂಘ ಸಂಸ್ಥೆಗಳು(ಎನ್.ಜಿ.ಒ.ಗಳು) ಸಹ ಈ ಭಾಗಗಳಲ್ಲಿ ಕೆಲಸ ಮಾಡುತ್ತಿವೆ. ಸಂರಕ್ಷ, ಸುರಕ್ಷ, ವಿಸ್ತಾರ, ಸಮೂಹ, ಸಮತ ಮತ್ತು ಯುನಿಸೆಫ್, ಕರ್ನಾಟಕ ರಾಜ್ಯ ಮುಕ್ತಾ ದೇವದಾಸಿ ಮತ್ತು ಮಕ್ಕಳ ಒಕ್ಕೂಟ ಮತ್ತು ಕರ್ನಾಟಕ ಹಂತದಲ್ಲಿ ವಿಮೋಚನಾ, ಮಾಸ್-ಬೆಳಗಾವಿ ಜಾಗೃತ ಮಹಿಳಾ ಸಂಘಟನೆ-ರಾಯಚೂರು, ಸಖಿ-ಹೊಸಪೇಟೆ, ನವಜೀವನ ಮಹಿಳಾ ಒಕ್ಕೂಟ-ರಾಯಚೂರು ಹೀಗೆ ಇನ್ನೂ ಹಲವು ಮುಂತಾದವುಗಳು ಕೆಲವು ಹಳ್ಳಿಗಳಲ್ಲಿ ದೇವದಾಸಿಯರ ಬಗ್ಗೆ ಕೆಲಸ ಮಾಡುತ್ತಿವೆ. ಆದರೆ ಇವು ಯಾವೊಂದು ಸಹ ಅವರ ಹಕ್ಕು ಮತ್ತು ಅಭಿವೃದ್ಧಿಯ ಪರವಾಗಿ ಒತ್ತುಕೊಟ್ಟಿಲ್ಲ. ಬರೀ ಅವರ ಅಜೆಂಡಾಗಳನ್ನು ಅನುಷ್ಠಾನಗೊಳಿಸಲು ಒಂದು ಕಾರ್ಯಕ್ರಮವಾಗಿ ಬರುತ್ತಾರೆ ಮತ್ತು ನಮ್ಮೊಂದಿಗೆ ನಿರಂತರವಾಗಿ ನಿಲ್ಲುವುದಿಲ್ಲ. ಸರ್ಕಾರವೇ ನಮ್ಮನ್ನು ನಿರ್ಲಕ್ಷ್ಯತನದಿಂದ ನೋಡುವುದರಿಂದ ಬೇರೆ ಯಾರು ಏನು ಮಾಡಿಯಾರು? ಎಂಬ ಪ್ರಶ್ನೆಗಳನ್ನು ಹಾಕಿದ್ದಾರೆ. ಈ ಎಲ್ಲ ವಿಚಾರಗಳು ಗಮನಕೇಂದ್ರಿತ ಗುಂಪಿನ ಚರ್ಚೆಗಳಲ್ಲಿ ಚರ್ಚೆಯಾಗಿವೆ. ಪ್ರಶ್ನಾವಳಿಯ ಸಂದರ್ಶನಗಳಲ್ಲಿಯೂ ಸಹ ಕಂಡುಬಂದಿದೆ. ಹಾಗೆಯೇ ಸಂಘ ಸಂಸ್ಥೆ ಮತ್ತು ಸಂಘಟನೆಗಳ ಕೆಲಸದ ಸ್ವರೂಪವು ಸಹ ಸುಸ್ಥಿರತೆಯನ್ನು ಕಾಯ್ದಿಡಲು ಸಾಧ್ಯ ವಾಗುವುದಿಲ್ಲ. ಏಕೆಂದರೆ ಕಾರ್ಯಕ್ರಮಗಳು ಕೇವಲ ಬೀದಿ ನಾಟಕ, ಜನಜಾಗೃತಿಯನ್ನು ಮೂಡಿಸುತ್ತಿವೆ. ಆದರೆ ಕಾನೂನಾತ್ಮಕವಾಗಿ ಕೆಲಸ ಮಾಡುತ್ತಿಲ್ಲ. ಸರ್ಕಾರಿ ಸೌಲಭ್ಯಗಳನ್ನು ಒದಗಿಸುತ್ತಿವೆ. ಆದರೆ ಸಂಪೂರ್ಣ ನಿರ್ಮೂಲನೆಗಾಗಿ ಕೆಲಸಗಳು ಆಗಿಲ್ಲ. ಹೀಗೆ ಸುಮಾರು ವಿಚಾರಗಳು ಚರ್ಚೆಗೆ ಬಂದಿವೆ ಮತ್ತು ಅಧ್ಯಯನ ಸಮೀಕ್ಷೆಯಲ್ಲಿ ಇನ್ನೂ ಹಲವಾರು ವಿಚಾರಗಳನ್ನು ಚರ್ಚೆ ಮಾಡಲಾಗಿದೆ.

**೫.೫. ಮುಕ್ತಾಯ**

ಈ ಪದ್ಧತಿ ಮೂಢನಂಬಿಕೆ, ಲೈಂಗಿಕತೆ, ಜಾತಿತಾರತಮ್ಯ, ಲಿಂಗ ಅಸಮಾನತೆ, ಆರ್ಥಿಕ ಅಸ್ಥಿರತೆ, ಹಿಂದಿನ ಕಾಲದ ಮತ್ತು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪಾಲಿಸಬೇಕಾದ ಕೆಲವು ಲೋಕ ರೂಢಿಗಳು, ತಂದೆ-ತಾಯಿಯರನ್ನು ಕೊನೆಯವರೆಗೂ ಸಾಕುವ ಪ್ರಾಮಾಣಿಕ ಜವಾಬ್ದಾರಿಯ ಭಾಗವಾಗಿ ಈ ದೇವದಾಸಿ ಪದ್ಧತಿ ಮುಂದುವರಿಯುತ್ತಾ ಬಂದಿದೆ. ಮೇಲಿನ ಎಲ್ಲಾ ರೀತಿಯ ಅಸಮಾನತೆಗಳಿಗೂ ಒಂದಕ್ಕೊಂದು ಸಹಜವಾದ ಸಂಪರ್ಕದ ಕೊಂಡಿಗಳಿವೆ. ಆದ್ದರಿಂದ ದೇವದಾಸಿ ಯರು ಜಾತಿಯಲ್ಲಿ ಕೀಳು, ಬಡವರು, ಮಹಿಳೆಯರು ಹಾಗೆಯೇ ತಮ್ಮ ಸ್ವಂತ ಸಮುದಾಯಗಳಲ್ಲೇ ಸಮಾನತೆಯಿಲ್ಲದಿರುವುದು ಹೀಗೆ ಹೇಳುತ್ತಾ ಹೋದರೆ ಇನ್ನೂ ಪಟ್ಟಿ ಬೆಳೆಯುತ್ತದೆ. ದೇವದಾಸಿ

ಪದ್ಧತಿಯ ನಿಷೇಧದ ಕಾಯ್ದೆಯಿಂದ ಯಾವ ಪರಿಣಾಮಕಾರಿ ಕೆಲಸಗಳು ಮತ್ತು ನಿಯಂತ್ರಿಸುವ ಪ್ರಕ್ರಿಯೆಗಳು ಪೂರ್ಣಪ್ರಮಾಣದಲ್ಲಿ ನಡೆದಿಲ್ಲ ಎಂದೇ ಹೇಳಬಹುದು. ಮತ್ತು ಅದನ್ನು ಅನುಷ್ಠಾನ ಮಾಡುವವರ ಮನಸ್ಸು ಬದಲಾವಣೆಯಾಗಬೇಕು ಮತ್ತು ಅದಕ್ಕೆ ಕಾನೂನಿನ ಚೌಕಟ್ಟಿನಲ್ಲಿ ಶಿಸ್ತಿನ ಕ್ರಮಕೈಗೊಳ್ಳಬೇಕಿತ್ತು ಆದರೆ ಅದು ಯಾವುದು ಸಹ ಆಗಿಲ್ಲ. ಇಲ್ಲಿಯವರೆಗಿನ ಪುನರ್ವಸತಿಯು ಕೇವಲ ತಾತ್ಕಾಲಿಕ ನೆರವನ್ನು ಕೊಟ್ಟಿರುವುದಷ್ಟೆ ಎನಿಸುತ್ತದೆ. ಅಂದರೆ ಪುನರ್ವಸತಿಯ ವ್ಯಾಖ್ಯಾನವನ್ನು ಇಲಾಖೆಗೆ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ ಅರುವು ಮೂಡಿಸುವ ಮತ್ತು ಅವರನ್ನು ಈ ಕಾಯ್ದೆಯ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಂತೆ ಎಚ್ಚರಿಕೆ ನೀಡಬೇಕಾದೆ. ಆದ್ದರಿಂದ ದೇವದಾಸಿಯರ ಸರ್ವತೋಮುಖ ಬೆಳವಣಿಗೆಗೆ ಸಮಗ್ರ ಮತ್ತು ವೈಜ್ಞಾನಿಕವಾಗಿ ಈ ಪದ್ಧತಿಯ ವಿರುದ್ಧ ಮತ್ತು ಈಗಿರುವ ದೇವದಾಸಿಯರಿಗೆ ಎಲ್ಲ ವಯಸ್ಸಿನವರನ್ನು ಒಳಗೊಂಡಂತೆ ಶಾಶ್ವತ ಪರಿಹಾರೋಪಾಯಗಳನ್ನು ಸುಗಮಗೊಳಿಸುವುದರ ಮೂಲಕ ಸಂವಿಧಾನದ ಆಶಯ ಮತ್ತು ಮೌಲ್ಯಗಳನ್ನು ಆಳವಡಿಸಿಕೊಂಡು ತರ್ಕಬದ್ಧವಾದ ಮತ್ತು ಪ್ರಾಮಾಣಿಕವಾದ ಪ್ರಯತ್ನಗಳು ಆಗಬೇಕು. ಆದರೆ ಕರ್ನಾಟಕ ರಾಜ್ಯದಲ್ಲಿ ಕನಿಷ್ಟ ಪ್ರಮಾಣದ ಕೆಲಸಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳು ಇವೆ. ಆದರೆ ಇತರೆ ರಾಜ್ಯಗಳಲ್ಲಿ ಇಷ್ಟು ಸೌಲಭ್ಯಗಳು ದೊರೆಯುತ್ತಿಲ್ಲ ಅನ್ನುವುದು ಒಂದು ನಮ್ಮ ರಾಜ್ಯವನ್ನು ಪ್ರಸಂಶಿಸುವ ಒಂದು ಅಂಶವಾಗಿದೆ. ಅದು ಏನೇ ಇರಲಿ ಇಂತಹ ಸಾಮಾಜಿಕ, ಅನಿಷ್ಟ ಪದ್ಧತಿಯ ವಿರುದ್ದ ನಾಗರೀಕ ಸಮಾಜ ಬದ್ಧವಾಗಿರಬೇಕು ಮತ್ತು ಪ್ರಭುತ್ವವನ್ನು ಎಚ್ಚರಿಕೆಯಿಂದ ಕೆಲಸ ನಿರ್ವಹಿಸಲು ಪರೋಕ್ಷವಾಗಿ ಬೆಂಬಲಿಸಬೇಕು ಮತ್ತು ಇದಕ್ಕೆ ಪ್ರಭುತ್ವ, ಮಹಿಳಾ ಸಂಘಟನೆ, ದಲಿತ ಸಂಘಟನೆಗಳು, ಕಾನೂನುತಜ್ಞರು, ಸರ್ಕಾರೇತರ ಸಂಘ ಸಂಸ್ಥೆಗಳು ಮತ್ತು ಸಮಾನ ಮನಸ್ಕರು ಸಂಪೂರ್ಣವಾಗಿ ಈ ಪದ್ಧತಿಯ ನಾಶದ ನಾಂದಿಗೆ ಕೈಜೋಡಿಸಬೇಕಿದೆ.

**ಕೊನೆಟಿಪ್ಪಣಿಗಳು**

೧. ಕಮಲಾ ಹಂಪನಾ, ೨೦೦೩, ದೇವದಾಸಿ–ಧರ್ಮ–ದೇವರು, ಮಹಿಳೆ ಸುತ್ತಮುತ್ತ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೨. ಚಿನ್ನಸ್ವಾಮಿ ಸೊಸಲೆ, (ಸಂ) ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಸಮಕಾಲೀನ ದಲಿತರು, ಮಲ್ಲಿಕಾ ಘಂಟಿಯವರ, ೨೦೧೦, "ಅಂಬೇಡ್ಕರ್ ಮತ್ತು ಮಹಿಳೆ," ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಮಂಗ್ಳೂರ ವಿಜಯ (ಸಂಗ್ರಹ), ೨೦೧೦, ನಮ್ಮ ಸಂವಿಧಾನ (ಅತಿ ಸಂಕ್ಷಿಪ್ತದಲ್ಲಿ), ಸಂಬುದ್ಧ ಪ್ರಕಾಶನ, ಬೆಂಗಳೂರು.

೪. ಪಾಟೀಲ್ ಬಿ.ಆರ್., ೧೯೯೪, ದೇವದಾಸಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫. ಕರ್ನಾಟಕ ರಾಜ್ಯ ದೇವದಾಸಿ ಸಮರ್ಪಣಾ ನಿಷೇಧ ಕಾಯ್ದೆ ೧೯೮೨ ಮತ್ತು ತಿದ್ದುಪಡಿ ಕಾಯ್ದೆ, ೨೦೦೯-೧೦, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

೬ ಸುನಂದಮ್ಮ ಆರ್., ೨೦೧೭, ಮಹಿಳೆ-ಕಾನೂನು-ಪರಿಹಾರ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೭ ಶ್ರೀನಿವಾಸ ಗೌಡ, ದೇವದಾಸಿ ಪುನರ್ವಸತಿ ಕಾರ್ಯಕ್ರಮ, ಪ್ರ.ದ.ಸ, ಕರಾಮಅನಿ, ಬೆಂಗಳೂರು, ೨೦೧೫

೮. ಎಸ್.ಸಿ./ಎಸ್.ಟಿ. ತಿದ್ದುಪಡಿ ಕಾಯ್ದೆ ೨೦೧೩, ಗೆಝೆಟ್, ನವದೆಹಲಿ, ೨೦೧೪

೯. ಕರ್ನಾಟಕ ದೇವದಾಸಿ ನಿರ್ಮೂಲನೆ, ಪುನರ್ವಸತಿ ಸಮಗ್ರ ನೀತಿ ೨೦೧೮.

ಅಧ್ಯಾಯ ಆರು

# ಸಮಾರೋಪ

ಈ ಅಧ್ಯಯನದ ಸ್ಪಷ್ಟವಾದ ಮತ್ತು ವಿಶಾಲವಾದ ಉದ್ದೇಶವೇನೆಂದರೆ ಅಧುನಿಕತೆಯ ಹಿನ್ನೆಲೆಯಲ್ಲಿ ಮತ್ತು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ದೇವದಾಸಿಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಭಾರತದಂತಹ ಸಾಮಾಜಿಕ ಅಸಮಾನತೆಯಿರುವ ದೇಶದಲ್ಲಿ ಜಾತಿ, ವರ್ಗ ಮತ್ತು ಲಿಂಗ ಮುಂತಾದವುಗಳ ತಾರತಮ್ಯದ ಬದುಕಿನಲ್ಲಿ ಸಮಾಜದ ಕಟ್ಟಕಡೆಯಲ್ಲಿರುವ ದೇವದಾಸಿಯರ ಸಮಕಾಲೀನ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವ ಅನಿವಾರ್ಯತೆ ಯಿಂದ ಈ ಪ್ರಸ್ತುತದ ವಸ್ತುವಿಷಯವನ್ನು ತೆಗೆದುಕೊಂಡು ಸಂಶೋಧನೆಗೆ ಒಳಪಡಿಸಲಾಗಿದೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಇಲ್ಲಿಯವರೆಗಿನ ಕಂಡುಕೊಂಡ ಸತ್ಯ ಮತ್ತು ಕ್ಷೇತ್ರಕಾರ್ಯದ ಸಮಯದಲ್ಲಿ ಸಿಕ್ಕಿದ ಮೂಲ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ದೊರೆತ ಮಾಹಿತಿಯ ಪೂರಕವಾಗಿ ಬಂದಂತಹ ಸತ್ಯಾಸತ್ಯತೆಗಳನ್ನು ಈ ಕೆಳಗೆ ಫಲಿತಾಂಶಗಳ ರೂಪದಲ್ಲಿ ಚರ್ಚಿಸಲಾಗಿದೆ. ಸಂಶೋಧಕನ ಇತಿಮಿತಿ ಮತ್ತು ಅಧ್ಯಯನದ ಅನುಭವವನ್ನು ಆಧಾರವಾಗಿಟ್ಟುಕೊಂಡು ಕೆಲವು ಪ್ರಮುಖ ಸಲಹೆಗಳನ್ನು ಕೊಡಲಾಗಿದೆ.

**೬.೧. ಅಧ್ಯಯನದ ಫಲಿತಗಳು**

ಈ ಅಧ್ಯಯನದಿಂದ ಬಂದಂತಹ ಪ್ರಮುಖವಾದ ಫಲಿತಾಂಶಗಳ ವಿವರಣೆ ಕೆಳಗಿನಂತಿವೆ:

೧. ಅಭಿವೃದ್ಧಿ ಎನ್ನುವ ಪದದ ಪರಿಕಲ್ಪನೆ ಕೇವಲ ಭೌತಿಕ ಪ್ರಕ್ರಿಯೆಗಳಾದ ಆದಾಯ, ಉತ್ಪಾದನೆ ಮುಂತಾದ ಚಟುವಟಿಕೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿತ್ತು. ಆದರೆ ನಾಗರಿಕ ಸಮಾಜ, ಪರಿಸರ, ಸಾಕ್ಷರತೆ, ಸಾಮಾಜಿಕ ಬಂಡವಾಳ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿ ಮುಂತಾದ ವಿಚಾರಗಳೂ ಸಹ ಅಭಿವೃದ್ಧಿಯ ವ್ಯಾಪ್ತಿಯೊಳಗೆ ಬರುತ್ತವೆ. ಆರೋಗ್ಯ, ಶಿಕ್ಷಣ, ಮೂಲ ಸೌಲಭ್ಯ ಗಳ ದೊರೆಯುವಿಕೆ, ಸಮಾನ ಭಾಗವಹಿಸುವಿಕೆ, ಸಾಮಾಜಿಕ ಲಿಂಗತ್ವ, ಸಾಮಾಜಿಕ ನ್ಯಾಯ ಮುಂತಾದ ಸಾಮಾಜಿಕ ಪರಿಕಲ್ಪನೆಗಳಿಂದ ನಿರ್ಧರಿತವಾಗಿದೆ ಎಂಬುದನ್ನು ತೋರಿಸಿ ಕೊಟ್ಟಿದೆ. ಮಾನವ ಅಭಿವೃದ್ಧಿ ವರದಿಯಲ್ಲಿ ಮಹಿಳೆಯರು ವಿವಿಧ ಸಾಮಾಜಿಕ ಕ್ಷೇತ್ರದಲ್ಲಿ

ಎದುರಿಸುತ್ತಿರುವ ಅಸಮಾನತೆಯ ಕುರಿತು ಸತ್ಯದ ಬೆಳಕನ್ನು ತೋರಿಸಿದೆ. ವ್ಯಕ್ತಿಯ ಜೀವನದಲ್ಲಿ ಕೇವಲ ಭೌತಿಕ ಅಂಶಗಳು ಮಾತ್ರ ಮುಖ್ಯವಲ್ಲ, ಸಾಮಾಜಿಕ ಅಂಶಗಳಿಗೆ ನಾವು ಮನ್ನಣೆಯನ್ನು ನೀಡಬೇಕಾಗುತ್ತದೆ. ಅಭಿವೃದ್ಧಿ ಎಂಬುದು ಕೇವಲ ಆರ್ಥಿಕ ನೆಲೆಗಳಿಗೆ ಮಾತ್ರ ಸೀಮಿತವಾಗಿರದೇ ಮಾನವನ ಜೀವನದ ಪ್ರತಿಯೊಂದು ಅಂಶವನ್ನು ಒಳಗೊಂಡಿರುತ್ತದೆ. ಅಭಿವೃದ್ಧಿ ಎಂಬುದು ಸಮಾಜ ಮತ್ತು ಸಮಾಜದಲ್ಲಿನ ಆರ್ಥಿಕತೆ, ಸಾಮಾಜಿಕ, ರಾಜಕೀಯ, ಭೌತಿಕ ರಚನೆಯಲ್ಲಿ ಮತ್ತು ಜನತೆಯ ಮೂಲಭೂತವಾದ ಬದಲಾವಣೆಯನ್ನು ತರುವ ಪ್ರಕ್ರಿಯೆಯಾಗಿದೆ. ಸಮಾನತೆ, ಸ್ವಯಂಪೋಷಣೆ, ಉತ್ಪಾದಕತೆ ಮತ್ತು ಸಶಕ್ತೀಕರಣಗಳು, ಮಾನವ ಅಭಿವೃದ್ಧಿಯ ಬಹುಮುಖ್ಯ ಉಪಾಂಗಗಳಾಗಿವೆ. ಜನತೆಯ ಜೀವನದ ಆಯ್ಕೆಯ ಅವಕಾಶಗಳನ್ನು ವಿಸ್ತರಿಸುವುದೇ ಅಭಿವೃದ್ಧಿ ಎಂದಾದರೆ, ಜನತೆಯು ಅವಕಾಶಗಳನ್ನು ಸಮಾನ ರೀತಿಯಲ್ಲಿ ಪಡೆದಿರಬೇಕಾಗುತ್ತದೆ. ರಾಜಕೀಯ ಮತ್ತು ಆರ್ಥಿಕ ಅವಕಾಶಗಳು ಜನತೆಗೆ ಸಮಾನವಾಗಿ ದೊರಕಬೇಕೆಂದು ಮಾನವ ಅಭಿವೃದ್ಧಿಯು ಪ್ರತಿಪಾದಿಸುತ್ತದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿಯನ್ನು ದೇವದಾಸಿಯರ ಸ್ಥಿತಿಗತಿಯ ದೃಷ್ಟಿಯಲ್ಲಿ ನೋಡಲಾಗಿದೆ. ಇಲ್ಲಿ ದೇವದಾಸಿಯರ ಸಣ್ಣಪುಟ್ಟ ಕಲ್ಯಾಣ ಕಾರ್ಯಕ್ರಮಗಳನ್ನು, ಅವರ ಸ್ವಂತ ಪ್ರಯತ್ನದ ಪ್ರಗತಿ ಯನ್ನು ಅಂದರೆ ಅವರ ವೈಯಕ್ತಿಕ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಪರೀಶಿಲಿಸಲಾಗಿದೆ. ಶಿಕ್ಷಣ ಮತ್ತು ಆರೋಗ್ಯ, ಮಕ್ಕಳ ಪಾಲನೆ ಮತ್ತು ಅದರ ಜವಾಬ್ದಾರಿ ಇನ್ನೂ ಮುಂತಾದವುಗಳನ್ನು ಸಹ ಅಭಿವೃದ್ಧಿಯ ಪ್ರಕ್ರಿಯೆಯೊಳಗೆ ತರುವಂತಹ ಪ್ರಾಮಾಣಿಕ ಪ್ರಯತ್ನವಾಗಬೇಕು. ಅಭಿವೃದ್ಧಿಯು ಸಮಕಾಲೀನ ಪರಿಸ್ಥಿತಿಯಲ್ಲಿ ಸುಸ್ಥಿರ ಅಭಿವೃದ್ಧಿ ಧ್ಯೇಯೋದ್ದೇಶಗಳನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಅರ್ಥ ಮಾಡಿಕೊಳ್ಳುವ ಒಂದು ಹೆಜ್ಜೆ ಎನ್ನಬಹುದು. ಅಭಿವೃದ್ಧಿ ಎನ್ನುವುದು ಬರೀ ಭೌತಿಕತೆಯ ಸಂಕೇತವಲ್ಲ, ಸಾಮಾಜಿಕ ಅಂಶಗಳಿಗೂ ಸಂಬಂಧವಿದೆ ಎಂದು ಅರ್ಥ ಮಾಡಿಕೊಳ್ಳಲು ಮತ್ತು ಅಭಿವೃದ್ಧಿಯ ಪರಿಕಲ್ಪನೆಯನ್ನು ಸಂಕ್ಷಿಪ್ತವಾಗಿ ಮತ್ತು ಅಧ್ಯಯನದ ಮಿತಿಯೊಂದಿಗೆ ನಿರ್ವಚಿಸಲು ಮತ್ತು ವಿಭಿನ್ನ ರೀತಿಯಲ್ಲಿ ವಿಶ್ಲೇಷಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

೨. ದೇವದಾಸಿ ಪದ್ಧತಿಯು ಅಪರಿಚಿತ ವ್ಯಕ್ತಿಗಳಿಗೆ ಲೈಂಗಿಕ ತೃಪ್ತಿ ನೀಡುವುದು ಒಂದು ರೀತಿಯ ಪವಿತ್ರ ವೇಶ್ಯಾವಾಟಿಕೆಯ ಪದ್ಧತಿಯಾಗಿತ್ತು. ದೇವದಾಸಿ ಸಂಸ್ಕೃತಿ ಒಂದು ಸಾಮಾಜಿಕ ಪರವಾನಿಗೆಯ ಕ್ರಿಯಾವಿಧಿಯಾಗಿರುವುದರೊಂದಿಗೆ, ಉಳ್ಳಂತಹ ಜನರ ಮತ್ತು ಪುರೋಹಿತ ವರ್ಗದವರ ಹಿತಾಸಕ್ತಿಗಳನ್ನು ತೃಪ್ತಿಪಡಿಸುವ ಹುನ್ನಾರ, ಜಾತಿ, ವರ್ಗ, ಸಾಮಾಜಿಕ ಲಿಂಗತ್ವ ಮತ್ತು ಲೈಂಗಿಕತೆಯನ್ನು ಧರ್ಮದ ಹೆಸರಿನಲ್ಲಿ ಮಹಿಳೆಯರ ಮೇಲೆ ಲೈಂಗಿಕ ಗುಲಾಮಗಿರಿ ತನವನ್ನು ಹೇರಿ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಯಾಜಮಾನಿಕೆಯಿಂದ ಈ ಪದ್ಧತಿಯ ಉಗಮಕ್ಕೆ ಕಾರಣವಾಯಿತು. ಉದ್ದೇಶಪೂರ್ವಕವಾಗಿ ದೇವದಾಸಿ ಪದ್ಧತಿಯು ಕೆಳಜಾತಿಯ ಮಹಿಳೆಯರನ್ನು ಮತ್ತು ಸಮುದಾಯವನ್ನು ಹತೋಟಿಯಲ್ಲಿಡಲು ಮತ್ತು

ಶೋಷಣೆಯನ್ನು ಮಾಡಲು ಸ್ಥಳೀಯ ಉನ್ನತ ಜಾತಿ ಮತ್ತು ವರ್ಗದವರು ಕಟ್ಟುನಿಟ್ಟಾಗಿ ರೂಢಿ ಸಂಪ್ರದಾಯಗಳನ್ನು ಪಾಲಿಸುವಂತೆ ಮಾಡುತ್ತಿದ್ದರು. ಕೆಳಜಾತಿಯವರ ಸ್ವ-ಗೌರವ ಮತ್ತು ಸ್ವಾಭಿಮಾನವು ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಗಳಿಸುವಂತೆ ಮಾಡುವುದೇ ಇದರ ಉದ್ದೇಶವಾಗಿತ್ತು. "ನಮಗೆ ಯಾವುದೇ ರೀತಿಯ ಸ್ವ-ಗೌರವವಿರುವ ಅಸ್ಮಿತೆಗಳೇ ಇಲ್ಲ. ನಮ್ಮನ್ನು ಎಲ್ಲಾ ರೀತಿಯಲ್ಲೂ ತುಚ್ಛವಾಗಿ ಸಾಮಾಜಿಕವಾಗಿ ಕಡೆಗಾಣಿಸಿದ್ದಾರೆ. ನಮ್ಮ ಮಾನಸಿಕ ಸ್ಥಿತಿಯು ಆತಂಕದಲ್ಲಿ ಮತ್ತು ನಮ್ಮ ಮಕ್ಕಳ ಭದ್ರತೆಗೆ ಯಾವುದೇ ಆಧಾರವಿಲ್ಲದೇ ನಿಕೃಷ್ಟವಾಗಿ ಜೀವನವನ್ನು ಕಳೆಯುವಂತಾಗಿದೆ. ಸರ್ಕಾರದ ಯಾವುದೇ ಕಾನೂನುಗಳು ಈ ಪದ್ಧತಿಯ ನಿರ್ಮೂಲನೆಯ ಬಗ್ಗೆಯಾಗಲಿ ಅಥವಾ ಮಾಜಿ ದೇವದಾಸಿಯರಿಗೆ ಯಾವುದೇ ರೀತಿಯ ಸುಸ್ಥಿರವಾದಂತಹ ನೆಲೆಯನ್ನಾಗಲಿ ಕಲ್ಪಿಸಿಕೊಡುವಲ್ಲಿ ಸಂಪೂರ್ಣವಾಗಿ ಸೋತಿದೆ. ಇದಕ್ಕೆ ನಿರ್ಮೂಲನೆಯ ಕಾಯ್ದೆಯ ನಂತರವೂ ಸಹ ಸಾವಿರಾರು ಹೊಸದಾಗಿ ದೇವದಾಸಿಯರಾಗಿದ್ದಾರೆ." ಎಂದು ತಮ್ಮ ಅಳಲನ್ನು ಅಧ್ಯಯನದ ಸಮಯದಲ್ಲಿ ಹಂಚಿಕೊಂಡಿದ್ದಾರೆ. ಪ್ರಾದೇಶಿಕವಾಗಿ ವಿಭಿನ್ನ ರೀತಿಯ ಆಚರಣೆಗಳನ್ನು ಮಾಡಿ ಅಲ್ಲಲ್ಲಿ ಸಮರ್ಪಣೆಗಳು ನಡೆಯುತ್ತಿವೆ. ಒಟ್ಟಾರೆ ಈ ಅಧ್ಯಯನದ ಮೂಲಕ ದೇವದಾಸಿ ಎಂದರೆ ಯಾರು? ಎನ್ನುವ ಮೂಲ ಪ್ರಶ್ನೆಗೆ ಸರಳವಾಗಿ ವ್ಯಾಖ್ಯಾನಿಸುವುದಾದರೆ **"ದೇವದಾಸಿಯೆಂದರೆ ಧಾರ್ಮಿಕ ಚೌಕಟ್ಟಿನಲ್ಲಿ, ಸಮಾಜದ ಪರವಾನಿಗೆಯಿಂದ ದಲಿತ ಹಾಗೂ ಇತರೆ ಹಿಂದುಳಿದ ಸಮುದಾಯಗಳಲ್ಲಿ ಹೆಣ್ಣುಮಕ್ಕಳನ್ನು ದೇವರ-ದೇವತೆಯ ಹೆಸರಲ್ಲಿ ದಾಸಿಯ ರೂಪದಲ್ಲಿ ಮಹಿಳಾ ಸಮುದಾಯದಿಂದ ಪ್ರತಿನಿದಿಸುವ, ಧಾರ್ಮಿಕತೆಯ ಸೆರಗಿನಲ್ಲಿ ಮೂಡನಂಭಿಕೆಗೆ ಅಂಜಿ, ಬಡತನದ ಹಿನ್ನೆಲೆಯಿರುವ ಹಾಗೂ ಹೊರಗಿನ ಸಮಾಜಕ್ಕೆ ಗಂಡುಮಕ್ಕಳ ಸ್ಥಾನವನ್ನು ತುಂಬಿ ತಮ್ಮ ಇಷ್ಟವಿಲ್ಲದ ಅಸ್ಮಿತೆಯೊಂದಿಗೆ ಅಮಾನವೀಯ ಮತ್ತು ಸಾಮಾಜಿಕ ಅನಿಷ್ಟ ಪದ್ಧತಿಗೆ ಬಲಿಯಾದ ಮಹಿಳೆಯರನ್ನು ದೇವದಾಸಿಯರೆಂದು ಕರೆಯಬಹುದು." ಸಮಾಜದ ಕಣ್ಣಿಗೆ ದಲಿತ ಹಿನ್ನೆಲೆಯಿರುವ ಹೆಣ್ಣು ಅಸ್ಪೃಶ್ಯಳು ಆದರೆ ನಾಲ್ಕುಗೋಡೆಗಳ ಮಧ್ಯೆ ಸ್ಪೃಶ್ಯತೆಯಿಂದ ರೂಪಾಂತರಗೊಂಡು ತನ್ನನ್ನೇ ಮೈ-ಮನಸ್ಸುಗಳನ್ನು ಆರ್ಪಿಸಿಕೊಳ್ಳುವ ಸಾಮಾಜಿಕ ಒಪ್ಪಂದದ ಕಾಯಕವಾಗಿದೆ.** ಈಗಲೂ ಸಹ ಈ ಪದ್ಧತಿಯು ಮುಂದುವರಿಯುತ್ತಿದೆ. ಏಕೆಂದರೆ ಈ ಅಧ್ಯಯನದ ಮೂಲಕ ಕಂಡುಕೊಂಡ ಸತ್ಯವೆಂದರೆ ಸಮಾಜ, ಸಮುದಾಯ(ಕುಟುಂಬವನ್ನು ಒಳಗೊಂಡಂತೆ) ಮತ್ತು ಸರ್ಕಾರದ ಕಟ್ಟುನಿಟ್ಟಿನ ಕ್ರಮವಿಲ್ಲದ ಮತ್ತು ಬಲವಿಲ್ಲದ ಕಾಯ್ದೆಯ ಅನುಷ್ಠಾನದಿಂದ ಹಾಗೆಯೇ ಈ ಪದ್ಧತಿಯನ್ನು ಪೋಷಿಸುತ್ತಿರುವ ಜಾಗ ಗಳು ಪ್ರಾದೇಶಿಕ ಹಿನ್ನೆಲೆ ಮತ್ತು ಸಮಾಜೋ ಆರ್ಥಿಕ ಸ್ಥಿತಿಗತಿಗಳು ಕೂಡ ಕಾರಣವಾಗಿವೆ. ಈ ಅಧ್ಯಯನದ ಸಮಯದಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಮೂರು ಪ್ರಕರಣಗಳು ಕಾಣಿಸಿಕೊಂಡಿವೆ ಆದರೆ ಮಾದ್ಯಮದಲ್ಲಿ ಸರಿಯಾದ ರೀತಿಯಲ್ಲಿ ವರದಿಯಾಗಿಲ್ಲ. ಆದರೆ ಒಂದು ಪ್ರಕರಣ ಇತ್ತೀಚಿನದು ಮಾತ್ರ ಬೆಳಕಿಗೆ ಬಂದಿದೆ ಮತ್ತು ಕಾಯ್ದೆಯಡಿಯಲ್ಲಿ ಪ್ರಕರಣವು ಸಹ ದಾಖಲಾಗಿದೆ ಮತ್ತು ಪ್ರಕರಣಕ್ಕೆ ಸಂಬಂಧಪಟ್ಟವರ ಮೇಲೆ ಪೊಲೀಸು

ಇಲಾಖೆಯವರು ತಮ್ಮ ಅಧಿಕಾರದಿಂದ ಮತ್ತು ಸ್ಥಳೀಯ ದೇವದಾಸಿ ಪುನರ್ವಸತಿ ಯೋಜನೆಯ ಅನುಷ್ಠಾನಾಧಿಕಾರಿಗಳ ಪ್ರಾಮಾಣಿಕ ಪ್ರಯತ್ನದಿಂದ ಜಿಲ್ಲೆಯಲ್ಲಿ ಒಂದು ದೇವದಾಸಿ ಪದ್ಧತಿಗೆ ಸಂಬಂಧಿಸಿದಂತೆ ಕಾನೂನಿನ ಪ್ರಕ್ರಿಯೆಗೆ ಒಳಪಟ್ಟಿದೆ. ಉಳಿದ ಎರಡು ಪ್ರಕರಣಗಳಲ್ಲಿ ಸರ್ಕಾರ ಮತ್ತು ಸಂಘ ಸಂಸ್ಥೆಗಳಿಂದ ಆ ಹೆಣ್ಣುಮಕ್ಕಳನ್ನು ರಕ್ಷಿಸಿ ಸರಕಾರದ ವಶಕ್ಕೆ ವಹಿಸಲಾಗಿತ್ತು ಮತ್ತು ಅವರ ಕ್ಷೇಮ ಮತ್ತು ಭವಿಷ್ಯತ್ತಿನ ಜೀವನವನ್ನು ಕುಟುಂಬವು ಕಾಪಾಡಬೇಕೆಂದು ಪೋಲೀಸು ಮತ್ತು ಸಂಘಟನೆಗಳ ಸಮಕ್ಷಮದಲ್ಲಿ ಮುಚ್ಚಳಿಕೆಯನ್ನು ಬರೆಯಿಸಿ ಪ್ರಕರಣವನ್ನು ಬೇರೆ ದಿಕ್ಕಿಗೆ ಹೋಗದೆ ತಡೆದು ಒಂದು ಅಂತಿಮ ತೆರೆಯನ್ನು ಎಳೆದ್ದದ್ದಾಗಿದೆ. ಇಂತಹ ಪ್ರಕರಣಗಳನ್ನು ಗಮನಿಸಿದರೆ ಇನ್ನೂ ಈ ಪದ್ಧತಿ ಜೀವಂತವಾಗಿದೆ ಮತ್ತು ಬೂದಿಮುಚ್ಚಿದ ಕೆಂಡದಂತಿದೆ ಯಾವಗ ಬೇಕಾದರೂ ತನ್ನ ರೂಪವನ್ನು ಪಡೆಯಬಹುದು ಎಂಬ ಸತ್ಯವನ್ನು ಮತ್ತು ಇಲ್ಲಿಯವರೆಗಿನ ಸತ್ಯಗಳು ಮತ್ತು ಅನುಮಾನಿತ ಸಂಗತಿಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೩. ದೇವದಾಸಿ ಪದ್ಧತಿಯ ಕಾರಣಕ್ಕೆ ಹಲವಾರು ರೀತಿಯಲ್ಲಿ ಪ್ರತಿಕ್ರಿಯಿಸಬಹುದು. ಆದರೆ ಮುಖ್ಯವಾಗಿ ಹಿಂದುತ್ವದ ತಾತ್ವಿಕತೆಯ ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಳ ಸಮುದಾಯ/ಜಾತಿಗಳಲ್ಲಿ ಈ ಪದ್ಧತಿಯು ಹೆಚ್ಚು ಅಸ್ತಿತ್ವದಲ್ಲಿ ಬಂತು. ದೇವದಾಸಿ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಜಾತಿಯಾಧಾರಿತ ಕುಂಟುಂಬಗಳು ಹೆಚ್ಚು ಶೋಷಣೆಗೆ ಒಳಪಟ್ಟು ಲಿಂಗತಾರತಮ್ಯ, ಬಡತನ, ಧಾರ್ಮಿಕ ಸಂಪ್ರದಾಯ ಮತ್ತು ಸಾಂಸ್ಕೃತಿಕ ಆಚರಣೆಗಳಿಂದ, ಅಂತಿಮವಾಗಿ ದೇವದಾಸಿ ಪದ್ಧತಿಗೆ ನೇರವಾಗಿ ಜಾತಿ ಮತ್ತು ಪುರುಷಪ್ರಾಧಾನ್ಯತೆಗಳು ಕಾರಣಗಳಾಗಿವೆ ಎಂದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಈ ಪದ್ಧತಿಗೆ ಪ್ರಮುಖ ಕಾರಣಗಳೆಂದರೆ ಆರ್ಥಿಕ ದುಸ್ಥಿತಿ ಮತ್ತು ಹಳೆಯ ಸಂಪ್ರದಾಯಗಳ ಅನುಕರಣೆ ಮತ್ತು ಆಚರಣೆಗಳಾಗಿವೆ. ಅದರೂ ಸಹ ಬಡತನ, ಮೂಢನಂಬಿಕೆ, ಸಮಾಜದ ಇತರೆ ಬಾಹ್ಯ ಅಂಶಗಳು ಕಾರಣವಾಗಿವೆ ಎಂಬ ಅಂಶವು ಸಾಮಾನ್ಯವಾಗಿ ಕಂಡು ಬಂದಿದೆ. ದೇವದಾಸಿ ಪದ್ಧತಿ ಪ್ರಸ್ತುತದಲ್ಲಿಯೂ ಸಹ ಇದೆ ಹಾಗೆಯೇ ನಿರಂತರವಾಗಿ ಮುಂದುವರಿಯುತ್ತಾ ಹೋಗುತ್ತಿದೆ ಇದಕ್ಕೆ ಏನು ಕಾರಣ? ಮತ್ತು ಯಾರು ಕಾರಣ ಎಂಬುದನ್ನು ಗಮನಿಸಿದರೆ ಹೆಚ್ಚಿನ ದೇವದಾಸಿಯರು ಮೂಢನಂಬಿಕೆ, ಅಜ್ಞಾನ, ಅನಕ್ಷರತೆ, ಅರೆ ತಿಳುವಳಿಕೆ, ಧಾರ್ಮಿಕ ಭಾವನೆ, ದೇವರು ಇತ್ಯಾದಿ ಉತ್ತರಗಳನ್ನು ನೀಡಿದ್ದಾರೆ. ನಮ್ಮ ಬೇಜವಾಬ್ದಾರಿಯು ಸಹ ಕಾರಣವಾಗಿದೆ ಎಂದು ಕೆಲವರು, ಬಡತನ, ಹಸಿವು ಮತ್ತು ಹಣದಾಸೆ ಸಹ ಕಾರಣವಾಗಿದೆ. ಏಕೆಂದರೆ ಈ ಭಾಗದಲ್ಲಿ ಹೆಚ್ಚು ಕೂಲಿ ಸಿಗುವಂತಿಲ್ಲ, ಸಿಕ್ಕಿದರೂ ಕಡಿಮೆ ಸಮಯ, ನಮ್ಮ ಕಾನೂನುಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ ಮತ್ತು ಗಟ್ಟಿಯಾಗಿಲ್ಲ. ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಆದರೆ ಹಳ್ಳಿಗಳಲ್ಲಿ ಇನ್ನೂ ಸಹ ಜೀವಂತವಾಗಿದೆ. ನಮ್ಮ ತಂದೆ-ತಾಯಿ,

ಅಣ್ಣ-ತಮ್ಮ ಮತ್ತು ಬಂಧುಬಳಗವು ಸಹ ಪ್ರತ್ಯಕ್ಷ ಇಲ್ಲವೇ ಪರೋಕ್ಷವಾಗಿ ಕಾರಣಗಳಾಗಿವೆ. ಆದರೆ ಇಲ್ಲಿ ಪ್ರಭುತ್ವವು ತನ್ನ ಜವಾಬ್ದಾರಿಯನ್ನು ಮರೆತು ಬಿಟ್ಟಿದೆ ಇಲಾಖೆಗಳು ಸಹ ಇದರ ನಿರ್ಮೂಲನೆ ಕಡೆ ಗಮನ ಹರಿಸಿಲ್ಲದೇ ಇನ್ನೂ ಮುಂದುವರಿಯುತ್ತಾ ಇದೆ ಎಂದು ಹೇಳಬಹುದು.

೪. ಈ ಅಧ್ಯಯನದ ಪ್ರಮುಖ ವಿಚಾರಗಳೆಂದರೆ; ದೇವದಾಸಿಯರ ವಯಸ್ಸನ್ನು ಗಮನಿಸಿದರೆ **ಶೇ. ೯ರಷ್ಟು ದೇವದಾಸಿಯರು ೨೫ರಿಂದ ೩೦** ವರ್ಷದೊಳಗಿದ್ದಾರೆ, **ಶೇ. ೧೮.೫ರಷ್ಟು ೩೧ರಿಂದ ೪೦** ವರ್ಷದವರಿದ್ದಾರೆ, ಅಂದರೆ ಸರಕಾರದ ಕಾಯ್ದೆ ಚೌಕಟ್ಟನ್ನು ಮೀರಿ ಈ ಪದ್ಧತಿ ಬೆಳೆದುಬಂದಿದೆ. ಅವರ ಶಿಕ್ಷಣದ ಹಿನ್ನೆಲೆಯನ್ನು ನೋಡಿದರೆ **ಶೇ. ೨ರಷ್ಟು** ೧ರಿಂದ **೪ನೇ ತರಗತಿ ಅಂದರೆ ಪ್ರಾಥಮಿಕ** ಶಾಲೆಯವರೆಗೆ ಕಲಿತಿದ್ದಾರೆ. ಶೇ. ೬ರಷ್ಟು ೫ರಿಂದ ೭ನೇ ತರಗತಿಯವರೆಗೆ, ಅಂದರೆ ಮಾಧ್ಯಮಿಕ ಶಾಲೆಯ ಹಂತದವರೆಗೂ, ಶೇ. ೩ರಷ್ಟು ೮ರಿಂದ ೧೦ನೇ ತರಗತಿಯವರೆಗೂ ಅಂದರೆ ಪ್ರೌಢಶಾಲೆಯ ಹಂತದವರೆಗೂ ಮತ್ತು ಶೇ. ೦.೫ರಷ್ಟು ಪಿಯುಸಿ(ಪದವಿ ಪೂರ್ವ ಕಾಲೇಜು) ಹಂತದವರೆಗೂ ಶಿಕ್ಷಣವನ್ನು ಈ ಸಮುದಾಯದಲ್ಲಿ ಗುರುತಿಸಬಹುದು. ಆದರೆ ಈ ಸ್ಥಿತಿಗತಿಗೆ ವಿರುದ್ಧವಾದ ಸ್ಥಿತಿಯೂ ಇದೆ. ಶೇ. ೮೮.೫ರಷ್ಟು ಹಾಗೂ ಅದಕ್ಕಿಂತಲೂ ಅಧಿಕ ಪ್ರಮಾಣದಲ್ಲಿ ದೇವದಾಸಿಯರು ಯಾವುದೇ ಓದು-ಬರಹ ಕಲಿಯದೆ ಅನಕ್ಷರಸ್ಥರಾಗಿದ್ದಾರೆ. ಅಂದರೆ ಅಧಿಕವಾಗಿ ಅನಕ್ಷರಸ್ಥರು, ಬೆರಳೆಣಿಕೆಯೆಷ್ಟು ಮಾತ್ರ ಶಿಕ್ಷಣ ಪಡೆದವರಾಗಿದ್ದಾರೆ ಈ ಪದ್ಧತಿಗೆ ಬಲಿಯಾದವರ ವಯಸ್ಸನ್ನು ಗಮನಿಸಿದರೆ **ಹುಟ್ಟಿದ ತಕ್ಷಣ(ಸರಿಯಾದ ಮಾಹಿತಿ ಇಲ್ಲ) ಶೇ. ೪ರಷ್ಟು ದೇವದಾಸಿಯರಾಗಿದ್ದಾರೆ. ೫ ವರ್ಷದೊಳಗೆ ಶೇ. ೯ರಷ್ಟು, ೫ರಿಂದ ೧೦ ವರ್ಷದೊಳಗೆ ಶೇ. ೨೯ರಷ್ಟು ಹಾಗೂ ೧೦ ವರ್ಷಕ್ಕೂ ಮೇಲ್ಪಟ್ಟು ವಯಸ್ಸಿನಲ್ಲಿ ಆರ್ಪಿಸಿದ ದೇವದಾಸಿಯರ ಪ್ರಮಾಣ ಶೇ. ೫೮ರಷ್ಟಿದೆ.** ಇಡೀ ಅಂಕಿಸಂಖ್ಯೆಗಳನ್ನು ಗಮನಿಸಿದರೆ ಈ ದೇವದಾಸಿಯರು ಯಾರೂ ಸಹ ತಮ್ಮ ಇಷ್ಟಕ್ಕೆ ದೇವದಾಸಿಯರಾದುದಲ್ಲ. ಈ ಪದ್ಧತಿಗೆ ಕಾರಣಕರ್ತರೆಂದರೆ ತಮ್ಮ ಕುಟುಂಬ, ಸಮುದಾಯ ಮತ್ತು ಸಮಾಜ(ಸರ್ಕಾರವನ್ನು ಒಳಗೊಂಡಂತೆ). ದೇವದಾಸಿಯನ್ನಾಗಿ ಮಾಡಲು ತನ್ನ ಹೆತ್ತವರು ಪ್ರಮುಖವಾಗಿ ಕಾರಣ ವಾಗಿದ್ದಾರೆ. ಸಮುದಾಯ ಮತ್ತು ಊರಿನ ಇತರೆ ಪ್ರಭಾವಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾಗಿದ್ದರೂ ಸಹ ಅದನ್ನು ಗ್ರಹಿಸುವ ಸೂಕ್ಷ್ಮತೆ ಇವರಲಿಲ್ಲ. ಈ ಪದ್ಧತಿಗೆ ಸಮಾಜವು ನೇರವಾಗಿ ಕಾರಣವಾಗಿದ್ದರೂ ಅದನ್ನು ಗುರುತಿಸುವ ಜಾಣ್ಮೆ ಮತ್ತು ಧೈರ್ಯ ಇವರಲಿಲ್ಲ. ಇನ್ನೊಂದು ವಿಚಾರವೆಂದರೆ ಪ್ರಸ್ತುತ ಅಧ್ಯಯನದ ಪ್ರಶ್ನೆಯು ಇಡೀ ಮಹಿಳಾ ಸಮುದಾಯಕ್ಕೆ ಸವಾಲಾಗಿದೆ. ಏಕೆಂದರೆ ಸುಮಾರು ವರ್ಷಗಳಿಂದಲೂ ನಡೆದು ಬಂದಿರುವ ವ್ಯವಸ್ಥೆಯು ತಮ್ಮ ಕುಟುಂಬದ ಎಲ್ಲ ತಲೆಮಾರುಗಳಿಗೆ ಅಂಟಿದ ರೋಗದಂತೆ ಪೀಳಿಗೆಯಿಂದ ಪೀಳಿಗೆಗೆ ಹಬ್ಬುತ್ತಾ ಬಂದಿದೆ. ಇಲ್ಲಿ ಸುಮಾರು ಶೇಕಡ ೩.೫ರಷ್ಟು

ದೇವದಾಸಿಯರು ನಾಲ್ಕು ತಲೆಮಾರುಗಳಿಂದ ಈ ಪದ್ಧತಿಯಿಂದ ಹೊರಬಂದಿಲ್ಲ. ಈ ಪದ್ಧತಿಯು ಇವರನ್ನು ಬಿಡುತ್ತಿಲ್ಲವೊ ಅಥವಾ ಇವರು ಈ ಪದ್ಧತಿಯನ್ನು ಬಿಡುತ್ತಿಲ್ಲವೊ ಎಂಬುದು ದೊಡ್ಡ ಪ್ರಶ್ನೆಯಾಗಿದೆ. ನಂತರ ಮೂರನೇ ತಲೆಮಾರುಗಳಿಂದ ಈ ಪದ್ಧತಿಯ ಸುಖ ದುಃಖದಲ್ಲಿ ಭಾಗಿಯಾಗಿದ್ದಾರೆ. ಎರಡು ತಲೆಮಾರುಗಳಿಂದ ಕಟ್ಟುನಿಟ್ಟಿನಂತೆ ಪಾಲಿಸುತ್ತಾ ಬಂದಿದ್ದಾರೆ. ಹಾಗೆಯೇ ಉಳಿದ ದೇವದಾಸಿಯರು ಯಾವುದೇ ಹಿನ್ನೆಲೆಯಿಲ್ಲದಿದ್ದರೂ ಸಹ ತಮ್ಮ ಬದುಕನ್ನು ಈ ಪದ್ಧತಿಗೆ ಬಲಿ ಕೊಟ್ಟಿದ್ದಾರೆ.

೫. ದೇವದಾಸಿಯರ ಸಾಮಾಜಿಕ ಹಿನ್ನಲೆಯನ್ನು ಗಮನಿಸಿದಾಗ ಅವರ ಜಾತಿ ಮತ್ತು ಉಪಜಾತಿ ಯನ್ನು ನೋಡಿದರೆ ಪರಿಶಿಷ್ಟ ಜಾತಿಯಲ್ಲಿ ಮತ್ತು ಪರಿಶಿಷ್ಟ ಪಂಗಡದಲ್ಲಿ ಈ ಪದ್ಧತಿಗೆ ಬಲಿಯಾಗಿದ್ದಾರೆ. ಒಟ್ಟಾರೆ ಎಲ್ಲವನ್ನು ಗಮಸಿದಾಗ ಮಾದಿಗ ಸಮುದಾಯವು ಸಾಮಾನ್ಯವಾಗಿ ಎಲ್ಲ ಕಡೆ ಈ ಪದ್ಧತಿಗೆ ಬಲಿಯಾಗಿದೆ. ಉಳಿದ ಸಮುದಾಯಗಳಿದ್ದರೂ ಸಹ ಹೆಚ್ಚಾಗಿ ಮಾದಿಗ ಸಮುದಾಯವು ಈ ಪದ್ಧತಿಯನ್ನು ಚಾಚೂ ತಪ್ಪದೇ ಆಚರಣೆಯನ್ನು ಮಾಡುತ್ತಾ ಬಂದಿದೆ. ಹಾಗೆಯೇ ಕ್ಷೇತ್ರಕಾರ್ಯದ ಸಮಯದಲ್ಲಿ ಗಮನ ಕೇಂದ್ರಿತ ಗುಂಪಿನ ಚರ್ಚೆ ಅಥವಾ ಲಕ್ಷ್ಯಕೊಳಪಟ್ಟ ಗುಂಪಿನ ಚರ್ಚೆಯಲ್ಲಿ ಬಂದಂತಹ ವಿಚಾರವೆಂದರೆ ಮೇಲೆ ತಿಳಿದ ಹಿರಿಯ ದೇವದಾಸಿಯರು ಕೊಟ್ಟ ಹೇಳಿಕೆಯ ಪ್ರಕಾರ ಹಿಂದುಳಿದ ಸಮುದಾಯಗಳು ಮತ್ತು ನವಾಬರು(ಮುಸ್ಲಿಮರು) ಸಹ ಈ ಪದ್ಧತಿಯನ್ನು ಪಾಲಿಸುತ್ತಿದ್ದರು ಎಂದು ಹೇಳಿದ್ದಾರೆ. ಒಬ್ಬ ಹಿರಿಯ ದೇವದಾಸಿ ಹೇಳಿಕೆಯ ಪ್ರಕಾರ "ಬೇರೆ ಮಂದಿ ದೇವದಾಸಿಯರಿದ್ದರು. ಆದರೆ ಈ ನವಾಬರು ಯಾಕೆ ಬಿಡುತ್ತಿದ್ದರು ಎಂಬುದು ಗೊತ್ತಿಲ್ಲಾರಿ" ಎಂದು ಪ್ರತಿಕ್ರಿಯಿಸಿದರು. ಇಡೀ ಜಿಲ್ಲೆಯಲ್ಲಿ ಅಧ್ಯಯನದ ಸಂದರ್ಭದಲ್ಲಿ ಸಾಮಾನ್ಯವಾಗಿ ನಾಲ್ಕು ಜಾತಿಯವರನ್ನು ಬಿಟ್ಟರೆ ಬೇರೆ ಯಾರೂ ಸಿಗಲಿಲ್ಲ. ಆದರೆ ಅಧ್ಯಯನದ ಕೊನೆಯ ಭಾಗದ ಕ್ಷೇತ್ರಕಾರ್ಯದಲ್ಲಿ ಇತರೆ ಹಿಂದುಳಿದ ಸಮುದಾಯಗಳಲ್ಲಿ ಒಂದಾದ ಬೆಸ್ತರು/ಗಂಗಾಮತಸ್ಥರು ಎನ್ನುವ ಸಮುದಾಯ ದಲ್ಲಿ ಶೇ. ೦.೫೮ರಷ್ಟು ಕೊಪ್ಪಳ ಜಿಲ್ಲೆಯಲ್ಲಿ ಇರುವುದು ಕಂಡು ಬಂದಿದೆ. ಅದೇ ರೀತಿ ಭಾರತದ ವಿವಿಧ ಪ್ರದೇಶಗಳಲ್ಲಿ ಎಲ್ಲಾ ಸಮುದಾಯದ ಮಹಿಳೆಯರು ದೇವದಾಸಿಯ ಪದ್ಧತಿಗೆ ಒಳಗಾಗಿದ್ದಾರೆ. ಆದರೆ ಕೆಲವು ಮುಂದುವರಿದ ಅಂದರೆ ಅರಿವು, ಅಕ್ಷರ, ಆರ್ಥಿಕತೆ ಮತ್ತು ಅಧಿಕಾರದ ಹಿನ್ನೆಲೆಯಿಂದ ತಮ್ಮ ತಮ್ಮ ಸಮುದಾಯಗಳು ಈ ಪದ್ಧತಿಯ ಮಾಹಿತಿಯನ್ನು ಮರೆಮಾಚಿದರು ಹಾಗೂ ಸಂಪರ್ಕವನ್ನು ತಪ್ಪಿಸಿದರು. ಆದ್ದರಿಂದ ಇತರೆ ಹಿಂದುಳಿದ ಮತ್ತು ಸಾಮಾನ್ಯ ಜಾತಿಗಳಲ್ಲಿದ್ದ ಪದ್ಧತಿ ಈಗ ಕೇವಲ ದಲಿತರಲ್ಲಿ ಅಸ್ಪೃಶ್ಯ ಜಾತಿಗಳಿಗೆ ಮತ್ತು ನಾಯಕ/ಬೇಡ ಸಮುದಾಯಗಳಿಗೆ ಮಾತ್ರ ಸೀಮಿತವಾಗಿದೆ. ಇದಕ್ಕೆ ಆಧಾರಗಳಾಗಿ ಎರಡನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಸಾಕಷ್ಟು ಮಾಹಿತಿಯಿದೆ.

೬. ಆರೋಗ್ಯಕ್ಕೆ ಸಂಬಂಧಿಸಿದಂತೆ ನೋಡುವುದಾದರೆ ಎಲ್ಲರೂ ಸಹ ಯಾವತರದ ಕಾಯಿಲೆ ಯಿಲ್ಲವೆಂದು ತಿಳಿಸಿದ್ದಾರೆ. ಕೆಲವರು ಸಾಮಾನ್ಯವಾದ ಕಾಯಿಲೆಗಳು ಶೀತ, ನೆಗಡಿ, ಜ್ವರ, ವಾಂತಿ-ಭೇದಿ ಮುಂತಾದ ಕಾಯಿಲೆಗಳೆಂದು ತಿಳಿಸಿದ್ದಾರೆ. ಈ ವಿಚಾರವಾಗಿ ನಾವು ಮೌಖಿಕವಾಗಿ ಸರ್ಕಾರಿ ಮತ್ತು ಅಲ್ಲಿನ ಕೆಲವು ಸಮುದಾಯದ ನಾಯಕರನ್ನು ವಿಚಾರಿಸಿದಾಗ ಎಲ್ಲರೂ ಸಹ ಸರ್ಕಾರಿ ಆಸ್ಪತ್ರೆಗೆ ಹೊಗುತ್ತಾರೆ ಸುಮಾರು ಜನರಿಗೆ ಲೈಂಗಿಕ ತರದ ರೋಗಗಳು ಮತ್ತು ಎಚ್‌ಐವಿ ಮತ್ತು ಏಡ್ಸ್ ತರದ ಕಾಯಿಲೆಗಳಿವೆ ಎಂದು ಔಪಚಾರಿಕವಾಗಿ ಹೇಳಿದ್ದಾರೆ ಆದರೆ ಯಾವುದೇ ದಾಖಲೆಯ ಅಧಿಕೃತ ಮಾಹಿತಿಯಿಲ್ಲ. ಇದಕ್ಕೆ ಹಿನ್ನೆಲೆಯಾಗಿ ಎಲ್ಲೂ ಸಹ ಅವರ ವೈಯಕ್ತಿಕ ಬದುಕಿನ ಮಾಹಿತಿಯನ್ನು ಚರ್ಚಿಸಿಲ್ಲ. ಆದರೆ ಅವರೊಟ್ಟಿಗೆ ಕೆಲಸ ಮಾಡುವ ಸಂಘ ಸಂಸ್ಥೆ ಮತ್ತು ಆರೋಗ್ಯ ಕಾರ್ಯಕರ್ತರಿಂದ ಮಾಹಿತಿ ಪಡೆಯಲಾಗಿದೆ. ಮತ್ತು ಇಲ್ಲಿಯವರೆಗಿನ ಅಧ್ಯಯನಗಳಲ್ಲಿ ದೇವದಾಸಿಯರು ಲೈಂಗಿಕ ವೃತ್ತಿಯ ಹಿನ್ನಲೆಯಿದ್ದವರಿಗೆ ಕೆಲವು ತರದ ಗುಪ್ತ ರೋಗಗಳು / ಲೈಂಗಿಕ ಕಾಯಿಲೆಗಳು ಬಂದಿವೆ ಎನ್ನುವ ವಿಚಾರಗಳನ್ನು ಒದಗಿಸಿದ್ದಾರೆ ಅದ್ದರಿಂದ ಈ ಅಧ್ಯಯನದಲ್ಲಿ ಆರೊಗ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

೭. ತಮ್ಮ ವೈಯಕ್ತಿಕ ಜೀವನವನ್ನು ತಮಗೆ ಇಷ್ಟ ಬಂದ ಪುರುಷರೊಟ್ಟಿಗೆ ಮತ್ತು ದೇವದಾಸಿ ಯಾಗಿ ಮಾಡುವಾಗ ಬೆಂಬಲಿಸಿದ ಮತ್ತು ಆ ಕುಟುಂಬದ ಆರ್ಥಿಕ ಜವಾಬ್ದಾರಿಯನ್ನು ಹೊತ್ತ ತಮ್ಮದೇ ಸಮುದಾಯ ಅಥವಾ ಬೇರೆ ಸಮುದಾಯದ ಪುರುಷರ ಸಂಬಂಧದಿಂದ ಹುಟ್ಟಿದ ಮಕ್ಕಳ ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಶೇಕಡ ೯೨ರಷ್ಟು ದೇವದಾಸಿಯರಿಗೆ ಮಕ್ಕಳಿದ್ದಾರೆ. ಹಾಗೆಯೇ ಶೇಕಡ ೮ರಷ್ಟು ದೇವದಾಸಿಯರಿಗೆ ಮಕ್ಕಳಿಲ್ಲ, ಇಲ್ಲಿ ಅವರ ಖಾಸಗಿ ಜೀವನದ ಬಗ್ಗೆ ಹೆಚ್ಚು ಚರ್ಚೆ ನಡೆದಿಲ್ಲ. ಮಕ್ಕಳ ವಯಸ್ಸನ್ನು ನೋಡಿದರೇ ೪ ವರ್ಷದಿಂದ ೬೦ ವರ್ಷದವರೆಗೆ ಇದ್ದಾರೆ ದೇವದಾಸಿಯರ ಮಕ್ಕಳ ಶಿಕ್ಷಣದ ಶೇಕಡ ೩೬ರಷ್ಟು ಮಕ್ಕಳು ಮಾತ್ರ ಶಾಲೆಗೆ ಹೋಗಿದ್ದಾರೆ ಮತ್ತು ಹೋಗುತ್ತಿದ್ದಾರೆ. ಶೇಕಡ ೬೬ರಷ್ಟು ಮಕ್ಕಳು ಶಾಲೆಗೆ ಹೊಗಿಲ್ಲ ಮತ್ತು ಹೋಗುತ್ತಿಲ್ಲ ಅಂದರೆ ಅಧಿಕ ಪ್ರಮಾಣದಲ್ಲಿ ಶಾಲೆಯಿಂದ ಹೊರಗೆ ಇದ್ದಾರೆ. ಈಗ ಓದುತ್ತಿರುವವರು ಎಲ್ಲರೂ ಸಹ ಸರ್ಕಾರಿ ಶಾಲೆಯಲ್ಲಿ ಓದುತ್ತಿದ್ದಾರೆ ಮತ್ತು ಓದಿದ್ದಾರೆ. ಶೇಕಡ ೧೧.೫ರಷ್ಟು ಪ್ರಾಥಮಿಕ ಶಾಲೆಯಲ್ಲಿ, ಶೇಕಡ ೩.೫ರಷ್ಟು ಪ್ರೌಢಶಾಲೆಯಲ್ಲಿ, ಶೇಕಡ ೮.೫ರಷ್ಟು ಕಾಲೇಜು ಶಿಕ್ಷಣವನ್ನು ಮಾಡುತ್ತಿದ್ದಾರೆ, ಹಾಗೇ ಶಾಲೆಗೆ ಹೋಗಲು ಸಾಧ್ಯವಾಗಿಲ್ಲದ ಕಾರಣಗಳೆಂದರೆ; ವಯಸ್ಸಿನ ವ್ಯತ್ಯಾಸ, ಆಸಕ್ತಿಯಿಲ್ಲದಿರುವುದು, ಆರ್ಥಿಕ ಕಾರಣ ಮತ್ತು ತಂದೆಯ ಹೆಸರನ್ನು ಕೇಳಿದ್ದರಿಂದ, ಅವಮಾನ ಮುಂತಾದ ಕಾರಣಗಳನ್ನು ಹೇಳಿದ್ದಾರೆ. ಶಾಲೆಯಲ್ಲಿ ತಂದೆಯ ಹೆಸರನ್ನು ಮತ್ತು ತಾಯಿಯ ಹೆಸರನ್ನು ಕೇಳುತ್ತಿದ್ದರು. ಸರ್ಕಾರದ ಆದೇಶದ ನಂತರ ತಾಯಿಯ ಹೆಸರನ್ನು ಮಾತ್ರ ನೋಂದಣಿಯ

ಸಮಯದಲ್ಲಿ ಕೇಳುತ್ತಾರೆ. ಶೇಕಡ ೭.೫ರಷ್ಟು ಶಾಲೆಯಲ್ಲಿ ಜಾತಿ ಮತ್ತು ದೇವದಾಸಿಯ ಹಿನ್ನೆಲೆಯಿಂದ ಅವಮಾನವಾಗಿದೆ ಮತ್ತು ನಿಂದನೆಯಾಗಿದೆ. ಶಿಕ್ಷಣದ ಬಗ್ಗೆ ಗಮನಿಸಿದರೆ ನೋವಿನ ಸಂಗತಿ ಕಂಡುಬಂದಿದೆ. ದೇವದಾಸಿಯ ಮಕ್ಕಳೆಂದು ಅವಮಾನವಾಗಿದೆ ಮತ್ತು ಮಾನಸಿಕ ಕಿರಿಕಿರಿಯಾಗಿದೆ ಎಂದು ತಿಳಿಸಿದ್ದಾರೆ. ದೇವದಾಸಿಯ ಪದ್ಧತಿಯು ನಿರ್ಮೂಲನೆ ಮಾಡುವ ಪ್ರಮುಖ ಅಸ್ತ್ರದೊಲ್ಲೊಂದು ಶಿಕ್ಷಣ. ಆದರೆ ಈ ಸ್ಥಿತಿಗತಿಯನ್ನು ನೋಡಿದರೆ ಇನ್ನು ಮುಂದೆಯೂ ಸಹ ಈ ಪದ್ಧತಿಯು ಮುಂದುವರಿಯುವ ಲಕ್ಷಣಗಳಿವೆ ಎಂದು ಈ ಅಧ್ಯಯನದ ಮೂಲಕ ಅನುಮಾನಿಸಲಾಗಿದೆ.

೮. ದೇವದಾಸಿಯರ ವರಮಾನ, ಸಾಲ ಮತ್ತು ವೆಚ್ಚ ಇತ್ಯಾದಿಗಳನ್ನು ಆರ್ಥ ಮಾಡಿಕೊಳ್ಳುವು ದಾದರೆ ವರಮಾನವು ತುಂಬ ಅಲ್ಪ ಪ್ರಮಾಣದಾಗಿದೆ. ಸಾಲ ಮತ್ತು ವೆಚ್ಚ ಅಧಿಕವಾಗಿದೆ. ಅವರ ಆದಾಯವು ಸಾಮಾನ್ಯವಾಗಿ ಕೂಲಿ(ಹೊಲ ಮನೆ ಕೆಲಸ)ಯಿಂದ ಬರುತ್ತದೆ. ಮತ್ತೆ ಕೆಲವರು ಏನೂ ಕೆಲಸಕಾರ್ಯ ಮಾಡದೇ ತಮ್ಮ ಮಕ್ಕಳ ಪಾಲನೆಯಲ್ಲಿ ತೊಡಗಿದ್ದಾರೆ, ದೇವದಾಸಿಯರ ವಸತಿಯನ್ನು ನೋಡಿದರೆ ಅಧಿಕ ಪ್ರಮಾಣದಲ್ಲಿ ಮನೆಗಳನ್ನು ಹೊಂದಿರುವುದು ಕಂಡುಬರುತ್ತದೆ. ಕೆಲವರಿಗೆ ಮನೆ ಇರುವುದಿಲ್ಲ. ಇವರೆಲ್ಲಾ ತಮ್ಮ ಸಂಬಂಧಿಗಳ ಮನೆಗಳಲ್ಲಿ ವಾಸವಾಗಿದ್ದಾರೆ. ಅತ್ಯಧಿಕ ಪ್ರಮಾಣದಲ್ಲಿ ಶೌಚಾಲಯಗಳನ್ನು ಹೊಂದಿಲ್ಲ. ಕೆಲವರು ಮಾತ್ರ ಪಂಚಾಯಿತಿ ಸಹಾಯದಿಂದ ಕಟ್ಟಿಕೊಂಡು ಬಳಸುತ್ತಿದ್ದಾರೆ. ಉಳಿದವರು ಬಳಸದೇ ಕಾಲಿ ಬಿಟ್ಟಿದ್ದಾರೆ, ಮನೆಯಲ್ಲಿ ದಿನನಿತ್ಯ ಬಳಸುವ ಎಲ್ಲಾ ತರದ ವಿದ್ಯುತ್ ಉಪಕರಣಗಳು ಹೆಚ್ಚು ಕಡಿಮೆ ಎಲ್ಲರ ಮನೆಯಲ್ಲಿವೆ. ಜಮೀನು ಮಾತ್ರ ಬೆರಳೆಣಿಕೆಯಷ್ಟು ಜನರಿಗೆ ಮಾತ್ರ ಇದೆ. ಇತರೆ ಜಮೀನು ಪಿತ್ರಾರ್ಜಿತದಿಂದ ಬಂದಿದೆ ಮತ್ತು ಸರ್ಕಾರದಿಂದ ಯಾವುದೇ ಭೂಮಿ ಸಿಕ್ಕಿಲ್ಲ. ಭೂಮಿಯು ಬರೀ ಮಳೆಯಾಧಾರಿತವಾಗಿದೆ. ಹೀಗೆ ದೇವದಾಸಿಯರ ಅಭಿವೃದ್ಧಿಯು ಯಾವುದೇ ಸ್ತರದಲ್ಲೂ ಸಹ ಕಾಣುತ್ತಿಲ್ಲ ಮತ್ತು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಯಾವುದೇ ಪ್ರಮಾಣದಲ್ಲೂ ಈ ಸಮುದಾಯವು ಕಾಣುತ್ತಿಲ್ಲ ಮತ್ತು ಪ್ರಭುತ್ವದ ಯಾವುದೇ ಯೋಜನೆಗಳು ಇವರ ಸುಸ್ಥಿರ ಅಭಿವೃದ್ಧಿಗೆ ಪೂರಕವಾಗಿ ಸ್ಪಂದಿಸಿಲ್ಲ ಎಂದು ಹೇಳಬಹುದು.

೯. ದೇವದಾಸಿಯರು ತಮ್ಮ ತಮ್ಮ ಎಲ್ಲ ಹಳ್ಳಿಗಳಲ್ಲಿ ಸ್ವಸಹಾಯ ಗುಂಪುಗಳಲ್ಲಿ ಸದಸ್ಯರಾಗಿದ್ದಾರೆ. ವಾರದ ಮತ್ತು ತಿಂಗಳ ಉಳಿತಾಯ ಮಾಡುತ್ತಾರೆ ರೂ. ೧೦ರಿಂದ ೨೫ರವರೆಗೆ ಮಾತ್ರ ಸಾಧ್ಯವಾಗಿದೆ. ಆದರೆ ಕಡಿಮೆ ಸಂಖ್ಯೆಯಲ್ಲಿ ಮಾತ್ರ ಬ್ಯಾಂಕ್ ಖಾತೆಯಿದೆ. ಸಂಘದಿಂದ ಸಾಲವನ್ನು ತಮ್ಮ ಮಕ್ಕಳ ವಿದ್ಯಾಭ್ಯಾಸ, ಹಬ್ಬಹರಿದಿನ ಮತ್ತು ಮಕ್ಕಳ ಮದುವೆ ಮುಂತಾದವುಗಳಿಗೆ ತೆಗೆದು ಕೊಂಡಿದ್ದಾರೆ. ಬೆರಳಣಿಕೆಯಷ್ಟು ಮಾತ್ರ ಅವರ ಭವಿಷ್ಯತ್ ಜೀವನಕ್ಕಾಗಿ ವ್ಯಾಪಾರದಲ್ಲಿ ತೊಡಗಿಸಿದ್ದಾರೆ. ಒಟ್ಟಾರೆ ಆರ್ಥಿಕ ವಿಚಾರದಲ್ಲಿ ದೇವದಾಸಿಯರು ತುಂಬಾ ಹಿಂದುಳಿದ್ದಿದ್ದಾರೆ. ಅವರ ದಿನನಿತ್ಯದ ಖರ್ಚುವೆಚ್ಚವನ್ನು ತಮ್ಮ ಜೊತೆಯಿರುವ ಸಂಗಾತಿಗಳು ನೋಡಿಕೊಳ್ಳುತ್ತಾರೆ

ಈ ತರದ ಕೆಲವು ವಿಚಾರಗಳನ್ನು ಗುಂಪು ಚರ್ಚೆಯಲ್ಲಿ ಮತ್ತು ವೈಯಕ್ತಿಕ ಭೇಟಿಗಳಲ್ಲಿ ದೇವದಾಸಿಯರು ಹಂಚಿ ಕೊಂಡಿದ್ದನ್ನು ಕಲೆಹಾಕುವುದರ ಮೂಲಕ ಸತ್ಯವನ್ನು ಕಂಡು ಕೊಳ್ಳಲಾಗಿದೆ.

೧೦. ದೇವದಾಸಿ ಪದ್ಧತಿಯ ನಿಯಂತ್ರಣದ ಕಾರ್ಯಕ್ರಮಗಳು ಮತ್ತು ಸರ್ಕಾರದ ಕಲ್ಯಾಣ ಕಾರ್ಯಕ್ರಮಗಳನ್ನು ನೊಡಿದರೆ ಏನೇನು ಸಾಲದು ಎನಿಸುತ್ತದೆ. ಕರ್ನಾಟಕದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ೧೯೦೯ರ ದೇವದಾಸಿ ನಿಷೇಧಾಜ್ಞೆ ಕಾನೂನು ಇದರಲ್ಲಿ ಮುಖ್ಯವಾದ ಸಾಮಾಜಿಕ ಪಿಡುಗಾಗಿರುವ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಲು ಮೊಟ್ಟಮೊದಲ ಕಾನೂನನ್ನು ನಾಲ್ವಡಿ ಕೃಷ್ಣರಾಜ ಒಡೆಯರ್ ಜಾರಿಗೆ ತಂದದ್ದು ಸಾಮಾಜಿಕ ಬೆಳವಣಿಗೆಯಾಗಿದೆ. ಈ ಕಾನೂನನ್ನು ಜಾರಿಗೆ ತಂದಿದ್ದರಿಂದ ಬ್ರಿಟಿಷರಿಂದ ಪ್ರಸಂಶೆಯು ಬಂತು ಆದರೆ ಕರ್ನಾಟಕದಲ್ಲಿ ಇಲ್ಲಿಯವರೆಗೆ ಮೂರು ಕಾನೂನುಗಳು ಮಾತ್ರ ಬಂದಿವೆ. ಆದರೂ ಈ ಸಮುದಾಯಕ್ಕೆ ಯಾವುದೇ ಘನತೆ ತರುವ ಕೆಲಸವಾಗಿಲ್ಲವೆಂದೇ ಹೇಳಬಹುದು. ೧೯೮೨ರಲ್ಲಿ ದೇವದಾಸಿಯರ ಅರ್ಪಣಾ ನಿಷೇಧದ ಕಾಯ್ದೆಯನ್ನು ಜಾರಿಗೆ ತಂದು ದೇವದಾಸಿ ಪುನರ್ವಸತಿ ಕಾರ್ಯಕ್ರಮವನ್ನು ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಡಿಯಲ್ಲಿ ಸೇರಿಸಲಾಯಿತು. ಅದರಲ್ಲಿ ೪೫ ವರ್ಷ ಮೇಲ್ಪಟ್ಟವರಿಗೆ ತಿಂಗಳ ಮಾಸಾಶನವು(ಈ ಅಧ್ಯಯನದ ಸಮಯದಿಂದ) ಪ್ರಾರಂಭದಲ್ಲಿ ರೂ. ೪೦೦ ಇತ್ತು. ಪ್ರಸ್ತುತದಲ್ಲಿ ೧೫೦೦ಕ್ಕೆ ಹೆಚ್ಚಿಸಿದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೨೮೮೫ ಮಾಜಿ ದೇವದಾಸಿಯರಿಗೆ ಮಾತ್ರ ಮಾಸಾಶನ ದೊರೆಯುತ್ತಿದೆ. ಪ್ರಸ್ತುತ ಎರಡು ಸಮೀಕ್ಷೆಗಳ ಒಟ್ಟು ಸಂಖ್ಯೆ ೬೦೩೫. ಮೊದಲು ೧೯೯೩-೯೪ರ ಸಮೀಕ್ಷೆಯಲ್ಲಿ ೧೦ ಜಿಲ್ಲೆಗಳಲ್ಲಿ ೨೨೮೭೩ ದೇವದಾಸಿಯರು ಮಾತ್ರ ಇದ್ದರು. ೨೦೧೦-೧೧ರಲ್ಲಿ ೧೪ ಜಿಲ್ಲೆಗಳಲ್ಲಿ ಈ ಪದ್ಧತಿ ಕಂಡುಬಂದಿದೆ. ಹಾಗೆಯೇ ಅಧಿಕೃತವಾಗಿ ೨೩೭೮೭ ದೇವದಾಸಿಯರು ಲೆಕ್ಕಕ್ಕೆ ಸೇರಿದ್ದಾರೆ. ಪ್ರಸ್ತುತ ಒಟ್ಟು ೪೬೬೬೦ ದೇವದಾಸಿಯರು ಕರ್ನಾಟಕದ ರಾಜ್ಯದಲ್ಲಿ ಇದ್ದಾರೆ. ಇದು ಸರ್ಕಾರಿ ಲೆಕ್ಕ. ಆದರೆ ಸಂಘ ಸಂಸ್ಥೆಗಳು ನೀಡಿರುವ ಮತ್ತು ಹೇಳಿಕೆ ಕೊಟ್ಟಿರುವ ಪ್ರಕಾರ ವಿವಿಧ ರೀತಿಯ ಅಂಕಿಸಂಖ್ಯೆಗಳನ್ನು ನೊಡಬಹುದು. ವಸತಿ ಸೌಲಭ್ಯವು ಗ್ರಾಮಪಂಚಾಯಿತಿಯ ಮೂಲಕ ಅಗತ್ಯವಿರುವ ದೇವದಾಸಿಯರಿಗೆ ಆದ್ಯತೆಯ ಮೇರೆಗೆ ಆಯ್ಕೆ ಮಾಡುತ್ತಾರೆ. ಪ್ರಸ್ತುತ ರೂ. ೧೫೦೦೦೦ ಸಹಾಯದ ಮೊತ್ತ. ಆದರೆ ಇಲ್ಲಿ ಒಂದು ದ್ವಂದ್ವವು ಸಹ ಇದೆ. ಯಾರಿಗೆ ವಸತಿ ಭೂಮಿ ಇರುತ್ತದೋ ಅಂತಹವರಿಗೆ ಮಾತ್ರ ವಸತಿಯ ಸೌಲಭ್ಯವು ದೊರೆಯುತ್ತದೆ. ಭೂಮಿ ಇಲ್ಲದವರಿಗೆ ಯಾವುದೇ ಕಾರಣಕ್ಕೂ ಮನೆಯು ಸಿಗುತ್ತಿಲ್ಲವೆಂಬುದು ವಾಸ್ತವ. ಭೂಮಿಯಿಲ್ಲದವರಿಗೆ ಕೊಡುವ ಅವಕಾಶವಿದೆ. ಆದರೆ ಆ ಪ್ರಯತ್ನವು ಸಹ ಸರಿಯಾಗಿ ನೆರವೇರಿಲ್ಲ. ಹಾಗೆಯೇ ಸರ್ಕಾರಿ ಬ್ಯಾಂಕ್‌ಗಳಿಂದ ೨೦೦೦೦ ರೂ. ಸಾಲ ಸೌಲಭ್ಯವಿದೆ. ಆದರೆ ಯಾವುದೇ ಬ್ಯಾಂಕುಗಳು

ದೇವದಾಸಿಯರಿಗೆ ಸಾಲವನ್ನು ಕೊಡುತ್ತಿಲ್ಲ. ಆದರೆ ಮಧ್ಯವರ್ತಿಗಳ ಸಹಾಯದಿಂದ ಕೆಲವರು ಸಾಲವನ್ನು ಪಡೆದಿದ್ದಾರೆ. ಮತ್ತೆ ಕೆಲವರು ಬರೀ ಸಹಾಯ ಧನವನ್ನು ಮಾತ್ರ ತೆಗೆದುಕೊಂಡಿದ್ದಾರೆ. ಹಾಗೆ ಜಿಲ್ಲಾ ಕೇಂದ್ರದಲ್ಲಿ ಒಬ್ಬರು ಪುನರ್ವಸತಿ ಅಧಿಕಾರಿಗಳು ಇರುತ್ತಾರೆ. ಆರೋಗ್ಯ ತಪಾಸಣೆ, ಅರಿವು ಮೂಡಿಸುವುದಕ್ಕೋಸ್ಕರ ಬೀದಿ ನಾಟಕ ಮುಂತಾದ ಕಾರ್ಯಕ್ರಮಗಳು ಮಾತ್ರ ನಡೆದಿದೆ, ಕಳೆದ ಎರಡು ತಿಂಗಳಿನಲ್ಲಿ ಒಂದು ಹೊಸ ದೇವದಾಸಿಯ ಪ್ರಕರಣಗಳು ದಾಖಲಾಗಿದೆ. ನಂತರ ೨೦೦೯ರ ತಿದ್ದುಪಡಿ ಕಾಯ್ದೆಯಲ್ಲಿ ಇದರ ನಿಯಂತ್ರಣದ ಬಗ್ಗೆ ಒಲವು ತೋರಿದ್ದಾರೆ. ಜಿಲ್ಲಾಡಳಿತ ಮತ್ತು ನ್ಯಾಯವ್ಯವಸ್ಥೆಯು ನೇರವಾದ ಕಾರಣವಾಗುವಂತೆ ಕಾನೂನು ಮಾಡಿದ್ದಾರೆ. ರಾಜ್ಯ ಕಚೇರಿಯಲ್ಲಿ ಅಂದರೆ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿ ಒಂದು ಟೇಬಲ್ ಮತ್ತು ಒಬ್ಬ ವ್ಯಕ್ತಿ ಅಂದರೆ ಪ್ರಥಮ ದರ್ಜೆಯ ಸಹಾಯಕ ಹುದ್ದೆಗೆ ಸಮಾನಂತರವಾಗಿ ಇರುವ ಅಧಿಕಾರಿ ಇದ್ದಾರೆ. ವಿಚಾರವೆಂದರೆ ೧೪ ಜಿಲ್ಲೆಗಳಲ್ಲಿ ಈ ಸಾಮಾಜಿಕ ಪಿಡುಗು ಇದೆ. ಆದರೆ ಇದಕ್ಕೆ ನೇರವಾಗಿ ಕೆಲಸ ಮಾಡುವ ಒಂದು ಪ್ರತ್ಯೇಕ ಕಚೇರಿಯಿಲ್ಲ ಮತ್ತು ಉನ್ನತ ಅಧಿಕಾರಿಗಳು ಇಲ್ಲ. ನಿಗಮದ ವ್ಯವಸ್ಥಾಪಕ ನಿರ್ದೇಶಕರು ಸಹ ಹೆಚ್ಚು ಗಮನ ಹರಿಸಿಲ್ಲ. ಇಲ್ಲಿಯವರಗೆ ದೇವದಾಸಿಯಿರುವ ಜಿಲ್ಲೆಗಳಲ್ಲಿ ಸ್ವಯಂ ಸೇವಕರು ಇರುತ್ತಿದ್ದರು. ಅದನ್ನು ಸಹ ಸರ್ಕಾರವು ವಾಪಸ್ ಪಡೆದಿದೆ. ಅದರೂ ಕೂಡ ಕರ್ನಾಟಕವನ್ನು ಹೊರತುಪಡಿಸಿದರೆ ಬೇರೆ ರಾಜ್ಯಗಳಲ್ಲಿ ಇಷ್ಟು ಪ್ರಮಾಣದಲ್ಲಿ ಕಾರ್ಯಕ್ರಮಗಳಗಾಲೀ ಮತ್ತು ಯೋಜನೆಗಳಾಗಲೀ ಅನುಷ್ಠಾನವಾಗಿಲ್ಲ ಎನ್ನುವುದು ಒಂದು ಮಹತ್ವದ ಸಂಗತಿ. ಆದರೆ ಈ ಪದ್ಧತಿಯ ಆಳ, ಸಂಕೀರ್ಣತೆ ಬೇರೆ ಯಾವ ರಾಜ್ಯದಲ್ಲೂ ಇಲ್ಲ ಎನ್ನುವುದು ಸಹ ಸತ್ಯಕ್ಕೆ ಹತ್ತಿರವಿರುವ ಮಾತು.

೧೧. ದೇವದಾಸಿಯರು ಎಲ್ಲಾ ತರದ ಐಡೆಂಟಿಟಿ ಕಾರ್ಡ್‌ಗಳನ್ನು ಹೊಂದಿದ್ದಾರೆ. ಮತ ಚಲಾಯಿಸುವ ಹಕ್ಕು ಇದೆ ಮತ್ತು ಕೆಲವು ದೇವದಾಸಿಯರು ಗ್ರಾಮಪಂಚಾಯಿತಿಯಲ್ಲಿ ಸ್ಪರ್ಧಿಸಿದ್ದಾರೆ. ಅದರಲ್ಲಿ ಅತ್ಯಲ್ಪ ಫಲಿತಾಂಶವನ್ನು ಕಂಡಿದ್ದಾರೆ. ಆದರೆ ಅವರ ಭಾಗವಹಿಸುವಿಕೆ ಮುಖ್ಯದ್ದಾಗಿದೆ. ಹಳ್ಳಿಗಳಲ್ಲಿ ರಾಜಕೀಯ ಸಮಯದಲ್ಲಿ ಊರಿನ ಮತ್ತು ತಮ್ಮದೇ ಸಮುದಾಯದ ಜನರು ಬೆಂಬಲ ನೀಡಿದ್ದಾರೆ. ಕೆಲವರು ನೀಡಿಲ್ಲ ಏಕೆಂದರೆ ಒಬ್ಬ ದೇವದಾಸಿಯು ಗ್ರಾಮದ ತೀರ್ಮಾನಗಳನ್ನು ತೆಗೆದುಕೊಳ್ಳುವುದು ಊರಿನ ಜನರು ಮತ್ತು ಸಮುದಾಯದ ಪುರುಷರು ಸಹಿಸುವುದಿಲ್ಲ ಎಂಬ ಕಹಿ ಸತ್ಯವನ್ನು ಸಹ ದೇವದಾಸಿಯರು ಚರ್ಚೆಯಲ್ಲಿ ಹಂಚಿಕೊಂಡಿದ್ದಾರೆ.

೧೨. ದೇವದಾಸಿ ಪದ್ಧತಿಗೆ ಮತ್ತು ಪ್ರಸ್ತುತದಲ್ಲಿರುವ ಮಾಜಿ ದೇವದಾಸಿಯರ ರಚನಾತ್ಮಕವಾದ ಸುಸ್ಥಿರ ಅಭಿವೃದ್ಧಿಯ ನಿರೀಕ್ಷಣೆಗಳೆಂದರೆ ರಾಜಕಾರಣಿಗಳಿಂದ, ಸರ್ಕಾರದಿಂದ ಅವರ ಮಕ್ಕಳ ಭವಿಷ್ಯತ್ ಜೀವನಕ್ಕಾಗಿ ದೇವದಾಸಿಯರ ಕಟ್ಟುನಿಟ್ಟಿನ ಕಾನೂನು, ಸರಿಯಾದ ಸಮಯಕ್ಕೆ ಸಿಗುವಂತಹ ಮಾಸಾಶನ, ಸೌಲಭ್ಯಗಳ ಹೆಚ್ಚಳ, ಮಕ್ಕಳಿಗೆ ಉನ್ನತ ಶಿಕ್ಷಣದಲ್ಲಿ ಪ್ರವೇಶ

ಪರೀಕ್ಷೆಗಳಿಲ್ಲದೆ ಮೀಸಲಾತಿ, ಉದ್ಯೋಗದಲ್ಲಿ ಸಡಿಲಿಕೆ, ರಾಜಕೀಯದಲ್ಲಿ ಅವಕಾಶ, ನೀರಾವರಿ ಭೂಮಿ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಜನರಲ್ಲಿರುವ ಭಾವನೆಯು ಬದಲಾಗಬೇಕು. ಈ ಪದ್ಧತಿಯ ಮತ್ತು ಇರುವ ದೇವದಾಸಿಯರ ಬಗ್ಗೆ ಇರುವ ವರ್ತನೆ ಬದಲಾಗಬೇಕು. ದೇವದಾಸಿಯರು ಸಹ ಮನುಷ್ಯರು ಎಂಬ ಸಾರ್ವತ್ರಿಕ ಸತ್ಯವನ್ನು ಸಮಾಜವು ಅರ್ಥ ಮಾಡಿಕೊಳ್ಳಬೇಕು. ಹೀಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಅಧ್ಯಯನದಲ್ಲಿ ತಿಳಿಸಿದ್ದಾರೆ.

### ೬.೨. ಅಧ್ಯಯನದ ಶಿಫಾರಸ್ಸುಗಳು

ಯಾವುದೇ ಅಧ್ಯಯನಕ್ಕೆ ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳಲು ಅವಕಾಶವಿದೆ. ಆ ಅವಕಾಶದ ವಿಧಾನದಲ್ಲಿ ಸಲಹೆ, ಸೂಚನೆ ಮತ್ತು ಶಿಫಾರಸ್ಸುಗಳ ರೂಪದಲ್ಲಿ ಅಧ್ಯಯನದ ಸತ್ಯ ಮತ್ತು ಅನುಮಾನಿತ ಸತ್ಯಗಳನ್ನು ಸಮಾಜಕ್ಕೆ, ಸಮುದಾಯಕ್ಕೆ, ಪ್ರಭುತ್ವದ ಸಂಬಂಧಪಟ್ಟ ಇಲಾಖೆಗಳಿಗೆ ಕೊಡಬಹುದು. ಒಟ್ಟಾರೆ ಇದರ ಆಶಯ ಇಲ್ಲಿಯವರೆಗಿನ ಚರ್ಚೆಯನ್ನು ಮತ್ತು ಅದರ ಮೇಲಿನ ಕೆಲಸ ಕಾರ್ಯಗಳನ್ನು ಮುಂದುವರಿಸಲು ಮತ್ತು ನೀತಿ ನಿರೂಪಣೆಯಂತಹ ಮಹತ್ವದ ಹೆಜ್ಜೆಗಳನ್ನು ಇಡಲು ಈ ಶಿಫಾರಸ್ಸುಗಳಾಗಲಿ ಅಥವಾ ಸಲಹೆ ಸೂಚನೆಗಳಗಾಲಿ ಕೆಲಸಕ್ಕೆ ಬರಬಹುದು ಎಂಬ ನಂಬಿಕೆಯನ್ನು ಅಧ್ಯಯನವು ನಿರೀಕ್ಷಿಸುತ್ತದೆ ಮತ್ತು ಅಧ್ಯಯನದಲ್ಲಿ ಕಂಡುಬಂದ ಸತ್ಯಗಳನ್ನು ಪ್ರತಿಪಾದಿಸುವಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವನ್ನು ಈ ಸಂಶೋಧನೆಯಲ್ಲಿ ಕಂಡುಕೊಳ್ಳಲಾಗಿದೆ.

**ಈ ಅಧ್ಯಯನದ ಶಿಫಾರಸ್ಸುಗಳನ್ನು ಎರಡು ವಿಧಗಳಲ್ಲಿ ನೋಡಬಹುದು**

೧. ಕಟ್ಟುನಿಟ್ಟಿನ ಕಾನೂನುಬದ್ಧ ನಿಯಂತ್ರಣ ಮತ್ತು ಶಾಶ್ವತ ಪುನರ್ವಸತಿ ಅಂಶಗಳು– ಮೊದಲು ಆ ಸಮುದಾಯಕ್ಕೆ ಎರಡು ರೀತಿಯ ಶಿಕ್ಷಣದ ಅವಶ್ಯಕತೆಯಿದೆ. ಅವುಗಳೆಂದರೆ; ಅರಿವು, ಪದ್ಧತಿಯ ಸಮಗ್ರ ಚಿತ್ರಣದ ಮೂಲಕ ಪ್ರಜ್ಞಾವಂತರಾಗುವುದು. ದೇವದಾಸಿ ಸಮಸ್ಯೆಯಿಂದ ಬಳಲುತ್ತಿರುವ ಸಮುದಾಯಗಳಲ್ಲಿ ಈ ಪದ್ಧತಿಯ ಬಗ್ಗೆ ಜಾಗೃತಿ ಹೆಚ್ಚಾಗಬೇಕು. ಎರಡನೆಯದು ಸಾರ್ವತ್ರಿಕ ಶಿಕ್ಷಣ ಅಂದರೆ ಸಮುದಾಯದ ಹೊಸ ಪೀಳಿಗೆಗೆ ವೈಜ್ಞಾನಿಕ ಮತ್ತು ಮುಂದುವರಿದ ಶಿಕ್ಷಣವನ್ನು ಒದಗಿಸುವುದು. ಬಾಬಾ ಸಾಹೇಬರು ತಿಳಿಸಿರುವಂತೆ ಜನ ಜಾಗೃತಿ ಮತ್ತು ಅಕ್ಷರ ಕ್ರಾಂತಿ ಒಂದು ಸಮುದಾಯದ ಹಿತವನ್ನು ಕಾಪಾಡಲು ಸಹಕರಿಸುತ್ತದೆ. ದೇವದಾಸಿಯರ ಮಕ್ಕಳಿಗೆ ಶಿಕ್ಷಣದ ಪ್ರವೇಶದಲ್ಲಿ ಸಡಿಲಿಕೆ ನೀಡಿ ಅವರ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಡ ಬೇಕು. ನಂತರ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕಟ್ಟುನಿಟ್ಟಿನ ಕಾಯ್ದೆಯನ್ನು ಮತ್ತು ಈಗಿರುವ ಕಾಯ್ದೆಯನ್ನು ಪರಿಷ್ಕರಿಸಿ ಈ ಪದ್ಧತಿಯ ಸಂಪೂರ್ಣ ನಾಶಕ್ಕೆ ಸೂತ್ರದಾರಿಯಾಗಬೇಕು. ಸಂಬಂಧಪಟ್ಟ ಇಲಾಖೆಗಳಿಗೆ ಉದಾಹರಣೆಗೆ ಮಹಿಳಾ ಮತ್ತು ಮಕ್ಕಳ ಇಲಾಖೆ, ಮಹಿಳಾ ಅಯೋಗ, ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಮತ್ತು ಸಮಾಜ ಕಲ್ಯಾಣ ಇಲಾಖೆ, ಇತ್ತೀಚಿನ ಪರಿಶಿಷ್ಟರ ದೌರ್ಜನ್ಯ ತಡೆ ಕಾಯ್ದೆ ೨೦೧೩ರ ತಿದ್ದುಪಡಿಯಲ್ಲಿಯೂ ಸಹ ದೇವದಾಸಿಯ ಹೊಸ ಪ್ರಕರಣಗಳನ್ನು ಕಾನೂನು ರೀತಿಯ ಕ್ರಮವನ್ನು ತೆಗೆದುಕೊಳ್ಳಲು

ಅವಕಾಶ ಮಾಡಿಕೊಡಬೇಕು. ದೇವದಾಸಿ ಪುನರ್ವಸತಿ ಯೋಜನೆಯ ಜೊತೆ ಉಳಿದ ಎಲ್ಲಾ ಇಲಾಖೆಗಳಲ್ಲಿ ದೇವದಾಸಿಯಿರಿಗೆ ಅವರ ಅಭಿವೃದ್ಧಿಯ ಪೂರಕವಾಗಿ ತಮ್ಮ ಸಾಮಾಜಿಕ ಹಿನ್ನಲೆ ಮತ್ತು ಮೀಸಲಾತಿಯ ಅನುಗುಣವಾಗಿ ಅವಕಾಶಗಳು ದೊರೆಯಬೇಕು ಜೊತೆಗೆ ಅದನ್ನು ಅನುಷ್ಠಾನ ಮಾಡುವ ಮನಸ್ಸುಗಳು ಪರಿಶುದ್ಧವಾಗಿರಬೇಕು. ನಂತರ ಪೊಲೀಸ್ ಮತ್ತು ನ್ಯಾಯಿಕ ಸಂಸ್ಥೆಗಳಲ್ಲಿ ಪ್ರಾಮಾಣಿಕವಾದ ಕೆಲಸಗಳು ನಡೆಯುವಂತೆ ಕಾಯ್ದೆಗಳು ರೂಪುಗೊಳ್ಳಬೇಕು. ಈ ಪದ್ಧತಿಯ ನಿರ್ಮೂಲನೆಯವರೆಗೂ ಪೂರ್ಣಪ್ರಮಾಣದ ಖಾಯಂ ಹುದ್ದೆಗಳನ್ನು ಸೃಷ್ಟಿಸಿ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವಂತೆ ವಾತಾವರಣವನ್ನು ಸೃಷ್ಟಿಸಬೇಕು, ಮಾಜಿ ದೇವದಾಸಿಯರು ಮತ್ತು ಕಡಿಮೆ ವಯಸ್ಸಿನ ಯುವ ದೇವದಾಸಿಯರಿಗೆ ಕಾನೂನಿನ ಮೂಲಕ ಶಾಶ್ವತ ಪುನರ್ವಸತಿ ಕೆಲಸಗಳನ್ನು ಆಯೋಜಿಸಬೇಕು ತ್ವರಿತ ರೀತಿಯಲ್ಲಿ ಕೈಗೊಳ್ಳಬೇಕು. ಅಂದರೆ ಈಗಿರುವ ತತ್‌ಕ್ಷಣದ ಸಮಾಧಾನವನ್ನು ಮಾಡುವಂತಹ ಕಾರ್ಯಕ್ರಮಗಳಲ್ಲ. ಅವರ ಸುಸ್ಥಿರ ಅಭಿವೃದ್ಧಿಗಾಗಿ ಯೋಜನೆಗಳನ್ನು ರೂಪಿಸಬೇಕು. ದೇವದಾಸಿ ಎಂದಮೇಲೆ ಯಾವುದೇ ವಯಸ್ಸಿನ ತಾರತಮ್ಯವಿರಬಾರದು ಎಲ್ಲರಿಗೂ ಸರ್ಕಾರಿ ಅವಕಾಶಗಳು ದೊರೆಯ ಬೇಕು. ಹಳೆಯ ಮತ್ತು ಸಂಪ್ರದಾಯ ಪದ್ಧತಿಗಳನ್ನು ಕೈಬಿಡುವಂತೆ ಸಮುದಾಯಗಳಲ್ಲಿ ವೈಚಾರಿಕ ನಿಲುವುಗಳನ್ನು ತಾಳಲು ಕರೆ ನೀಡಬೇಕು. ದೇವರಿಗೆ ಅರ್ಪಿಸುವುದನ್ನು ನಿಷಿದ್ಧ ಗೊಳಿಸುವುದು ಮತ್ತು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಂತೆ ಮಾಡುವುದು.

೨. ಪ್ರಕ್ರಿಯಾತ್ಮಕ ಮತ್ತು ರೋಗನಿಧಾನಾತ್ಮಕ ಅಂಶಗಳು – ಸಂಶೋಧನೆ, ಕ್ರಿಯಾತ್ಮಕ ಸಂಶೋಧನೆ ಮತ್ತು ಸರ್ಕಾರವು ಸಂಘಟಿಸುವ ದೇವದಾಸಿಯರ ಸಮಗ್ರ ಮತ್ತು ಕುಟುಂಬವಾರು ಸಮೀಕ್ಷೆ ಮತ್ತು ಸಂದರ್ಭಕ್ಕನುಗುಣವಾಗಿ ಇಲ್ಲವೆ ಸಮಸ್ಯೆಗನುಗುಣವಾಗಿ ಕೈಗೊಳ್ಳುವ ಅಧ್ಯಯನಗಳು ನಡೆಯಬೇಕು. ವಿಶೇಷವಾಗಿ ದೇವದಾಸಿಯರ ಸಮಗ್ರ ಮಾಹಿತಿಯನ್ನು ಈಗಾಗಲೇ ಕಂಡು ಬಂದಿರುವ ೧೪ ಜಿಲ್ಲೆಗಳಲ್ಲಿ ದೇವದಾಸಿಯಿರುವ ಹಳ್ಳಿಗಳಲ್ಲಿ ಮತ್ತು ನಗರಗಳಲ್ಲಿ ಕುಟುಂಬವಾರು ಸಮೀಕ್ಷೆ ಸರ್ಕಾರದ ವತಿಯಿಂದ ಮತ್ತು ಸರ್ಕಾರ ನೇಮಕಮಾಡಿರುವ ಒಂದು ಆಯೋಗ ಇಲ್ಲವೇ ಸಮಿತಿಯ ಮೂಲಕ ಮತ್ತು ಒಂದು ತಜ್ಞರ ತಂಡವನ್ನು ರಚಿಸಿ ವೈಜ್ಞಾನಿಕ ರೀತಿಯಲ್ಲಿ ಸಮೀಕ್ಷೆ ನಡೆಸಿ ಅದರ ಮೂಲಕ ನಿಯಂತ್ರಣ ಮತ್ತು ಶಾಶ್ವತವಾದ ಪುನರ್ವಸತಿಯನ್ನು ಸರ್ಕಾರದ ವತಿಯಿಂದ ನಡೆಯಬೇಕು ಮತ್ತು ಸರ್ಕಾರವು ಇದರ ಪ್ರಗತಿಯ ಬಗ್ಗೆ ಪರಿಶೀಲನೆಯನ್ನು ನಡೆಸುತ್ತಿರಬೇಕು ಮಾನವ ಅಭಿವೃದ್ಧಿ ವರದಿ ಮತ್ತು ಪ್ರಾದೇಶಿಕ ಸಂದರ್ಭಕ್ಕನು ಗುಣವಾಗಿ ನಡೆಯುವ ಅಧ್ಯಯನ ಇಲ್ಲವೇ ಸಮೀಕ್ಷೆಗಳಲ್ಲಿ ದೇವದಾಸಿಯರಿಗೆ ಸಂಬಂಧಿಸಿದಂತೆ ಅಧ್ಯಾಯ ಇಲ್ಲವೇ ಉಪ ಅಧ್ಯಾಯಗಳನ್ನು ಸೇರಿಸಿ ಇವರ ಪ್ರಸ್ತುತದ ಸ್ಥಿತಿಗತಿಯನ್ನು ಸಮಾಜಕ್ಕೆ ಮತ್ತು ಸರ್ಕಾರದ ಗಮನಕ್ಕೆ ತಂದು ಕಾಯ್ದೆ ಮತ್ತು ಯೋಜನೆಗಳನ್ನು ಸಮಗ್ರವಾಗಿ ರೂಪಿಸಬೇಕು.

## ೬.೩. ಅಧ್ಯಯನದ ಮುಕ್ತಾಯ

ಯಾವುದೇ ಸಂಶೋಧನೆ ಅಥವಾ ಅಧ್ಯಯನವಾಗಲೀ ಅದಕ್ಕೊಂದು ಕೊನೆಯಿರುತ್ತದೆ. ಆ ಕೊನೆಯು ತನ್ನ ಸಮಯ, ಸಂಪನ್ಮೂಲ, ಅನುಭವ, ಇತ್ಯಾದಿ ಇತಿಮಿತಿಗಳನ್ನು ಒಳಗೊಂಡ ಈ ಸಂಶೋಧನೆಯಿಂದ ದೇವದಾಸಿ ಸಮುದಾಯದಲ್ಲಿ ಸ್ವಲ್ಪ ಪ್ರಮಾಣದ ಜಾಗೃತಿ ಬಂದು ತಮ್ಮ ತಮ್ಮ ಸಮಸ್ಯೆಗಳನ್ನು ಬಗೆಹರಿಸಲು ತಾವೇ ದನಿಯನ್ನು ಎತ್ತುವಂತಾಗಬೇಕು, ಸರ್ಕಾರ, ಸಂಬಂಧಪಟ್ಟ ಇಲಾಖೆಗಳು, ಕಾನೂನುಗಳು, ಆದೇಶಗಳು ಇವರಿಗೆ ಪೂರಕವಾಗಿ ಮತ್ತು ಅಭಿಮುಖವಾಗಿ ಕಾರ್ಯ ನಿರ್ವಹಿಸಲು ಎಲ್ಲಾ ರೀತಿಯಲ್ಲೂ ಸಹ ಪ್ರೋತ್ಸಾಹಿಸಬೇಕು. ಅಭಿವೃದ್ಧಿ ಎನ್ನುವ ಪರಿಕಲ್ಪನೆ ಸಾಮಾಜಿಕವಾಗಿ ಪ್ರತ್ಯೇಕತೆಯಲ್ಲಿರುವ ವರ್ಗದಿಂದ ಪ್ರಾರಂಭವಾದರೆ ಇಂತಹ ಕಟ್ಟಕಡೆಯ ಸಮುದಾಯಕ್ಕೆ ವಿಮೋಚನೆ ಮತ್ತು ಬಲವರ್ಧನೆ ದೊರೆಯುತ್ತದೆ. ಇಲ್ಲಿಯವರೆಗಿನ ಪುನರ್ವಸತಿಯು ಕೇವಲ ತಾತ್ಕಾಲಿಕ ನೆರವನ್ನು ಕೊಟ್ಟಿರುವುದಷ್ಟೇ ಎನಿಸುತ್ತದೆ. ಆದ್ದರಿಂದ ದೇವದಾಸಿಯರ ಸರ್ವತೋಮುಖ ಬೆಳವಣಿಗೆಗೆ ಸಮಗ್ರ ಮತ್ತು ವೈಜ್ಞಾನಿಕವಾಗಿ ಈ ಪದ್ಧತಿಯ ವಿರುದ್ಧ ಮತ್ತು ಈಗಿರುವ ದೇವದಾಸಿಯರಿಗೆ ಎಲ್ಲಾ ವಯಸ್ಸಿನವರನ್ನು ಒಳಗೊಂಡಂತೆ ಶಾಶ್ವತ ಪರಿಹಾರೋಪಾಯ ಗಳನ್ನು ಸುಗಮಗೊಳಿಸುವುದರ ಮೂಲಕ ಸಂಪೂರ್ಣವಾಗಿ ಈ ಪದ್ಧತಿಯ ನಾಶಕ್ಕೆ ಹೆಜ್ಜೆಯಿಡ ಬೇಕಾಗಿದೆ. ಈ ಸನ್ನಿವೇಶದಲ್ಲಿ ಬಾಬಾಸಾಹೇಬ್ ಅಂಬೇಡ್ಕರರು ನೀಡಿರುವ ಸಂವಿಧಾನದಲ್ಲಿ ಪ್ರಸ್ತಾಪಿಸಿರುವಂತೆ ಸಮಾನತೆ, ಅಸ್ಪೃಶ್ಯತಾ ನಿರ್ಮೂಲನೆ, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಸಕಾರಗೊಳಿಸಿದರೆ ಇಂತಹ ಪದ್ಧತಿಯನ್ನು ಬೇರು ಸಹಿತ ಕೀಳಬಹುದು. ಸಂವಿಧಾನದ ಮೂಲ ಬೇರುಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವ ಮೌಲ್ಯಗಳು ಎಲ್ಲರಲ್ಲಿಯೂ ಮೂಡದಿದ್ದರೆ ಅನ್ಯಾಯ, ಅಸಮಾನತೆ, ತಾರತಮ್ಯಗಳು ನಡೆಯುತ್ತಲೇ ಇರುತ್ತವೆ. ಅಂಧತ್ವದ ಕಾಮುಕತೆ, ಜಾತಿ ಮತ್ತು ಉಪಜಾತಿಗಳಲ್ಲಿನ ತಾರತಮ್ಯತೆ, ಸಾಮಾಜಿಕ ಲಿಂಗತ್ವದ ಅಸಮಾನತೆ, ಆರ್ಥಿಕ ಏರುಪೇರುಗಳ ಹಿನ್ನಲೆಯಲ್ಲಿ ಅರ್ಥ ಮಾಡಿಕೊಳ್ಳುವ ತುರ್ತು ಅಗತ್ಯವಿದೆ. ಮೇಲೆ ತಿಳಿಸಿದ ಎಲ್ಲ ತಾರತಮ್ಯಗಳ ನಡುವೆ ಒಂದು ಸಹಜ ಮತ್ತು ಅಸಹಜವಾದ ಸಂಪರ್ಕಗಳು ಕೆಲಸ ಮಾಡುತ್ತಿವೆ. ಹಾಗೇಯೇ ದೇವದಾಸಿಯು ಬಡವಳು, ಕೆಳಜಾತಿ, ಮಹಿಳೆ, ದಲಿತ ಮಹಿಳೆಯಾಗಿರುವುದರಿಂದ ನಾಲ್ಕು ತರದ ತಾರತಮ್ಯಗಳು ಒಂದು ಪದ್ಧತಿಯನ್ನು ಗಟ್ಟಿಯಾಗಿ ಜೀವಿಸಲು ಮತ್ತು ಮುಂದುವರಿಯಲು ಕಾರಣವಾಗಿದೆ. ಆದ್ದರಿಂದ ಈ ಸಮುದಾಯದ ಸಮಗ್ರ ಬದಲಾವಣೆಗೆ ಎಲ್ಲಾ ರೀತಿಯಲ್ಲೂ ಅಂದರೆ ಸಮಾಜ, ಸಮುದಾಯ, ಸರ್ಕಾರ, ಕುಟುಂಬ ಮತ್ತು ಇತರೆ ಸಂಬಂದಪಟ್ಟ ಸಂಘ–ಸಂಸ್ಥೆ, ಚಳುವಳಿ–ಆಂದೋಲನಗಳು, ಕಾಯ್ದೆ ಮತ್ತು ಪುನರ್ವಸತಿ ಯೋಜನೆಗಳು ಈ ಪದ್ಧತಿಯ ವಿರುದ್ಧವಾಗಿ ಮತ್ತು ಈ ಸಮುದಾಯದ ಅಭಿವೃದ್ಧಿಗೆ ಪೂರಕವಾಗಿ ಕೆಲಸ ಮಾಡುವ ಅಗತ್ಯವಿದೆ ಎಂದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಹಾಗೇ ಈ ಅಧ್ಯಯನವು ಅಂತ್ಯವಲ್ಲ ಆದರೆ ಮತ್ತೊಂದು ಅಧ್ಯಯನ ಇಲ್ಲವೇ ಚರ್ಚೆಗೆ ಈ ಅಧ್ಯಯನವು ವೇದಿಕೆ ಮತ್ತು ಆಕರವಾಗ ಬೇಕೆಂದು ಈ ಅಧ್ಯಯನವು ಬಯಸುತ್ತದೆ ಮತ್ತು ಅಂತಹ ವಿಚಾರಗಳನ್ನು ಈ ಸಂಶೋಧನೆಯ ಮೂಲಕ ಗ್ರಹಿಸಲಾಗಿದೆ.

# ಅನುಬಂಧ

* ಪರಾಮರ್ಶನ ಗ್ರಂಥಗಳು
* ಸಂಶೋಧನಾ ವರದಿಗಳು
* ನಿಯತಕಾಲಿಕೆಗಳು
* ಪತ್ರಿಕೆಗಳು, ವೆಬ್‌ಸೈಟ್ / ಅಂತರ್ಜಾಲ
* ವ್ಯಕ್ತಿಗಳೊಂದಿಗೆ ಚರ್ಚೆ

# ಆಕರ ಗ್ರಂಥಗಳು

## ಕನ್ನಡ ಪುಸ್ತಕಗಳು

೧. ಅಂಬೇಡ್ಕರ್ ಬಿ.ಆರ್., (ಮೂಲ) ಕುಮಾರ ವೆಂಕಣ್ಣ ಕನ್ನಡಕ್ಕೆ, ೧೯೬೩, ಅಸ್ಪೃಶ್ಯರು, ಪಾಪಚ್ಚಿ ಪ್ರಕಾಶನ, ಬೆಂಗಳೂರು.

೨. ಅರವಿಂದ ಚೊಕ್ಕಾಡಿ, (೨೦೦೯) ಮಹಿಳಾ ಸಬಲೀಕರಣದ ನೆಲೆಗಳು, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಅಲ್ಲಮಪ್ರಭು ಬೆಟದೂರ, (೧೯೯೯) ಕೊಪ್ಪಳ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೪. ಆನೇಕ, (೨೦೧೪), ಜೋಗಪ್ಪ: ಲಿಂಗತ್ವ, ಆಸ್ಮಿತೆ ಮತ್ತು ಸಾಮಾಜಿಕ ಬಹಿಷ್ಕರಣೆ, ಆನೇಕ, ಬೆಂಗಳೂರು.

೫. ಉತ್ತಮ ಕಾಂಬಳೆ, (೨೦೧೩), (ಮರಾಠಿ) ಕನ್ನಡಕ್ಕೆ ಡಾ. ಸಿದ್ರಾಮ ಕಾರಣಿಕ, ದೇವದಾಸಿ ಮತ್ತು ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ.

೬. ಉಷಾ ಎಂ., (೨೦೦೫), ವೇಶ್ಯಾಪದ್ಧತಿ (ಸಂ) ಡಾ. ವಿಜಯಶ್ರೀ ಸಬರದ, ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು), ಪ್ರಸಾರಾಂಗ, ಗುಲಬರ್ಗ ವಿಶ್ವವಿದ್ಯಾಲಯ.

೭. ಒಡೆಯರ್ ಡಿ. ಹೆಗ್ಗಡೆ, (೨೦೦೭), ಮಹಿಳಾ ಅಧ್ಯಯನಗಳ ಪದಕೋಶ, ಸ್ನಾತಕೋತ್ತರ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮಂಡ್ಯ.

೮. ಕರ್ನಾಟಕ ಸರ್ಕಾರ, ೨೦೦೧, ೨೦೧೧, ಕರ್ನಾಟಕ ಜನಗಣತಿ ವರದಿ, ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

೯. ಕನ್ನಡ-ಅಂಗ್ಲ ಡಿಕ್ಷನರಿ, (೨೦೦೫), ಪರಿಸ್ಕೃತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೦. ಕಮಲಾ ಭಾಸಿನ್ (೨೦೧೬), (ಲೇ) ಭಾರತದ ಸನ್ನಿವೇಶದಲ್ಲಿ ಸ್ತ್ರೀ ಸಬಲೀಕರಣ, ಯೋಜನಾ ಮಾಸಪತ್ರಿಕೆ, ಭಾರತ ಸರ್ಕಾರ.

೧೧. ಕಮಲಾ ಹಂಪನಾ, (೨೦೦೩), ದೇವದಾಸಿ-ಧರ್ಮ-ದೇವರು, ಮಹಿಳೆ ಸುತ್ತಮುತ್ತ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೧೨. ಕಲಾವತಿ ಬಿ.ಜಿ., ಮಾಧ್ಯಮ ಮತ್ತು ಮಹಿಳೆ ಮೇಲಿನ ಲೇಖನದಲ್ಲಿ ಮಹಿಳೆ ಮತ್ತು ಮಾಧ್ಯಮ.

೧೩. ಗಾಯತ್ರಿ ಎನ್., (೧೯೯೬), ಮಹಿಳೆ ಬಿಡುಗಡೆಯ ಹಾದಿಯಲ್ಲಿ ಅಧ್ಯಯನದಲ್ಲಿ ನಿತ್ಯ ಸುಮಂಗಲಿಯರ ಪಾಡು ಎಂಬ ಅಧ್ಯಾಯದಲ್ಲಿ ದೇವದಾಸಿ ಎಂಬ ಉಪ ಅಧ್ಯಾಯದಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೪. ಗುರುಲಿಂಗಯ್ಯ, (೨೦೧೦), ಸಾಮಾಜಿಕ ಹೊರತಳ್ಳುವಿಕೆಯ ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಚಂದ್ರ ಪೂಜಾರಿ ಎಂ., (೨೦೦೮), ಸಂಶೋಧನಾ ಪ್ರಸ್ತಾವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಚಂದ್ರ ಪೂಜಾರಿ ಎಂ., (೨೦೦೯) ಸಂಶೋಧನೆ: ಏನು? ಏಕೆ? ಹೇಗೆ?, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಚಂದ್ರ ಪೂಜಾರಿ ಎಂ., (೨೦೧೦), ಪರ್ಯಾಯ ಸಮಾಜ ಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಚಂದ್ರಶೇಖರ ಟಿ.ಆರ್., (೧೯೯೩), ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.

೧೮. ಚಂದ್ರಶೇಖರ ಟಿ.ಆರ್., (೧೯೯೯), ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೯. ಚಂದ್ರಶೇಖರ ಟಿ.ಆರ್., (೧೯೯೯), ಸಂಯೋಜಕರು, ಜಿಲ್ಲಾ ಅಭಿವೃದ್ಧಿ ಅಧ್ಯಯನ; ಕೊಪ್ಪಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ಚಂದ್ರಶೇಖರ್ ಟಿ.ಆರ್., (೨೦೦೦), ಲಿಂಗ ಸಂಬಂಧಿ ಅಭಿವೃದ್ಧಿ ಅದ್ಯಯನ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ಚಂದ್ರಶೇಖರ ಟಿ.ಆರ್., (೨೦೦೩), ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೨೨. ಚಂದ್ರಶೇಖರ ಟಿ.ಆರ್., (೨೦೦೫), ಜನರ ಯೋಜನೆ, ಕರ್ನಾಟಕದ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಚಂದ್ರಶೇಖರ, ಟಿ.ಆರ್., (೨೦೦೫) ಮಹಿಳೆ: ಸಾಮಾಜಿಕ ಮತ್ತು ರಾಜಕೀಯ ಸವಾಲುಗಳು (ಸಂ) ಡಾ. ವಿಜಯಶ್ರೀ ಸಬರದ, ಪ್ರಸಾರಾಂಗ, ಗುಲಬರ್ಗ ವಿಶ್ವವಿದ್ಯಾಲಯ.

೨೪. ಚಂದ್ರಶೇಖರ, ಟಿ.ಆರ್., (೨೦೧೦) ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಭಿವೃದ್ಧಿ/ ತಲಪರಿಗೆ– ಸಂಪಾದಕತ್ವ– ಕೋಟಿಗಾನಹಳ್ಳಿ ರಾಮಯ್ಯ. ಕ ರಾ ಎಸ್.ಸಿ./ಎಸ್.ಟಿ. ಅಭಿವೃದ್ಧಿ ನಿಗಮ, ಬೆಂಗಳೂರು.

೨೫. ಚಂದ್ರಶೇಖರ, (೨೦೧೨), ಭೌಗೋಳಿಕ ಲಕ್ಷಣಗಳು ಲೇಖನ, ಕೊಪಣ ಸಿರಿ, ಕೊಪ್ಪಳ ಜಿಲ್ಲಾ ಅಧ್ಯಯನ, ಕೊಪ್ಪಳ.

೨೬. ಚನ್ನಕ್ಕ ಪಾವಟೆ, (೨೦೦೬), ಶಾಸನಗಳಲ್ಲಿ ಬೃಹತ್ ಕರ್ನಾಟಕದ ಮಹಿಳೆಯರ ಆರ್ಥಿಕ, ಸಾಮಾಜಿಕ ಆಯಾಮಗಳು, ಸಂಪಾದನೆ– ಸಮಾಜ ಸಂಸ್ಕೃತಿ, ಸಾಹಿತ್ಯ ಪ್ರಕಾಶನ, ಹುಬ್ಬಳಿ.

೨೭. ಚಿನ್ನಸ್ವಾಮಿ ಸೊಸಲೆ, (೨೦೧೦), (ಸಂ) ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಸಮಕಾಲೀನ ದಲಿತರು ಎಂಬ ಪುಸ್ತಕದಲ್ಲಿ ಮಲ್ಲಿಕಾ ಘಂಟಿಯವರ "ಅಂಬೇಡ್ಕರ್ ಮತ್ತು ಮಹಿಳೆ," ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಚಿನ್ನಸ್ವಾಮಿ ಸೋಸಲೆ, (೨೦೧೩), ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಚೆನ್ನಮ್ಮ, ಕೆ.ಸಿ., (೨೦೧೦), ಮಹಿಳೆಯ ದುಡಿಮೆ ಏಕರೂಪತೆಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ಛಾಯಾ ದೇಗಾಂವಕರ್, (೨೦೧೦), ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ಮಹಿಳೆ ಎಂಬ ಲೇಖನ.

೩೧. ಜನಾರ್ದನ, (೨೦೦೯), ಅಂಗನವಾಡಿ ಕೇಂದ್ರಗಳು ಗ್ರಾಮೀಣ ಅಭಿವೃದ್ಧಿ, ಮಂಟಪ ಮಾಲೆ, ೧೬೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಜಯಕುಮರ್ ಕೆ. ಮತ್ತು ಭಾರತಿ ಹಾಲ್ದಾರ್, (೨೦೧೦), ಭಾರತದಲ್ಲಿ ವೇಶ್ಯಾವಾಟಿಕೆ; ಸಮಸ್ಯೆಗಳು(ವಿಷಯಗಳು) ಮತ್ತು ಒಲವುಗಳು, ಇಂಟರ್‌ನೆಟ್.

೩೩. ಜವರಯ್ಯ, ಮ.ನ., (೨೦೦೦) ಜಾತಿಸತಿ ಮತ್ತು ಮಹಿಳೆ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೩೪. ಡೊಮಿನಿಕ್, ಡಿ. (೨೦೦೮), ಕನ್ನಡ ಸಾಹಿತ್ಯ–ಸಂಸ್ಕೃತಿ ಏಕರೂಪಿತನದ ಅಪಕಲ್ಪನೆಗಳು, ಎಂಬ ಪುಸ್ತಕದಲ್ಲಿ ಭಿನ್ನತೆಯ ಜಾಡು ಹಿಡಿದು.., ಪ್ರಗತಿ ಪುಸ್ತಕ ಮಾಲೆ ೩೧, ಬೆಂಗಳೂರು.

೩೫. ತಾರಿಣಿ ಶುಭದಾಯಿನಿ, (೨೦೦೯), ನಿರ್ವಸಾಹತೀಕರಣ ಎಂದರೇನು? ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ನಂಜುಂಡಪ್ಪ ಡಿ.ಎಂ., ೨೦೦೨, ಪ್ರಾದೇಶಿಕ ಅಸಮಾನತೆ ಉನ್ನಾಧಿಕಾರ ಸಮಿತಿಯ ವರದಿ, ಕರ್ನಾಟಕ ಸರ್ಕಾರ, ಬೆಂಗಳೂರು.

೩೭. ನೀರಾ ದೇಸಾಯಿ ಮತ್ತು ಉಷಾ ಠಕ್ಕರ್, (೨೦೧೧), ಅವರ ವುಮೆನ್ ಇನ್ ಇಂಡಿಯನ್ ಸೊಸೈಟಿ, ನಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ, ೨೦೦೧.

೩೮. ನೀಲಾ ಕೆ., (೨೦೦೧), ಮಹಿಳೆ-ಶೋಷಣೆಯ ನೆಲೆಗಳು. ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ.

೩೯. ಫಾದರ್ ಕೆಟೆಲ್, (೨೦೦೭), ಅಂಗ್ಲ-ಕನ್ನಡ ಡಿಕ್ಷನರಿ, ಹೊಸ ಮುದ್ರಣ, ಏಷ್ಯನ್ ಎಜುಕೇಶನಲ್ ಸರ್ವಿಸ್, ನ್ಯೂದೆಹಲಿ.

೪೦. ಪುಟ್ಟಯ್ಯ ಬಿ.ಎಂ, (೨೦೧೦), ಜಾತಿ ವಿಶ್ಲೇಷಣೆಯ ಸಮಸ್ಯೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಪ್ರಶಾಂತ ಎಚ್.ಡಿ., (೨೦೦೫), ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಮಂಜುನಾಥ ಅದ್ದೆ, (೨೦೦೮), ಒಡಲ ತುಡಿತಕ್ಕೆ ಕೇಡು-ಹೆಣ್ಣು ಭ್ರೂಣ ಹತ್ಯೆ ಒಂದು ಅಧ್ಯಯನ, ಸ್ತ್ರೀಲೇಖ ಪ್ರಕಟಣೆ, ಬೆಂಗಳೂರು.

೪೩. ಮಂಗ್ಳೂರ ವಿಜಯ (ಸಂಗ್ರಹ), (೨೦೧೦), ನಮ್ಮ ಸಂವಿಧಾನ(ಅತಿ ಸಂಕ್ಷಿಪ್ತದಲ್ಲಿ), ಸಂಬುದ್ಧ ಪ್ರಕಾಶನ, ಬೆಂಗಳೂರು.

೪೪. ಮಧುಕೇಶ್ವರ್, (೧೯೯೬), ಭಾರತದ ಮಹಿಳೆಯರ ಬದುಕು ಮತ್ತು ಹೋರಾಟ, ಸಮತ ಅಧ್ಯಯನ ಕೇಂದ್ರ, ಮೈಸೂರು.

೪೫. ಮನೋರಂಜನಿ, (೨೦೦೯), ದಂಧೆ ಮಾಡುವ ಮಹಿಳೆಯರ ಹೋರಾಟ, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ಮರುಳಸಿದ್ಧಯ್ಯ ಎಚ್.ಎಂ., (೧೯೯೪) (ಸಂಪಾದಕ) ಭಾರತ ಸಮಾಜ ಕಾರ್ಯ ವಿಶ್ವಕೋಶ, ಬಿ.ಅರ್. ಪಾಟೀಲ್ ಅವರ ದೇವದಾಸಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೭. ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ (ಮಾಸ್); (ಲೇಖಕರು), (೨೦೦೮), ಹೀಗೊಂದು ಪಯಣ, ಬೆಳಗಾವಿ.

೪೮. ಮಹಿಳೆ ಮತ್ತು ಆರ್ಥಶಾಸ್ತ್ರದ ರಾಜಕೀಯ (೨೦೦೯), ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಮಾಧವರಾವ್, (೨೦೦೯), ಕಲಾಚೇತನ ಎಂಬ ಸಂಪಾದಿತ ಕೃತಿಯಲ್ಲಿ ಮೂಗೂರು ಜೇಜಮ್ಮ, ಕರ್ನಾಟಕ ಸಂಗೀತ ಮತ್ತು ನೃತ್ಯ ಆಕಾಡೆಮಿ, ಬೆಂಗಳೂರು.

೫೦. ಮೀನಾಕ್ಷಿ, (೨೦೧೦), ನಿರ್ಣಯ ಪ್ರಕ್ರಿಯೆಯಲ್ಲಿ ಚುನಾಯಿತ ಮಹಿಳೆಯರ ಪಾತ್ರ, ಮಂಟಪ ಮಾಲೆ-೧೭೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೧. ಮೂರ್ತಿ ಎನ್., (೨೦೦೦), ಹೋರಾಟದ ಮಹಾಪ್ರಬಂಧ ಸಂಪುಟ-೨, ಕ್ರಿಯಾ ಪ್ರಕಾಶನ, ಬೆಂಗಳೂರು.

೫೨. ಯಮನೂರಪ್ಪ ಅಣ್ಣಿಗೇರಿ, (೨೦೧೦), ಮಹಿಳೆ ಮತ್ತು ಸಮೃದ್ಧಿ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಯಲ್ಲಪ್ಪ ತಾಯಪ್ಪ, (೨೦೧೬), ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೪. ಯುಎನ್‌ಡಿಪಿ, (೧೯೯೦), ಹ್ಯುಮನ್ ಡೆವಲಪ್‌ಮೆಂಟ್ ರಿಪೋರ್ಟ್, ಒಯುಪಿ, ನ್ಯೂಯಾರ್ಕ್.

೫೫. ರಾಮಚಂದ್ರನ್, (೨೦೦೨), ವಸಾಹತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೬. ರೂಪ ಹಾಸನ, (೨೦೧೦), ಮಹಿಳೆ ಮತ್ತು ಅಧುನಿಕತೆಯ ಸವಾಲುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ವಾಲಿಕಾರ ಚನ್ನಣ್ಣ, (೧೯೯೮), ಹೈದಾರಬಾದ್ ಕರ್ನಾಟಕ ಪ್ರದೇಶದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ದಲಿತ ಬಂಡಾಯ ಸಾಹಿತ್ಯ, ಪ್ರಕಾಶನ, ಮೈಸೂರು.

೫೮. ವೀಣಾ ಸಂಕನಗೌಡರ, (೧೯೯೪), ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯. ಶೆಟ್ಟರ, (೨೦೦೬), ಕರ್ನಾಟಕದಲ್ಲಿನ ಮಹಿಳೆಯರ ಆರೋಗ್ಯದ ಸ್ಥಿತಿಗತಿ, ಸಮಸ್ಯೆಗಳು ಹಾಗೂ ಭವಿಷ್ಯದ ಅಗತ್ಯಗಳು, ಸಂಪಾದನೆ- ಸಮಾಜ ಸಂಸ್ಕೃತಿ, ಸಾಹಿತ್ಯ ಪ್ರಕಾಶನ, ಹುಬ್ಬಳಿ.

೬೦. ಶೇಷಾದ್ರಿ ಬಿ., (೧೯೯೯), ಮಹಿಳೆಯರ ದುಸ್ಥಿತಿ ಮತ್ತು ಸಬಲೀಕರಣ: ಕೆಲವು ಟಿಪ್ಪಣಿಗಳು ಎಂಬ ಲೇಖನ.

೬೧. ಶೈಲಜಾ ಹಿರೆಮಠ, (೧೯೯೯), ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೨. ಶೈಲಜಾ ಹಿರೇಮಠ, (೨೦೧೧), ಹರದೇಶಿ–ನಾಗೇಶಿ: ಕಲೆ ಮತ್ತು ಕಲಾವಿದರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೩. ಸಿಮಾನ್ ದಿ ಬೋವಾ, (೨೦೦೭), (ಅನು) ಡಾ. ಎಚ್.ಎಸ್. ಶ್ರೀಮತಿ, ದ ಸೆಕೆಂಡ್ಸ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು.

೬೪. ಸಿದ್ಧಗಂಗಮ್ಮ, (೨೦೦೫), ಕರ್ನಾಟಕದಲ್ಲಿ ಮಹಿಳೆ ಮತ್ತು ಮಕ್ಕಳ ಆರೋಗ್ಯ ಸ್ಥಿತಿಗತಿ ಅಭಿವೃದ್ಧಿ ಅಧ್ಯಯನ ಸಂ–೧, ಸಂ–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ಸಿದ್ಧಗಂಗಮ್ಮ, (೨೦೦೬), ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ, ಅಭಿವೃದ್ಧಿ ಅಧ್ಯಯನ ಸಂ–೫, ಸಂ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಸುಧಾ, (೨೦೧೦), ಮಹಿಳಾ ಅಧ್ಯಯನ–ಸಮಾಜಶಾಸ್ತ್ರೀಯ ದೃಷ್ಟಿಕೋನ, ಸ್ತ್ರೀಲೇಖ ಪ್ರಕಟಣೆ, ಬೆಂಗಳೂರು.

೬೭. ಸುನಂದಮ್ಮ ಆರ್., (೨೦೧೭), ಮಹಿಳೆ–ಕಾನೂನು–ಪರಿಹಾರ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೬೮. ಹಕ್, ಉಲ್–ಮೆಹಬೂಬ್, ೧೯೯೭, ಹ್ಯುಮನ್ ಡೆವಲಪ್‌ಮೆಂಟ್ ಇನ್ ಸೌತ್ ಏಷಿಯಾನ್, ಒಯುಪಿ, ದೆಹಲಿ.

೬೯. ಹನುಮಂತ ಹಾಲಿಗೇರಿಯವರ ವೇಶ್ಯಾಜಗತ್ತಿನ ಅನಾವರಣ ಕೆಂಗುಲಾಬಿ ಎಂಬ ಕಾದಂಬರಿ.

೭೦. ಹರಿಶ್ಚಂದ್ರ ದಿಗ್ಸಂಗಿಕರ್, (೨೦೦೫), ದಲಿತ ಮಹಿಳೆ, ದಲಿತರು ಮತ್ತು ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**೨. ಇಂಗ್ಲಿಷ್ ಪುಸ್ತಕಗಳು**

1. Amarty Sen, 1981, poverty and feminies; an essay on entitlement and deprivtation,Oxford, internet.

2. Ananda ,Sudhir,(1994), Population, well being and freedom, Harvard, Centre, Boston.

3. Devadasi Rehabilitation. Council for social Development, Hyderabad, 1990

4. Devadasi Rehabilitation Programmes (DRP) Karnataka, KSWDC, Bangalore, 2016.

5. Dre'ze Jean and Sen, Amarty, (ed), 1996, Indian Development; selected Regional perspectives, OUP, Dehli.

6. Haq, Ul-Mahbub, (1996), Reflections on Human Development, OUP, Delhi.

7. Jayakumar and Debharati Haldar, (2005), "Prostitution in India; issues and trends" website.

1. Karnataka Human Development Report, (1999), Planning Department, Govt of Karnataka, Bangalore.

2. Karnataka Human Development Report, 1999, Planning Department, Govt of Karnataka, Bangalore.

3. Krishnaji, 1997, Poverty, Gender and schooling; A study of Maboobnagara and adilabad Dists for UNDP-GOI research programe on Human Development.

4. Lauren Beth Jocobs, Sexual exploitation and the Devadasis traditions in south india, 2009.

5. Manjula pradip, Forced prostitution in name of God, article, Ahmadabad, 2005.

6. Maggie Black,(2007), Ritual Slavery, Anti Slavery International.

7. Naseem Banu Khalasi, 2008, "Muslim Women in Slum" A Sociological Study, Ph.D. theses, Karnataka University, Darwad.

8. Population Foundation of India, (1998), State of India's Population, New Delhi

9. Seshadri B, 1997, Industrial Development of North Karnataka: an inquiry into its dynamics, paper presented at Karnataka university, Dharwar.

10. Teena Rae Orchard, Girl, women, lover, mother, towards a new understanding of child Devadasis in Rural Karnataka, centre for excellence in HIV/AIDS, Canada,2007.

11. Teena Rae Orchard, The impact of Gender and Tradition on sexuality and Relationship for Devadasis, sex worker in rural india, sexuality and culture Vol 11, London, 2007.

12. Vani B.P., Vinod and Vyasulu,1997, Development and Deprivation in Karnataka: A District level study, EPW, Vol.32, No.46.

13. UNDP,(1990-99), Human Development Report , OUP, Newyork

14. Zoya Zaidi, Devadasis system in Indian temples, Aligarh UP, 2005.

15. Zoya Zaidi,(2005), Devadasis system in Indian temples, Aligarh UP.

**ಸಂಶೋಧನಾ ಪ್ರಬಂಧಗಳು ಮತ್ತು ವರದಿಗಳು**

೧. ಅರ್ಚನಾ ಹಿರೇಮಠ, ೨೦೧೭, ನಗರ ಸಂಸ್ಥೆಗಳಲ್ಲಿ ಮಹಿಳಾ ಪ್ರಾತಿನಿಧ್ಯ, ಪಿಎಚ್.ಡಿ, ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಕೃಷ್ಣ ಜೆ., (೨೦೦೦), ಮಾನವ ಅಭಿವೃದ್ಧಿಯ ಪ್ರಾದೇಶಿಕ ಅಯಾಮಗಳ ಅಧ್ಯಯನ, ಪಿಎಚ್,.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಕೊಟ್ಲಮ್ಮ (೨೦೦೭), ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ, ಪಿಎಚ್.ಡಿ. ಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಗುರುಮೂರ್ತಿ ಕೆ.ಜಿ., (೧೯೯೬), ಧರ್ಮ ಮತ್ತು ರಾಜಕೀಯ ಎಂಬ ಸಂಶೋಧನ ಪ್ರಬಂಧದ, ವಿಮೋಚನಾ ಪ್ರಕಾಶನ, ಅಥಣಿ.

೫. ಗುರುಮೂರ್ತಿ, (೧೯೯೫), ಹರಕೆಯ ಹೆಣ್ಣು, ವಿಮೋಚನಾ ಪ್ರಕಾಶನ, ಅಥಣಿ.

೬. ಚಂದ್ರಶೇಖರ ಎಚ್.ಆರ್. (೨೦೧೧), ಕೊಪ್ಪಳ ಜಿಲ್ಲೆಯ ದೇವದಾಸಿಯರ ಸ್ಥಿತಿಗತಿಗಳ ಅಧ್ಯಯನದ ವರದಿ (ಅಪ್ರಕಟಿತ ಕ್ರಿಯಾತ್ಮಕ ಸಂಶೋಧನಾ ವರದಿ) ದಲಿತ್ ಫೌಂಡೇಷನ್.ದೆಹಲಿ.

೭. ನೇತ್ರಾವತಿ ಕೆ.ವಿ., ೨೦೧೦, ದಲಿತ ಮಹಿಳಾ ಸಂಕಥನ, ಪಿಎಚ್.ಡಿ. ಮಹಾಪ್ರಬಂಧ.

೮. ತಾರಾದೇವಿ ಪಿ.ಆರ್., (೨೦೦೬), ಬೆಳಗಾವಿ ಜಿಲ್ಲೆಯ ದೇವದಾಸಿಯರ ಪುನರ್ವಸತಿ ಒಂದು ಅಧ್ಯಯನ" ಪಿಎಚ್.ಡಿ. ಪ್ರಬಂಧ, ಮಾನವಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೯. ಪ್ರಸನ್ನ ಕುಮಾರ್, (೨೦೧೪), ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು; ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಬೆಳಗಾವಿ ಜಿಲ್ಲೆ ಅನುಲಕ್ಷಿಸಿ, ಪಿಎಚ್.ಡಿ. ಪ್ರಬಂಧ, ಮಾನವಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೧೦. ಯರ್ರಿಸ್ವಾಮಿ, ೨೦೧೫, ಮಹಿಳೆ ಮತ್ತು ಜಾತಿಶ್ರೇಣೀಕರಣ, ಅಂಬೇಡ್ಕರ್ ದೃಷ್ಟಿಕೋನ, ಪಿಎಚ್.ಡಿ. ಪ್ರಬಂಧ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ.

೧೧. ಯಲ್ಲಪ್ಪ ತಾಯಪ್ಪ, (೨೦೧೬), ಅಭಿವೃದ್ಧಿ ಮತ್ತು ದುಸ್ಥಿತಿಯ ನೆಲೆಗಳು; ರಾಯಚೂರು ಅನುಲಕ್ಷಿಸಿ, ಪಿಎಚ್.ಡಿ, ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಲೀಲಾ ಸಂಪಿಗೆ, (೨೦೦೦), ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು ಎಂಬ ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ವಸಂತಕುಮಾರ, (೨೦೦೨), ಬಸ್ರೂರಿನ ದೇವದಾಸಿ ಪದ್ಧತಿ, ಎಂ.ಫಿಲ್., ಸಂಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ವಿವೇಕಾನಂದ ನಡೋಣಿ, (೨೦೦೭), ದೇವದಾಸಿ ಪುನರ್ವಸತಿ ಒಂದು ಸಮಾಜಶಾಸ್ತ್ರಿಯ ಅಧ್ಯಯನ" ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ.

೧೫. ಶಾಂತಾ ಭಂಗಾರಿ,(೨೦೦೮), "ಸ್ಟೇಟಸ್ ಆಫ್ ವಿಡೋಸ್ ಇನ್ ರೂರಲ್ ಇಂಡಿಯಾ", ಒಂದು ಸಮಾಜಶಾಸ್ತ್ರೀಯ ಅಧ್ಯಯನ,

೧೬. ಸಂಗೀತ ಗಾಂವಕರ, (೨೦೦೯), ಹಾಲಕ್ಕಿ ಮಹಿಳೆಯರ ಸಾಮಾಜಿಕ, ಆರ್ಥಿಕ ಪರಿವರ್ತನೆಯ ನೆಲೆಗಳು ಒಂದು ಅಧ್ಯಯನ, ಪಿಎಚ್.ಡಿ. ಪ್ರಬಂಧ, ಅಭಿವೃದ್ಧಿ ಅದ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೭. ಸಂಜೀವ್ ಕುಮಾರ್ ನಿರ್ಮಲ್ಕಾರ್, (೨೦೦೮), ಹೈದರಾಬಾದ್ ಕರ್ನಾಟಕದಲ್ಲಿ ದೇವದಾಸಿ ಪದ್ಧತಿ, ಪಿಎಚ್.ಡಿ. ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೮. ಸಂಗೀತ ಗಾಂವಕರ, (೨೦೦೯), ಹಾಲಕ್ಕಿ ಮಹಿಳೆಯರ ಸಾಮಾಜಿಕ, ಆರ್ಥಿಕ ಪರಿವರ್ತನೆಯ ನೆಲೆಗಳು ಒಂದು ಅಧ್ಯಯನ, ಪಿಎಚ್.ಡಿ. ಪ್ರಬಂಧ, ಅಭಿವೃದ್ಧಿ ಅದ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

19. Bangari Shantha, (2004)" A Status of widows in rural India" A sociological study, Ph.D. Theses, Karnataka University, Darwad.

20. Kamble N.D., (1988), Devadasis in Belgaum Dist: A Sociological study, Ph.D. Thesis, Shivaji University, Khollapur.

21. Naseem Banu Khalasi, (2008), "Muslim women in Slum" A Sociological Study, Ph.D. Theses, Karnataka University, Darwad.

22. Shankar Jogan,(1988), Determinants of Persistence and Continuity of Devadasi Cult: A Sociological Study Ph.D. Theses, Karnataka university, Darawad.

23. Tarachand K.C., (1987), Women in Sacred Prostitution: A study of Devadasi custom, Ph.D. These of Anthropology, Karnataka university, Darawad.

ನಿಯತಕಾಲಿಕೆಗಳು

೧. ಆನಂದಿ ಎಸ್., (೨೦೧೩), ಮಾತಮ್ಮ, ಜೆಂಡರ್, ಕ್ಯಾಸ್ಟ್, ಅಂಡ್ ಪಾಲಿಟಿಕ್ಸ್ ಆಫ್ ಇಂಟರ್‌ಸೆಕ್ಷುವಾನಾಲಿಟಿ ಇನ್ ರೂರಲ್ ತಮಿಳುನಾಡು, ಇ.ಪಿ.ಡಬ್ಲ್ಯು, ಮೇ ೪, ವ್ಯಾಲ್ಯುಂ-XLVIII No 18.

೨. ಆನಂದಿ ಎಸ್., (೨೦೧೩), ರಿಮೆಂಬರಿಂಗ್ ಲಕ್ಷ್ಮಿ ದೇವಿ", ಇ.ಪಿ.ಡಬ್ಲ್ಯು, ಮಾರ್ಚ್ ೧೬, ವ್ಯಾಲ್ಯುಂ-XLVIII No 11

೩. ಅನಗಾ ತಂಬೆ, (೨೦೦೯), ರೀಡಿಂಗ್ ದೇವದಾಸಿ ಪ್ರಾಕ್ಟೀಸ್ ತ್ರೂ ಪಾಪುಲರ್ ಮರಾಠಿ ಲಿಟರೇಚರ್ ಇ.ಪಿ.ಡಬ್ಲ್ಯು, Vol-XLIV No. 17, April 25.

೪. ಅನುಸೂಯ ಕಾಂಬಳೆ, (೨೦೧೨), ದಲಿತ ಮಹಿಳೆ ಸಮಸ್ಯೆಗಳು ಸವಾಲುಗಳು, ಸಂವಾದ ಪತ್ರಿಕೆ, ಏಪ್ರಿಲ್, ಬೆಂಗಳೂರು.

೧. ಕಲ್ಪನಾ ಕಣ್ಣಬೀರನ್, (೧೯೯೫), ಜುಡೀಸರೀ, ಸೋಶಿಯಲ್ ರೀಫಾರ್ಮ್ ಅಂಡ್ ಡಿಬೇಟ್ ಆನ್ ರಿಲೀಜಿಯಸ್ ಪ್ರಾಸ್ಟಿಟ್ಯೂಷನ್ ಇನ್ ಕಲೊನಿಯಲ್, Vol-XXX No. 43, October ೨೮.

೨. ಚಂದ್ರ ಪೂಜಾರಿ ಎಂ, (೨೦೧೪), ಅಭಿವೃದ್ಧಿ ಮತ್ತು ರಾಜಕೀಯ, ಯೋಜನಾ ಸಂಚಿಕೆ-೯, ಸಂಪುಟ ೨೯, ಏಪ್ರಿಲ್, ಕೇಂದ್ರೀಯ ಸದನ, ಬೆಂಗಳೂರು.

೩. ದಿ ದೇವದಾಸಿ ಆಫ್ ಕುಡುತಣಿ ವಿಲ್ಲೇಜ್: ಎ ವಿಕ್ಟಿಮ್ ಆಫ್ ಡಿಜನರೇಟೆಡ್ ಕಲ್ಚರ್. ಇಂಟ್‌ನೆಟ್.

೪. ಪ್ರತಿಭಾ ಬಿ ದೇಸಾಯಿ, (೨೦೧೨), ಕ್ಯಾಸ್ಟ್ ಅಂಡ್ ಪೇಟ್ರಿಯಾರ್ಕಿ ಅಂಡ್ ಎಕ್ಸ್‌ಪ್ಲೋಯ್ಟೇಷನ್ ಆಫ್ ಷೆಡ್ಯುಲ್ ವುಮೆನ್ಸ್, ಇಂಟರ್ ನ್ಯಾಷನಲ್ ಜರ್ನಲ್ ಆಫ್ ಸೋಸಿಯಲ್ ಸೈನ್ಸ್ ಅಂಡ್ ಇಂಟರ್ ಡಿಸಿಪ್ಲಿನರಿ ರೀಸರ್ಚ್, ವ್ಯಾಲ್ಯುಂ-೧ ನ ೬,

೫. ಬಾರ್ನ್ ಟು ಬಿ ಡೂಮ್ಡ್, (೨೦೧೫), ಕಭೀರ್ ಶರ್ಮ, ದಲಿತ್ ಕ್ರೈ, ದಲಿತ್ ನ್ಯೂಸ್.

೬. ವಿಠೋಭಾ ಬಿ., ಡಾ. ಶ್ರಿಕಾಂತ, (೨೦೧೧), ಜಾಗತೀಕರಣ ಮತ್ತು ಮಹಿಳಾ ಶೋಷಣೆ, ಸಂವಾದ ಮಾಸಿಕ ಪತ್ರಿಕೆ, ಬೆಂಗಳೂರು.

೭. ವಾಣಿ ರಾಮದಾಸ್, (೧೯೭೦), ದೇವದಾಸಿ: ದೇವರ ಹೆಸರಲ್ಲೊಂದು ಅವ್ಯವಹಾರ, ಸಿಟಿಜನ್ ಜರ್ನಲಿಸಂ.

೮. ಶಾರದ ಲಹಂಗಿರ್, (೨೦೧೨), ದಿ ಲಾಸ್ಟ್ ವೈವ್ಸ್ ಆಫ್ ದಿ ಲಾರ್ಡ್, ಡೆಕ್ಕನ್ ಹೆರಾಲ್ಡ್, ಆಗಸ್ಟ್ ೪ನೇ ತಾರೀಕು, ಶನಿವಾರ.

9. Amrit Srinivasan, (1985), Reform and Revival: The Devadasis and her dance, EPW Vol 20.

10. Saskia C, (1987), Nityasumanagali: Devadasis Tradition in South India, Published by Motilal, Dehli.

**ಪತ್ರಿಕೆಗಳು**

೧. ದೇವದಾಸಿ ಪದ್ಧತಿ ಇನ್ನೂ ಜೀವಂತ, (೨೦೧೨), ವಿಜಯ ಕರ್ನಾಟಕ, ಸುದ್ದಿಲೋಕ, ಅಕ್ಟೋಬರ್ ತಿಂಗಳ ವಿಶೇಷ ಲೇಖನ.

೨. ದೇವದಾಸಿ ಪದ್ಧತಿ: ಕಠಿಣ ಕ್ರಮ ಅಗತ್ಯ, ಸಂಪಾದಕೀಯ ಲೇಖನ, ವಿಜಯ ಕರ್ನಾಟಕ, ದಿನಾಂಕ ೧೯/೨/೨೦೧೪ನೆಯ ಬುಧವಾರ.

೩. ಹಿಂಗಬೇಕಿದೆ ಮನದ ಸೂತಕ, (೨೦೧೫) ಕೆ. ನೀಲಾ, ವಿಜಯ ಕರ್ನಾಟಕ ವಿಶೇಷ ಲೇಖನ.

**ವೆಬ್‌ಸೈಟ್ / ಅಂತರ್ಜಾಲ**

೧. ಅಭಿವೃದ್ಧಿ ಪರಿಕಲ್ಪನೆ ಮತ್ತು ವಿವಿಧ ರೀತಿಯ ವ್ಯಾಖ್ಯಾನಗಳು, (೨೦೦೯), ವಿಕೀಪಿಡೀಯ, ಅಂತರ್ಜಾಲ ಸಹಾಯದಿಂದ.

೨. ಅಧಿನಿಕ ಸಮಾಜದ ಕರಾಳ ಮುಖ- ಬಾಲ ದೇವದಾಸಿಯರು, (೨೦೦೭), ಅಂತರ್ಜಾಲ.

೩. ಅಶ್ವಿನಿ ವೈ.ಎಸ್., ನಿಸ್ಕೀಮ್ಸ್ ಫ್ಯೆಲ್ ಟು ಕ್ರಬ್ ದಿ ದೇವದಾಸಿ ಪ್ರಾಕ್ಟೀಸ್,

೪. ಎವೆಲ್ಯೂಷನ್ ಆಫ್ ದಿ ದೇವದಾಸಿ ಸಿಸ್ಟಮ್, ವೀಕೀ ಜೆಂಡರ್, ಇಂಟರ್ನೆಟ್. ಈ ಅಂತರ್ಜಾಲದ ಲೇಖನ.

೫. ಕೇಶವ ಪ್ರಸಾದ್ ಬಿ., (೨೦೦೭). ಕಿದೂರು, ದೇವದಾಸಿ, ಅಂತರ್ಜಾಲ.

೬. ಜಮನ್ದಾಸ್ ಅವರ ದೇವದಾಸಿ ವರ್ ಡೀಗ್ರೇಡೆಡ್ ಬುದ್ಧಿಸ್ಟ್ ನನ್ಸ್, ಅಂತರ್ಜಾಲ, ಡಾ. ಅಂಬೇಡ್ಕರ್. ಕಾಮ್

೭. ಜೋತ್ಸ್ನಾ ಕಾಮತ್, ೨೦೦೪-೧೪), ತಮ್ಮ ಸಂಶೋಧನಾ ಲೇಖನವಾದ ದೇವದಾಸಿ: ಸರ್ವೆಂಟ್ ಆಫ್ ಗಾಡ್, ಅಂತರ್ಜಾಲ.

೮. ಬ್ಯುಸಿನೆಸ್ ಶಬ್ದಕೋಶದಲ್ಲಿ ಅಭಿವೃದ್ಧಿಯ ೪ ವ್ಯಾಖ್ಯಾನಗಳು, ಅಂತರ್ಜಾಲ ಸಹಾಯ.

೯. ರೋಹಿಣಿ ಬಿ.ಎಮ್., (೨೦೦೪) ನಮಗೂ ಬೇಕು ನಿಮ್ಮಂಥ ಬದುಕು, ಹೊಸ ದಿಗಂತ, ಅಂತರ್ಜಾಲ.

೧೦. ವಿಕೀಪಿಡೀಯದಲ್ಲಿ ದೇವದಾಸಿ ಪದದ ಅರ್ಥ, ಎವಲ್ಯೂಷನ್ ಆಫ್ ದೇವದಾಸಿ ಸಿಸ್ಟಮ್ ಅಂತರ್ಜಾಲ ಸಹಾಯ.

೧೧. ಶಮಂತ ಚಟ್ಟೋರಾಜ್, (೨೦೦೧), ದೇವದಾಸಿ ಪದ್ಧತಿಯ ಉಗಮ ಮತ್ತು ಬೆಳವಣಿಗೆ.

12. Anil Chawla, (2002), Devadasis- An attempt to look at the Myth and reality of history and present status of Devadasis, www.samartabharat.com 2002.

13. Brahmins and Devadasis, (2009), website.

14. Jamanadas, (2000), Devadasis were Degraded Buddhist nuns, www.Dr.ambedkar.org.

15. Karnataka Devadasis (prohibition of dedication) act 1982.

16. K. jayakumar and Debharati Haldar, (2005), "Prostitution in India; issues and trends" website.

17. Koustubaa, (2006), The problem of prostitution on Indian perspective, website.

18. Karuna Sharma, (2007), The social world of prostitutes and Devadasis: A study of the social structure and its politics in early modern india, Journal of international women's studies, Vol-9.

19. Maria Costanza Torri, Abuse of lower castes in india: the institution od Devadasi, website.

20. Maggie Black, (2007), Ritual Slavery, Anti Slavery International.

21. New jobs in the city: Maid servants and prostitutes, women's work in colonial India. Website.

**ಗುಂಪಿನ ಮತ್ತು ವ್ಯಕ್ತಿಗಳೊಂದಿಗೆ ಅಧ್ಯಯನದ ವಿಷಯದ ಬಗ್ಗೆ ಚರ್ಚೆ**

೧. ಅಭಿವೃದ್ಧಿ ಅಧ್ಯಯನ ವಿಭಾಗದ ಎಲ್ಲಾ ಅಧ್ಯಾಪಕರೊಂದಿಗೆ ಅಧ್ಯಯನದ ಬಗ್ಗೆ ಸಂದರ್ಭಕ್ಕನುಗುಣವಾಗಿ ಚರ್ಚೆ.

೨. ಆಂಟೋನಿ, ೨೦೧೨ ಅಂತ್ಯೋದಯ ಸೇವಾ ಸಂಸ್ಥೆ, ಮುಧೋಳ.

೩. ಕೊಪ್ಪಳ ತಾಲ್ಲೂಕಿನ ಹಿರೆಸಿಂಧೋಗಿಯಲ್ಲಿ, ಅಳವಂಡಿ, ಬೋಚನಹಳ್ಳಿ ಮತ್ತು ವದಗನಾಳ ಗ್ರಾಮಗಳಲ್ಲಿ ಹಿರಿಯ ಮತ್ತು ಕಿರಿಯ ದೇವದಾಸಿಯರೊಟ್ಟಿಗೆ ಗುಂಪುಚರ್ಚೆ.(೨೦೧೧-೧೪)

೪. ಕೊಪ್ಪಳ ತಾಲ್ಲೂಕಿನ ಕೌಲೂರು, ಬೇಳೂರು, ಘಟ್ಟಿರೆಡ್ಡಿಹಾಳ, ರಘುನಾಥನಹಳ್ಳಿ ಗ್ರಾಮಗಳಲ್ಲಿ ಹಿರಿಯ ಮತ್ತು ಕಿರಿಯ ದೇವದಾಸಿಯರೊಟ್ಟಿಗೆ ಗುಂಪುಚರ್ಚೆ.(೨೦೧೧-೧೨)

೫. ಗೋಪಾಲ ನಾಯ್ಕ, ದಾದ ಸಾಬ್, (೨೦೧೬-೧೪), ಕೊಪ್ಪಳ ಜಿಲ್ಲಾ ದೇವದಾಸಿ ಪುನರ್ವಸತಿ ಯೋಜನೆ ಕಛೇರಿ, ಕೊಪ್ಪಳ.

೬. ಜೋಗನ್ ಶಂಕರ್, (೨೦೧೨), ಹಿರಿಯ ಸಮಾಜಶಾಸ್ತ್ರಜ್ಞರು, ಕುಲಪತಿಗಳು, ಕುವೆಂಪು ವಿಶ್ವವಿದ್ಯಾಲಯ (ಮೊಬೈಲ್ ಮೂಲಕ ಸಂಕ್ಷಿಪ್ತ ಚರ್ಚೆ).

೭. ಪಾರ್ಥಸಾರಥಿ, ೨೦೧೪, ಗೌತಮ ಅಭಿವೃದ್ಧಿ ಸೇವಾ ಸಂಸ್ಥೆ, ಮುಧೋಳ.

**ಅಧ್ಯಯನದ ಪ್ರವಾಸ, ರಾಜ್ಯ, ರಾಷ್ಟ್ರ ಮಟ್ಟದ ಸಮಾವೇಶ, ಸೆಮಿನಾರ್, ದುಂಡುಮೇಜಿನ ಸಮ್ಮೇಳನ**

೧. ದಿನಾಂಕ ೧೫ ಮತ್ತು ೧೬ರಂದು ನಡೆದ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ರಾಷ್ಟ್ರ ಮಟ್ಟದ ದುಂಡುಮೇಜಿನ ಸಮಾವೇಶ. ಬೆಂಗಳೂರು. (೨೦೧೪)

೨. ದಿನಾಂಕ ೧೯, ೨೦ ಮತ್ತು ೨೧ ಮಾರ್ಚ್ ೨೦೧೩ರಲ್ಲಿ ಕನ್ನಡ ವಿಶ್ವವಿದ್ಯಾಲದ ಅಭಿವೃದ್ಧಿ ಅಧ್ಯಯನ ವಿಭಾಗವು ಹಾಗೂ ಶ್ರೀ ಧರ್ಮಸ್ಥಳ ಕಾಲೇಜುಗಳ ಸಹಯೋಗದೊಂದಿಗೆ "ಹಕ್ಕಿನ ಪರಿಭಾಷೆಯಲ್ಲಿ ಅಭಿವೃದ್ಧಿ" ಎಂಬ ಮೂರು ದಿನಗಳ ಕಾರ್ಯಾಗಾರ.

೩. ನವೆಂಬರ್ ೨೪-೨೫ರಂದು ರಾಷ್ಟ್ರಮಟ್ಟದ ದೇವದಾಸಿಯರ ನಾಯಕತ್ವ ಕುರಿತ ಕಾರ್ಯಾಗಾರ, ಎಂಪವಮೆಂಟ್ ಅಂಡ್ ಎನ್ಟೈಟಲ್ಮೆಂಟ್ ಕೊಯಿಲೇಷನ್ ಮತ್ತು ದಲಿತ್ ಫೌಂಡೇಶನ್ ದೆಹಲಿ ಇವರ ಸಹಯೋಗ, ಬೆಂಗಳೂರು.

೪. ದಿನಾಂಕ ೨೯-೩೦ ಜೂನ್, ೨೦೧೫ ತಿರುಪತಿಯಲ್ಲಿ ರಾಷ್ಟ್ರಮಟ್ಟದ ಸಮಾಲೋಚನೆ ಸಭೆಯಲ್ಲಿ ಭಾಗವಹಿಸಲಾಗಿದೆ.

೫. ರಾಜಸ್ಥಾನಕ್ಕೆ ಅಧ್ಯಯನದ ಪ್ರವಾಸ ದಲಿತ್ ಫೌಂಡೇಷನ್ ಅವರ ಕಾರ್ಯಕರ್ತರೊಂದಿಗೆ ಫೆಬ್ರವರಿ ೨೦೧೬.

